|| ಶ್ರೀಮನ್ಮೂಲರಾಮೋ ವಿಜಯತೇ ||     ಭಾಗ-5     || ಶ್ರೀ ಗುರುರಾಜೋ ವಿಜಯತೇ ||

## ಸತ್ತರ್ಕದೀಪಾವಳಿ   ತತ್ತ್ವಪ್ರಕಾಶಿಕಾ   ತತ್ತ್ವಪ್ರದೀಪ

# ಭಾವದೀಪ



ಅಧ್ಯಕ್ಷರು :

ಪರಮಪೂಜ್ಯ || ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ|| ರಾಜಾ ಎಸ್. ಗಿರಿ ಆಚಾರ್ಯ

ಸಂಪಾದನೆ ಮತ್ತು ಅನುವಾದ :
ವಿ|| ಬೆಮ್ಮತ್ತಿ ವೇಂಕಟೇಶಾಚಾರ್ಯ

|| ಶ್ರೀಮನ್ಮೂಲರಾಮೋ ವಿಜಯತೇ ||  || ಶ್ರೀ ಗುರುರಾಜೋ ವಿಜಯತೇ ||

ಭಾಗ - ೫

ಶ್ರೀಪದ್ಮನಾಭತೀರ್ಥಮುನಿ-ವಿರಚಿತ
# ಸತ್ತರ್ಕದೀಪಾವಳಿ

ಶ್ರೀತ್ರಿವಿಕ್ರಮಪಂಡಿತಾಚಾರ್ಯ-ವಿರಚಿತ
# ತತ್ವಪ್ರದೀಪ

ಶ್ರೀಜಯತೀರ್ಥಮುನಿ-ವಿರಚಿತ
## ತತ್ವಪ್ರಕಾಶಿಕಾ

# ಭಾವದೀಪ

ಶ್ರೀವೇದವ್ಯಾಸರ ಬ್ರಹ್ಮಸೂತ್ರ, ಶ್ರೀಮಧ್ವಾಚಾರ್ಯರ ಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಟೀಕೆಗಳೊಂದಿಗೆ
ಶ್ರೀಮಂತ್ರಾಲಯಪ್ರಭುಗಳ ಭಾವದೀಪ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

ವಿಶೇಷವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

॥

'ಭಾವದೀಪ' : ಮನ್ಮಥ॥ ಶ್ರಾವಣ ॥ಬಹುಳ ॥ ದ್ವಿತೀಯಾ (ದಿನಾಂಕ : ೩೧-೮-೨೦೧೫) ಶ್ರೀರಾಘವೇಂದ್ರಸ್ವಾಮಿಗಳ ಮಧ್ಯಾರಾಧನೆಯಂದು ಮಂತ್ರಾಲಯ ಕ್ಷೇತ್ರದಲ್ಲಿ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.


| | | |
|---|---|---|
| ಪ್ರಕಾಶನ | : | ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : | ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು. |
| ಪ್ರಥಮಮುದ್ರಣ | : | 2015 |
| ಪುಟಗಳು | : | 704 |
| ಬೆಲೆ | : | 600 ರೂ |
| ಪ್ರತಿಗಳು | : | 1000 |







ಅಕ್ಷರಜೋಡಣೆ :

ಶ್ರೀಮತಿ ಎಸ್. ನಾಗಲತಾ
ಶ್ರೀ ಬೆಮ್ಮತ್ತಿ ಶ್ರೀನಿವಾಸ

ಮುಖಪುಟ ವಿನ್ಯಾಸ :
ಕೆ. ಗಿರಿ, ಚಿತ್ರ - ಸ್ಕಂದ

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

Vol. - 5

SRI PADMANABHATIRTHAMUNI'S SATTARKADIPAVALI

SRI TRIVIKRMAPANDITAACHARYA'S TATVAPRADIPA

SRIJAYATIRTHAMUNI'S TATVAPRAKAASHIKAA

# BHAVADIPA

## Sri Vedavyasa's Brahmasutra, Sri Madhvacharya's Bhashya, Teekas - Sattarkadipawali, Tatvapradipa, Tatvaprakaashikaa

**Bhavadipa by Sri Mantrayala Prabhu**

**Sanskrit Original Text with Kannada Translation**

**with special debate from many commentaries & overall critisism**

**Published by :**

**Sri Gurusarvabhouma Samshodhana Mandira,**

Jagadguru Srimanmadhvacharya Mula Mahasamsthana,

Sri Raghavendraswamy Mutt, Mantralayam - 518 345 A.P.

'BHAVADIPA' : HH Sri Sri Subhudendra Thirta sripada has submitted this 5th volume to Sri Raghavendraswamiji at Mantralaya.

Publication : Sri Gurusarvabhouma Sanshodhana Mandira, Jagadguru Srimanmadhvacharya Mula Mahasamsthana, Sri Raghavendraswamy mutt, Mantralayam. A.P.

Edited & Translated by : Vidwan Bemmatti Venkateshacharya, Bangalore.

First Edition : 2015

Pages : 704

Price : Rs. 600

Copies : 1000





Type set :

Smt. S. Nagalatha, Bangalore.
Sri Bemmatti Srinivasa

Printed at :

Muktipatha Mudranalaya, Bangalore.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

## ಬ್ರಹ್ಮಸೂತ್ರ ಭಾಷ್ಯ

## ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ

* * * *

ಅಧ್ಯಕ್ಷರು :
ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು
ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ॥ ರಾಜಾ ಎಸ್. ಗಿರಿಆಚಾರ್ಯ
ಮಂತ್ರಾಲಯ

ಸಂಪಾದನೆ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

**Brahmasutra Bhashya**

**Sattrakadipavali Tatvapradipa**

**Tatvaprakaashikaa**

# BHAVADIPA

******

**President:**

**HH Sri Subhudhendratirtha Sripadaru**

**Peetadhipati of Sri Raghavendraswamy Mutt, Mantralayam.**

**Honorary Editor:**

**Sri Vidwan Raja S. Giri Acharya**

**Mantralayam.**

**Edited & Translated by :**

**Vidwan Bemmatti Venkateshacharya,**

**Bangalore.**

ಐದನೆಯ

# ವಾಙ್ಮಯ-ಕುಸುಮಹಾರ

## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಈ ಕೃತಿಯನ್ನು ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮನ್ಮಧ್ವಾಚಾರ್ಯರ ಅಂತರ್ಯಾಮಿಗಳಾದ ಶ್ರೀಮನ್‌ಮೂಲರಾಮಚಂದ್ರದೇವರಿಗೆ ಐದನೆಯ ವಾಙ್ಮಯ ಕುಸುಮಹಾರವನ್ನಾಗಿ ಸಮರ್ಪಣೆ ಮಾಡಿದ್ದಾರೆ.

# ಪರಮಪೂಜ್ಯ ॥ ಶ್ರೀಸುಬುಧೇಂದ್ರತೀರ್ಥಶ್ರೀಪಾದರ ಜ್ಞಾನದೀಕ್ಷೆ

ಈ ಕೃತಿಯ ಮುದ್ರಣಕ್ಕೆ ತಗಲುವ ದುಬಾರಿವೆಚ್ಚವನ್ನು ತಮ್ಮ ಪಾದಕಾಣಿಕೆ-ಯಿಂದಲೇ ನಿರ್ವಹಿಸಿದ ಪರಮಪೂಜ್ಯ॥ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು ಈ ಕೃತಿಯ ಆಮೂಲಾಗ್ರ ಪರಿಪೂರ್ಣತೆಗೂ ಕೂಡ ಮುಖ್ಯಕಾರಣರಾಗಿದ್ದಾರೆ. ಮೊದಲನೆಯ ಸಂಪುಟದಲ್ಲಿ ಭಾವದೀಪ ಅನುವಾದವು ವಿಶೇಷವಿಚಾರದೊಂದಿಗೆ ಮುದ್ರಣವಾಯಿತು. ಎರಡನೆಯ ಸಂಪುಟದಲ್ಲಿ ಶ್ರೀಪಾದಂಗಳವರು ಸತ್ತರ್ಕದೀಪಾವಳಿ ಹಾಗೂ ತತ್ವಪ್ರದೀಪಗಳ ಅನುವಾದವನ್ನು ಸೇರಿಸುವಂತೆ ಆದೇಶಿಸಿದರು. ಮೂರನೆಯ ಸಂಪುಟದಲ್ಲಿ ಮೂರು ಟೀಕೆಗಳ ಜೊತೆ ಭಾವದೀಪದ ಅನುವಾದವು ಅಚ್ಚುಕಟ್ಟಾಗಿ ಮುದ್ರಣವಾಯಿತು. ನಾಕನೆಯ ಸಂಪುಟದಲ್ಲಿ ಮೂಱು ಟೀಕೆಗಳ ಜೊತೆ ಭಾವದೀಪದ ಅನುವಾದ ಮಾತ್ರವಲ್ಲದೇ ತತ್ವಪ್ರಕಾಶಿಕೆಗೆ ಸಂಬಂಧಪಟ್ಟ ಅನೇಕ ಟಿಪ್ಪಣಿಗಳ ವಿಶೇಷ-ವಿಚಾರ ಹಾಗೂ ವೇದ-ಉಪನಿಷತ್ತುಗಳ ಸಂಪೂರ್ಣವ್ಯಾಖ್ಯಾನವು ಮುದ್ರಣವಾಯಿತು. ಪ್ರಕೃತ ಐದನೆಯ ಸಂಪುಟದಲ್ಲಿ ಟಿಪ್ಪಣಿಯ ವಿಚಾರಗಳನ್ನು ಮತ್ತಷ್ಟು ಹೆಚ್ಚಿಸಿ ಕೆಲವೊಂದೆಡೆ ಮೂಲಸಹಿತವಾಗಿ ಮುದ್ರಿಸಲಾಗುತ್ತಿದೆ. ಹೀಗೆ ಹಂತ ಹಂತವಾಗಿ ಭಾವದೀಪದ ಈ ಯೋಜನೆಯು ಉತ್ತಮಗುಣಮಟ್ಟವನ್ನು ಹೊಂದುತ್ತಿದೆ. ಈ ಗುಣಮಟ್ಟತೆಗೆ ಮುಖ್ಯಕಾರಣರು ಪರಮಪೂಜ್ಯ॥ ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರೇ ಆಗಿದ್ದಾರೆ. ಆದ್ದರಿಂದ ಶ್ರೀಪಾದಂಗಳವರು ಈ ಕೃತಿಗೆ ಮುಖ್ಯಮಾರ್ಗದರ್ಶಕರು, ಮುಖ್ಯಸಂಪಾದಕರು, ಪರಿಪೂರ್ಣ ಪರಿಕಲ್ಪನೆಯುಳ್ಳವರೂ ಆಗಿರುತ್ತಾರೆ.

ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ಕಾಮಧೇನು ಕಲ್ಪವೃಕ್ಷದಂತೆ ಈ ಕೃತಿಯನ್ನು ನೀಡುತ್ತಿರುವ ಶ್ರೀಪಾದಂಗಳವರ ಉದಾರತೆ, ವಿಶಾಲಮನೋಭಾವನೆ ಹಾಗೂ ಜ್ಞಾನದೀಕ್ಷೆ ಈ ಎಲ್ಲಾ ಗುಣಗಳಿಗೆ ಎಂದೆಂದೂ ಶರಣೆನ್ನೋಣ.

– ಸಂಪಾದಕ

|| ಶ್ರೀಮನ್ಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಭಾವದೀಪ ೫ನೆಯ ಸಂಪುಟವು ಮೂಲರಾಮಚಂದ್ರದೇವರಿಗೆ ಸಮರ್ಪಣೆ-ಯಾಗುತ್ತಿರುವುದು ನಮಗೆ ಬಹಳ ಸಂತೋಷವಾಗಿದೆ.

ಮೊದಲು ನಾವು ಭಾವದೀಪಕಾರ್ಯದ ಅನುವಾದವನ್ನು ಬೆಮ್ಮತ್ತಿಯವರಿಗೆ ವಹಿಸಿದಾಗ ಸಮಯಕ್ಕೆ ಸರಿಯಾಗಿ ವಿಷಯ ವೈಶಾಲ್ಯತೆಯಿಂದ ಗ್ರಂಥವನ್ನು ಬರೆದು ನೀಡಿದರು. ಅನಂತರ ಕಠಿಣಗ್ರಂಥವೆಂದೇ ಪ್ರಸಿದ್ಧವಾದ ತ್ರಿವಿಕ್ರಮಪಂಡಿತಾಚಾರ್ಯರ ತತ್ವಪ್ರದೀಪಗ್ರಂಥವನ್ನು ಮತ್ತಷ್ಟು ಚೆನ್ನಾಗಿ ಅನುವಾದ ಮಾಡಿದರು. ಅನುವಾದ ಮಾಡಿದ್ದಷ್ಟೇ ಅಲ್ಲದೆ ಎಲ್ಲೆಡೆಯೂ ವಿಶೇಷ ವಿವರಣೆಗಳನ್ನು ನೀಡಿ ಬರೆದುಕೊಟ್ಟರು. ಇದರಿಂದ ನಮಗೆ ಬಹಳ ಸಂತೋಷವಾಯಿತು.

ಅಂತರಾಧಿಕರಣದಿಂದ ದ್ಯುಭ್ವಾದ್ಯಧಿಕರಣದ ತನಕ ಮೂರು ಟೀಕೆಗಳ ಜೊತೆ ಭಾವದೀಪಗ್ರಂಥವು ಈ ಸಂಪುಟದಲ್ಲಿ ಅನುವಾದಗೊಂಡಿದೆ. ಲಿಂಗಪಾದದಲ್ಲಿ ಅನ್ಯತ್ರೈವಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳನ್ನು ಸಮನ್ವಯ ಮಾಡಿದ್ದಾಯಿತು. ಮತ್ತು ವೈಶ್ವಾನರಾಧಿಕರಣದಲ್ಲಿ 'ವೈಶ್ವಾನರ' ಎಂಬ ಒಂದು ನಾಮಸಮನ್ವಯವನ್ನು ಮಾಡುವ ಮೂಲಕ, ಅನೇಕ ಲಿಂಗಾತ್ಮಕಶಬ್ದಗಳ ಸಮನ್ವಯವನ್ನೂ ಕೂಡ ಸಾಧಿಸಿದ್ದಾಯಿತು.

ದ್ಯುಭ್ವಾದ್ಯಧಿಕರಣದಿಂದ ಮೂರನೆಯ ಪಾದವು ಪ್ರಾರಂಭವಾಗುತ್ತಿದೆ. ಉಭಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳನ್ನು ಹಾಗೂ ಲಿಂಗಾತ್ಮಕಶಬ್ದಗಳನ್ನು ಸಮನ್ವಯ ಮಾಡುವುದೇ ಈ ಪಾದದ ಮುಖ್ಯ ಉದ್ದೇಶ.

ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದಾಗ ಅದೇ ಶಬ್ದಗಳು ಪುನಃ ಉಭಯತ್ರಪ್ರಸಿದ್ಧವಾಗುತ್ತವೆಂಬ ಪರಿಸ್ಥಿತಿ ಎದುರಾಗುತ್ತದೆ. ಉದಾ:- ಆಕಾಶ ಎಂಬ ಶಬ್ದವು ಮೊದಲು ಅನ್ಯತ್ರಪ್ರಸಿದ್ಧವಾಗಿತ್ತು. ವಿಷ್ಣುವಿನಲ್ಲಿ ಸಮನ್ವಯ ಮಾಡಿದಾಗ ಉಭಯತ್ರ-ಪ್ರಸಿದ್ಧವೆಂದು ಹೇಳಿದಂತಾಯಿತು. ಈ ಉದಾಹರಣೆಯಿಂದ ಮೊದಲೆರಡು ಪಾದಗಳಲ್ಲಿ ಮಾಡಲ್ಪಟ್ಟ ಎಲ್ಲಾ ಬಗೆಯ ಶಬ್ದಗಳನ್ನು ಪುನಃ ಈ ಪಾದದಲ್ಲಿಯೂ ಸಮನ್ವಯ ಮಾಡುವ ಆವಶ್ಯಕತೆ ಇದೆ. ಚಂದ್ರಿಕಾಚಾರ್ಯರು ಈ ವಿಚಾರವನ್ನು ಸ್ಪಷ್ಟಪಡಿಸಿದ್ದಾರೆ. ಇದಷ್ಟೇ ಅಲ್ಲದೇ ಲೋಕರೂಢಿಯಿಂದ ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನೂ ಕೂಡ ಈ ಪಾದವು ಮಾಡುತ್ತಿದೆ. ಮೂರನೆಯ ಪಾದವನ್ನು ಅಧ್ಯಯನ ಮಾಡುವ ಮೊದಲು ಪ್ರತಿಯೊಬ್ಬ ಜಿಜ್ಞಾಸುಗಳು ಈ ಅಂಶವನ್ನು ಗಮನಿಸಲೇಬೇಕು.

ಐದನೆಯ ಸಂಪುಟದಲ್ಲಿ ಮೂರು ಟೀಕೆಗಳ ಜೊತೆ ಭಾವದೀಪವಷ್ಟೇ ಅಲ್ಲದೇ ಉಳಿದೆಲ್ಲಾ ಟಿಪ್ಪಣಿಗಳ ವಿಶೇಷವಿಚಾರಗಳನ್ನು ಅಧ್ಯಯನ ಮಾಡಿ, ಸೇರಿಸುವುದು ಬಹಳ ಪ್ರಶಂಸಾರ್ಹವಾದ ಕಾರ್ಯ. ಇನ್ನು ಮುಂದೆ ಈ ಒಂದು ಪುಸ್ತಕವನ್ನು ಇಟ್ಟುಕೊಂಡರೆ ಸಾಕು. ಬ್ರಹ್ಮಸೂತ್ರಭಾಷ್ಯದ ಅಧ್ಯಯನ ಆಮೂಲಾಗ್ರವಾಗಿ ಆಗುತ್ತದೆಂಬುದರಲ್ಲಿ ಸಂಶಯವಿಲ್ಲ.

ವಿದ್ವಾನ್ ॥ ಬೆಮ್ಮತ್ತಿ ವೆಂಕಟೇಶಾಚಾರ್ಯರು ಧೃತಿಗೆಡದೆ ಮೊದಲಿರುವ ಉತ್ಸಾಹದಲ್ಲಿಯೇ ಲೇಖನಯಜ್ಞದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರ ಜ್ಞಾನಕಾರ್ಯವನ್ನು ಪ್ರೋತ್ಸಾಹಿಸುವ ವಿಷಯದಲ್ಲಿ ಶ್ರೀಮಠವು ಎಂದೆಂದೂ ಕಟಿಬದ್ಧವಾಗಿದೆ. ಈ ಪುಸ್ತಕಕ್ಕೆ ಶ್ರಮವಹಿಸಿದ ಬೆಮ್ಮತ್ತಿ ವೆಂಕಟೇಶಾಚಾರ್ಯರಿಗೆ ಹಾಗೂ ಉಳಿದವರಿಗೂ ಶ್ರೀಮನ್ ಮೂಲರಘುಪತಿದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ-
ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್‌ಮೂಲರಘುಪತಿ -
ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# ಮೂರು ದೀಪಗಳ ಭಾವಬೆಳಕಿನಲ್ಲಿ
# ಸ್ವಾಗತ ಭಾಷಣ

ವ್ಯಾಸರ ಜ್ಞಾನಶೈಲವೇ ಬ್ರಹ್ಮಸೂತ್ರಗಳು. ಆ ಉತ್ತುಂಗ-ಶೃಂಗಾಂಗಣದಲ್ಲಿ ಉದಯಿಸುತ್ತಿರುವ ಸೂರ್ಯನೇ ಮಧ್ವಮುನಿಗಳ ಭಾಷ್ಯ. ಕೆಲವು ಕುಹಕಿ-ಕುವಾದಿಗಳು ಈ ಜ್ಞಾನಸೂರ್ಯನ ಮೇಲೆ ಧೂಳಿ-ಕೆಸರು ಎರಚುವ ವ್ಯರ್ಥಪ್ರಯತ್ನ ಮಾಡಿ ಸಾಹಸಗೈದಿದ್ದೂ ಉಂಟು, ಮಂಜಿನ ತೆರೆ ಎಳೆಯಲು ಯತ್ನಿಸಿ ಕುಣಿದಾಡಿದ್ದೂ ಉಂಟು

ಆದರೆ ಆ ಜ್ಞಾನಭಾಸ್ಕರನ ದಿವ್ಯಸಾರಥಿಗಳಾದ ಶ್ರೀಪದ್ಮನಾಭತೀರ್ಥರು, ಶ್ರೀ ಜಯತೀರ್ಥರು, ಶ್ರೀತ್ರಿವಿಕ್ರಮಪಂಡಿತರೆಂಬ ಮೂವರು ಮುನಿಗಳು ಕುಹಕಿಗಳ ಧೂಳಿ-ಕೆಸರುಗಳನ್ನು ದಿಕ್ಕಾಪಾಲಾಗಿಸಿ ಮಂಜು ಹರಿದು ತತ್ವಜ್ಞಾನಜ್ಯೋತಿಯ ದಿವ್ಯಪ್ರಭೆಯು ಎಲ್ಲೆಡೆ ಚೆಲ್ಲುವಂತೆ ಮಾಡಿರುವರು.....

ಹೌದು .... ! ಸೂರ್ಯನ ಬೆಳಕಿನಲ್ಲಿಯೂ ದಾರಿ ತಪ್ಪುವವರಿದ್ದಾರೆ ...... ಹಗಲು ಕುರುಡರೂ ಇದ್ದಾರೆ ...... ಬೆಳಕಿನ ಹಿರಿಮೆ-ಮಹಿಮೆಯನ್ನು ಅರಿಯದ ಮಂದಮತಿಗಳ ಸಂಖ್ಯೆಗೇನೂ ಕಡಿಮೆಯಿಲ್ಲ.

ಇಂಥವರನ್ನು ಕೈಹಿಡಿದು ಸರಿದಾರಿಯಲ್ಲಿ ಕರೆದೊಯ್ಯುವವನೇ ನಿಜವಾದ ಮಹಾಸಾಹಸಿ, ಮತ್ತು ಧೀರವೀರಾಗ್ರಣಿ. ಇದು ರಾತ್ರಿಯಲ್ಲ ಹಗಲೆಂದು ಬಡಿದೆಬ್ಬಿಸಬೇಕು. ಬೆಳಕಿನ ಹಿರಿಮೆ-ಮಹಿಮೆಗಳನ್ನು ತಿಳಿಹೇಳಬೇಕು. ಮಂದಮತಿಗಳನ್ನು ಚಾಣಾಕ್ಷ್ಯರನ್ನಾಗಿಸಬೇಕು. ಇದಕ್ಕಾಗಿಯೇ ಧರೆಗಿಳಿದು ಬಂದು ತುಂಗಾತೀರದಲ್ಲಿ ಕಂಗೊಳಿಸುತಿಹರು ಶ್ರೀಗುರುರಾಯರು....!!

ಇವರಿಂದಲೇ ಇಂದು ಬಾನಗಲ ಸತ್‌ಸಿದ್ಧಾಂತವು ಬೆಳಗುತಿಹುದು. ಆಸ್ತಿಕರ ಹುಮ್ಮಸ್ಸು ಚಿಮ್ಮುತ್ತಿಹುದು. ಆದ್ದರಿಂದಲೇ ಈ ಯತಿಪುಂಗವರು ಕೇವಲ ಶಕಪುರುಷರಲ್ಲ, ಮಹಾನ್ ಯುಗಪುರುಷರು.

ಮಧ್ವಮುನಿಗಳ ಜ್ಞಾನಸೂರ್ಯನ ಪ್ರಭೆ ಗಾಳಿಬೀಸಿದಲ್ಲೆಲ್ಲಾ ಪ್ರಕಾಶಿಸುವಂತೆ ಮಾಡಿರುವ ಏಕೈಕ ಯತಿಪುಂಗವರೆಂದರೆ ಅದು ಶ್ರೀಗುರುರಾಯರು. ರಾಯರ ಜ್ಞಾನಪ್ರಸಾರದ ಅರಿವಾಗುವುದು ಸಜ್ಜನರಿಗೆ ಮಾತ್ರ. ಸೂರ್ಯನ ಹೊಂಗಿರಣಗಳ ಶಕ್ತಿ ತಾವರೆಗಳ ಪಕಳೆಗಳಿಗೆ ಬಿಟ್ಟು ಗೂಗೆಗಳ ಪಕ್ಷ್ಮಲಪಕಳೆಗಳಿಗೆಲ್ಲಿ ಅರ್ಥವಾದೀತು ...... !!!

ಇಂಥ ಗುರುಗಳ ಕೃಪೆಗೆ ಪಾತ್ರನಾದವನೇ ಧನ್ಯ..... ಅವನೇ ಮಾನ್ಯ..... ಅವನೇ ಸಜ್ಜನ ..... ಅವನೇ ಮಹಾಜನ....!!!!

## ಸಜ್ಜನರ ಉತ್ಸಾಹದ ಮಹಾಪೂರ

# ಶ್ರೀ ಸುಬುಧೇಂದ್ರತೀರ್ಥರು

ಸಜ್ಜನರ ಉತ್ಸಾಹಕ್ಕೆ ಈಗೊಂದು ಮಹಾಪೂರ ಬಂದಿದೆ. ಧಾರ್ಮಿಕ ಚಟುವಟಿಕೆಗಳಿಗೆ ಸುವರ್ಣಯುಗ ಪ್ರಾರಂಭವಾಗಿದೆ. ಹೆಗ್ಗಡಲನ್ನು ಕಡೆದು ಜ್ಞಾನಾಮೃತ ಸವಿಯುವ ಔತಣದ ಸಮಯ ಬಂದಿದೆ. ಹೃದಂತರಾಳದ ಮನೋಮಂಡಿಗೆಯನ್ನು ಸವಿಯುವ ನನಸಿನ ಕಾಲ ಬಂದಿದೆ. ಅದುವೇ ಶ್ರೀರಾಘವೇಂದ್ರಸ್ವಾಮಿಗಳ ಪರಂಪರೆಯ ಪೀಠದಲ್ಲಿ ಅದ್ಯ ವಿರಾಜಮಾನರಾದ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರ ಸುವರ್ಣಕಾಲ.

ತಮ್ಮ ಪೀಠಾಧಿಪತ್ಯ ಆರಂಭಗೊಂಡ ಮೂರೇ ವರ್ಷಗಳಲ್ಲಿ ಇವರು ಸಾಧಿಸಿದ ಸಾಗ್ರಸಮಗ್ರ ಐತಿಹಾಸಿಕ ಕಾರ್ಯಗಳ ವೈಖರಿಗಳು ಕಲ್ಪನಾತೀತ. ನಿರಂತರ ಹೆಬ್ಬೊತ್ತಿಗೆಗಳ ಪ್ರಕಾಶನದ ಕಾರ್ಯವನ್ನು ಕೈಗೊಂಡ ಇವರ ಅದಟು - ಉತ್ಸಾಹಗಳನ್ನು ಕಂಡು ನಾನಂತೂ ನಿಬ್ಬೆರಗಾಗಿರುವೆ.

ಶ್ರೀಸುಬುಧೇಂದ್ರಶ್ರೀಪಾದರು ಮೌನವಾಗಿಯೇ ಮಂತ್ರಾಲಯ ಮುನಿಗಳ ವಾಙ್ಮಯಸೇವೆ ಮಾಡಬೇಕೆಂದು ಹಂಬಲಿಸುವ ಮಹಾಚೇತನರು. ತಮ್ಮ ಜೋಳಿಗೆಯ ಸಂಪತ್ತನ್ನೆಲ್ಲಾ ಬಾಚಿ ವಾಙ್ಮಯಕಾರ್ಯದ ಬೊಗಸೆಗೆ ತುಂಬಿ ಸಂತೋಷ ಪಡುವ ಭಾಗ್ಯಶಾಲಿಗಳು. ಸಜ್ಜನರ ಸದ್ಭವಿಷ್ಯಕ್ಕೆ ಇವರೇ ಸದಾಶಾಕಿರಣರು. ಇವರ ಈ ಎಲ್ಲಾ ಮಹಾಗುಣಗಳಿಗೆ ಎಂದೆಂದೂ ಶರಣು ..... ....ಶರಣು.

## ಐದನೆಯ ಸಂಪುಟ

ಇಲ್ಲಿಯತನಕ ನಾಕು ಸಂಪುಟಗಳು ಪೂರ್ಣವಾದವು. ಪ್ರಸ್ತುತ ಐದನೆಯ ಸಂಪುಟ ನಿಮ್ಮ ಕೈಯಲ್ಲಿದೆ. ಮೊದಲನೆಯ ಅಧ್ಯಾಯದ ಎರಡನೆಯ ಪಾದದಲ್ಲಿರುವ ಅಂತರಾಧಿಕರಣದಿಂದ ಪ್ರಾರಂಭವಾಗಿ, ಮೂರನೆಯ ಪಾದದ ದ್ಯುಭ್ವಾದ್ಯಧಿಕರಣದ ತನಕ ಈ ಸಂಪುಟದಲ್ಲಿ ಸೇರಿಸಿದ ವಿಷಯ.

ಚಕ್ಷುರಿಂದ್ರಿಯದಲ್ಲಿರುವವನು ಆದಿತ್ಯನಲ್ಲ, ಅಗ್ನಿಯೂ ಅಲ್ಲ, ಮಹಾವಿಷ್ಣುವೇ ಆಗಿದ್ದಾನೆ ಎಂದು ಅಂತರಾಧಿಕರಣವು ಪ್ರತಿಪಾದನೆ ಮಾಡಿದೆ.

ಅಂತಃಸ್ಥತ್ವವೆಂಬ ಭಾವಧರ್ಮದಿಂದ ಸಹಿತವಾದ ನಿಯಮನ ಎಂಬ ಕ್ರಿಯಾರೂಪವಾದ ಲಿಂಗದ ಸಮನ್ವಯಕ್ಕಾಗಿ ಈ ಅಧಿಕರಣ ಹೊರಟಿದೆ. ಹಿಂದಿನ ಅಂತರಾಧಿಕರಣವು ಚಕ್ಷುರಿಂದ್ರಿಯದಲ್ಲಿ ಅಂತರ್ಯಾಮಿಯಾಗಿರುವವನು ಮಹಾವಿಷ್ಣುವೇ ಆಗಿದ್ದಾನೆಂದು ಹೇಳಿದರೆ ಈ ಅಂತರ್ಯಾಮ್ಯಧಿಕರಣವು ಸಕಲಭೂತಗಳ ಹೃದಯದಲ್ಲಿ ನೆಲೆಸಿರುವವನು ಮಹಾವಿಷ್ಣುವೇ ಆಗಿದ್ದಾನೆಂದು ಸಮರ್ಥಿಸುತ್ತಿದೆ.

'ದೃಶ್ಯತ್ವಾಭಾವ' ಮೊದಲಾದ ಅಭಾವರೂಪವಾದ ಧರ್ಮಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವುದಕ್ಕಾಗಿ ಮುಂದಿನ ಅದೃಶ್ಯತ್ವಾಧಿಕರಣವು ಹೊರಟಿದೆ.

'ಪಾಚಕತ್ವ' ಮೊದಲಾದ ಅನೇಕ ಲಿಂಗಗಳನ್ನು ಸಮನ್ವಯ ಮಾಡುವುದಕ್ಕಾಗಿ 'ವೈಶ್ವಾನರ' ಎಂಬ ಒಂದು ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡಲು ವೈಶ್ವಾನರಾಧಿಕರಣವು ಹೊರಟಿದೆ.

ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯಕ್ಕಾಗಿ ಮೂರನೆಯ ಪಾದವು ಪ್ರಾರಂಭವಾಗುತ್ತದೆ. ಸ್ವರ್ಗಲೋಕ, ಭೂಲೋಕ ಮೊದಲಾದ ಲೋಕಗಳಿಗೆ ಆಶ್ರಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಮೊದಲನೆಯ ಅಧಿಕರಣವು ಲಿಂಗಸಮನ್ವಯವನ್ನು ಮಾಡಿದೆ.

## ಈ ಸಂಪುಟದ ಕೆಲವು ಅಪೂರ್ವತೆಗಳು

* ಎರಡನೆಯಪಾದವು ಲಿಂಗಪಾದವಾದರೂ ಕೂಡ ವೈಶ್ವಾನರಾಧಿಕರಣವು ನಾಮಸಮನ್ವಯವನ್ನು ಮಾಡುತ್ತಿದೆ.

ಪಂಡಿತಾಚಾರ್ಯರು ಲಿಂಗಪಾದದ ಕೊನೆಯ ಈ ಅಧಿಕರಣವನ್ನು ಅಧಿಕರಣರಾಜ ಎಂದು ಕರೆಯುತ್ತಿದ್ದಾರೆ. ಆಸ್ಥಾನಗುರುವಿನಿಂದ ರಾಜನು ಶೋಭಿಸುವಂತೆ ಈ ಅಧಿಕರಣರಾಜನು ಪರಮಕರುಣಾಶಾಲಿಗಳಾದ ಸಕಲದೇವತೆಗಳ ಗಣಕ್ಕೂ ಗುರುವಾದ ವೇದವ್ಯಾಸದೇವರೆಂಬ ಗುರುಗಳಿಂದ ವಿರಾಜಿಸುತ್ತಿದೆ ಎಂದಿದ್ದಾರೆ. ಸೂತ್ರಕಾರರಾದ ಶ್ರೀವೇದವ್ಯಾಸದೇವರು ಈ ಅಧಿಕರಣದಲ್ಲಿ ಕೇವಲ ಒಂದು ಶಬ್ದವನ್ನು ಸಮನ್ವಯ ಮಾಡದೇ ಎಲ್ಲಾ ಬಗೆಯ ನಾಮಾತ್ಮಕವಾದ ಶಬ್ದಗಳ ಹಾಗೂ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ದೃಢವಾಗಿ ಮಾಡುತ್ತಿದ್ದಾರೆ.

* ತತ್ವಪ್ರಕಾಶಿಕೆಯಲ್ಲಿ 'ವೈಶ್ವಾನರ' ಎಂಬ ಒಂದು ನಾಮಾತ್ಮಕಶಬ್ದವನ್ನು ಸಮನ್ವಯ ಮಾಡುವ ಮೂಲಕ ಅನೇಕ ಲಿಂಗಾತ್ಮಕಶಬ್ದಗಳ ಸಮನ್ವಯವು ಈ ಅಧಿಕರಣದಿಂದ ಸಿದ್ಧವಾಗುತ್ತದೆ ಎಂದು ತಿಳಿಸಿದ್ದಾರೆ. ಪ್ರಕೃತ ಪಂಡಿತಾಚಾರ್ಯರು 'ವೈಶ್ವಾನರ' ಎಂಬ ಒಂದು ನಾಮಾತ್ಮಕಶಬ್ದವನ್ನು ಸಮನ್ವಯ ಮಾಡುವ ಮೂಲಕ ಕೇವಲ ಅನೇಕ ಬಗೆಯ ಲಿಂಗಾತ್ಮಕಶಬ್ದಗಳ ಸಮನ್ವಯವು ಸಿದ್ಧವಾಗುವುದಷ್ಟೇ ಅಲ್ಲದೇ ಎರಡು ಪಾದಗಳಲ್ಲಿ ಹೇಳಿದ ಎಲ್ಲಾ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳ ಸಮನ್ವಯವೂ ಕೂಡ ದೃಢವಾಗುತ್ತದೆಂಬ ಅಧಿಕ ವಿಚಾರವನ್ನು ತಿಳಿಸಿರುತ್ತಾರೆ. 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಇತ್ಯಾದಿ ಕೊನೆಯ ಐದು ಸೂತ್ರಗಳಲ್ಲಿ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳ ಹಾಗೂ ಲಿಂಗಾತ್ಮಕಶಬ್ದಗಳ ಗತಿಯನ್ನು ತಿಳಿಸಿರುತ್ತಾರೆ. ಆದ್ದರಿಂದ ಈ ಅಧಿಕರಣದಿಂದ ಎರಡು ಪಾದಗಳಲ್ಲಿ ಸಮನ್ವಯ ಮಾಡಿದ ಸಕಲ ಶಬ್ದಗಳ ಸಮನ್ವಯವು ದೃಢವಾಗಿ ಸಿದ್ಧವಾಗಲು ಸಾಧ್ಯವಾಗುತ್ತದೆ. ಈ ಅಧಿಕರಣವೇ ಇಲ್ಲದಿದ್ದರೆ, ಎರಡು ಪಾದಗಳಲ್ಲಿ ಮಾಡಿದ ಸಮನ್ವಯದಲ್ಲಿ ದಾರ್ಢ್ಯವೇ ಬರುವುದಿಲ್ಲ. ಆದ್ದರಿಂದ ಪಂಡಿತಾಚಾರ್ಯರು ಇದನ್ನು 'ಅಧಿಕರಣರಾಜ' ಎಂದು ಕರೆದಿದ್ದಾರೆ.

* 'ಅನ್ಯತ್ರಪ್ರಸಿದ್ಧವೈಶ್ವಾನರನಾಮ್ನಃ' ಎಂಬುದಾಗಿ ತತ್ವಪ್ರಕಾಶಿಕೆಯಲ್ಲಿ 'ವೈಶ್ವಾನರ' ಎಂಬ ನಾಮಾತ್ಮಕಶಬ್ದವು ಅನ್ಯತ್ರಪ್ರಸಿದ್ಧವಾದದ್ದೆಂದು ಹೇಳಿದ್ದಾರೆ. ಆದರೆ ತತ್ವಪ್ರದೀಪದಲ್ಲಿ ಪಂಡಿತಾಚಾರ್ಯರು ಉಭಯತ್ರಪ್ರಸಿದ್ಧವೆಂದು ಹೇಳುತ್ತಿದ್ದಾರೆ. ಆದ್ದರಿಂದ ಎರಡೂ ಟೀಕೆಗಳಿಗೆ ಪರಸ್ಪರ ವಿರೋಧ ಬರುತ್ತದಲ್ಲವೇ? ಈ ಪ್ರಶ್ನೆಗೆ ಯಥಾರ್ಥವಾದ ವಿಮರ್ಶೆಯನ್ನು ವೈಶ್ವಾನರಾಧಿಕರಣದ ವಿಶೇಷವಿಚಾರದಲ್ಲಿ ನೀಡಲಾಗಿದೆ. ಹಾಗೂ ಶ್ರೀರಾಘವೇಂದ್ರಸ್ವಾಮಿಗಳ ಭಾವದೀಪ ಟಿಪ್ಪಣಿಯಿಂದ ಈ ಪ್ರಶ್ನೆಗೆ ಸುಂದರವಾದ ಉತ್ತರವನ್ನೂ ಕೂಡ ನೀಡಲಾಗಿದೆ.

* 'ಅನುಸ್ಮೃತೇರ್ಬಾದರಿಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಪಂಡಿತಾಚಾರ್ಯರು 'ಬಾದರಿ' ಎಂಬ ಪದಕ್ಕೆ 'ಬಾದರಾತ್ಮಜಃ ಶುಕಃ' ಎಂಬ ವ್ಯಾಖ್ಯಾನವನ್ನು ಮಾಡಿದ್ದಾರೆ. ಬದರಿಯಲ್ಲಿ

ನೆಲೆಸಿರುವ ವೇದವ್ಯಾಸದೇವರು 'ಬಾದರ' ಎಂದು ಕರೆಸಿಕೊಳ್ಳುತ್ತಾರೆ. ಅವರ ಮಗ ಆದ ಕಾರಣ ಶುಕಾಚಾರ್ಯರು 'ಬಾದರಿ' ಎಂದು ಕರೆಸಿಕೊಳ್ಳುತ್ತಾರೆ. ತತ್ವಪ್ರಕಾಶಿಕೆಯಲ್ಲಿ 'ಬಾದರಿ ಆಚಾರ್ಯಃ' ಎಂದಷ್ಟೇ ಬರೆದಿದ್ದಾರೆ. ತತ್ವಪ್ರದೀಪದಲ್ಲಿ 'ಬಾದರಾತ್ಮಜಃ ಶುಕಃ' ಎಂದು ಸ್ಪಷ್ಟಪಡಿಸಿದ್ದಾರೆ.

* ತತ್ವಪ್ರಕಾಶಿಕಾಕಾರರು ಪ್ರತಿಯೊಂದು ಅಧಿಕರಣಗಳ ಪ್ರಾರಂಭದಲ್ಲಿ ಅಧಿಕರಣದ ಸಂಶಯ, ಪೂರ್ವಪಕ್ಷ, ಸಿದ್ಧಾಂತಗಳನ್ನು ನಿಯಮೇನ ತೋರಿಸುತ್ತಾರೆ. ಆದರೆ ಪಂಡಿತಾಚಾರ್ಯರು, ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನಷ್ಟೇ ತೋರಿಸುತ್ತಾರೆ. ಅಧಿಕರಣದ ಸಂಶಯವನ್ನು ತೋರಿಸುವುದಿಲ್ಲ. ಆದರೆ ದ್ಯುಭ್ವಾದ್ಯಧಿಕರಣದ ಪ್ರಾರಂಭದಲ್ಲಿ ಪಂಡಿತಾಚಾರ್ಯರೂ ಕೂಡ ಸ್ಪಷ್ಟವಾಗಿ ಅಧಿಕರಣದ ಸಂಶಯವನ್ನು ತೋರಿಸುತ್ತಾ, ತಾವೇಕೆ ಎಲ್ಲೆಡೆಯೂ ಅಧಿಕರಣ-ಸಂಶಯವನ್ನು ತೋರಿಸುವುದಿಲ್ಲವೆನ್ನಲು ಕಾರಣವನ್ನು ಹೀಗೆ ನೀಡಿದ್ದಾರೆ -

ಶ್ರೀಮದಾಚಾರ್ಯರ ಅನುಸೇವಿಗಳಾದ ಜ್ಞಾನಿಗಳು ಅತ್ಯಂತ ಗಹನವಾದ ಅರ್ಥತತ್ವವನ್ನು ತಿಳಿಯುವುದರಲ್ಲೇ ಆಸಕ್ತರಾಗಿರುತ್ತಾರೆ. ಇಂಥವರಿಗೆ ಪ್ರತಿಯೊಂದು ಅಧಿಕರಣಗಳಲ್ಲಿ ಅಧಿಕರಣ-ರಚನೆಗೆ ಉಪಯುಕ್ತವಾದ ಸಂಶಯಾದಿಗಳ ಪ್ರಕ್ರಿಯೆಯ ತಿಳಿಯುವಿಕೆಯು ಇಷ್ಟವಾಗುವುದಿಲ್ಲ. ಇದು ಕೇವಲ ಬಹಿರ್ಮುಖವಾದ ಸುಖಕಾರಕವಷ್ಟೇ ಹೊರತು, ತತ್ವಬುಭುತ್ಸುಗಳಿಗೆ ಸುಖಪ್ರದವಲ್ಲ. ಆದ್ದರಿಂದ ಬಹಳವಾದ ಹುರುಳಿಲ್ಲದ ಮಾತುಗಳನ್ನು ಪ್ರತಿಯೊಂದು ಅಧಿಕರಣಗಳಲ್ಲಿ ಜ್ಞಾನಿಗಳು ಇಷ್ಟಪಡಲಾರರು.

ನಿಪುಣಮತಿಗಳು ತತ್ವಮಣಿಗಳ ಅನ್ವೇಷಣದಲ್ಲಿ ರತರಾಗಿರುತ್ತಾರೆ. ಪ್ರತಿಕ್ಷಣವೂ ತಮ್ಮ ಸಿದ್ಧಾಂತದ ರಕ್ಷಣೆಯನ್ನು ಮಾಡಿಕೊಳ್ಳುವುದಷ್ಟೇ ಅಲ್ಲದೇ ಪರಪಕ್ಷದ ನಿರಾಕರಣದಲ್ಲಿ ಆಸಕ್ತರಾಗಿರುತ್ತಾರೆ. ಇಂಥವರು ಸಮುದ್ರದಡದಲ್ಲಿ ಕುಳಿತು ಅಲೆಗಳನ್ನು ಎಣಿಸುವ ಕುತೂಹಲದಲ್ಲಿ ಸಮಯ ವ್ಯರ್ಥ ಮಾಡಲಾರರು.

ಶ್ರೀಮಟ್ಟೀಕಾಕೃತ್ಪಾದರು ತತ್ವಪ್ರಕಾಶಿಕೆಯ ಪ್ರತಿಯೊಂದು ಅಧಿಕರಣಗಳಲ್ಲಿ ಸಂಶಯ, ಪ್ರಯೋಜನ ಇವುಗಳೆಲ್ಲವನ್ನೂ ನಿಯಮೇನ ತೋರಿಸುತ್ತಾರೆ. ಜ್ಞಾನಿಗಳ ಪರಂಪರೆಯಲ್ಲಿ ಎಲ್ಲರೂ ಇದನ್ನು ಒಪ್ಪಿರುತ್ತಾರೆ. ಆದ್ದರಿಂದ ಪಂಡಿತಾಚಾರ್ಯರ ಮಾತಿಗೆ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆ ಸಹಜ. ಆದರೆ ಜ್ಞಾನಿಗಳ ದೃಷ್ಟಿಯಲ್ಲಿ ಪಂಡಿತಾಚಾರ್ಯರ ಮಾತು ಹೊರಟಿರುತ್ತದೆ. ಮಂದಮತಿಗಳ ದೃಷ್ಟಿಯಲ್ಲಿ ಶ್ರೀಮಟ್ಟೀಕಾಕೃತ್ಪಾದರು ಸಂಶಯಗಳನ್ನು ಪ್ರದರ್ಶನ ಮಾಡುತ್ತಾರೆ ಎಂದು ತಿಳಿಯಬೇಕು. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಹೀಗೆ ಅನೇಕ ಪ್ರಮೇಯಗಳಿಂದ ಹಾಗೂ ನೂತನ ವಿಚಾರಗಳಿಂದ ಕೂಡಿರುವ ಈ ಐದನೆಯ ಸಂಪುಟವನ್ನು ನಿಮಗಾಗಿ ನಿಮ್ಮ ಅಂತರ್ಯಾಮಿಯಲ್ಲಿ ಸಮರ್ಪಿಸುತ್ತಿರುವೆ.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

# ಅನುಕ್ರಮಣಿಕಾ


| | |
|---|---|
| ಅನುಗ್ರಹ ಸಂದೇಶ | IX - X |
| ಸ್ವಾಗತ ಭಾಷಣ | XI - XV |
| ಪ್ರಾಸ್ತಾವಿಕ - (ಆಂಗ್ಲಭಾಷೆ) | XVI - XX |
| ಅಧಿಕರಣ ಸಾರಾಂಶ | XXI - XXXIX |
| ಅಂತರಾಧಿಕರಣ | ೧-೧೨೬ |
| ಅಂತರ್ಯಾಮ್ಯಧಿಕರಣ | ೧೨೭-೨೧೦ |
| ಅದೃಶ್ಯತ್ವಾಧಿಕರಣ | ೨೧೧-೩೦೦ |
| ವೈಶ್ವಾನರಾಧಿಕರಣ | ೩೦೧-೪೫೬ |
| ದ್ಯುಭ್ವಾದ್ಯಧಿಕರಣ | ೪೫೭-೬೨೦ |
| ಪರಿಶಿಷ್ಟ | ೬೨೧-೬೩೬ |
| ವಿವರವಾದ ವಿಷಯಾನುಕ್ರಮಣಿಕೆ | ೬೩೭-೬೬೫ |

and Lingas, which are known to be applicable to both Vishnu and elsewhere. These Adhikaranas are as stated below:

**Last Four Adhikaranas of the Second Pada:**

1. Antaradhikaranam;
2. Antaryamyadhikaranam;
3. Adrusyatvaadhikaranam;
4. Vaishwaanaraadhikaranam;

**First Adhikarana of the Third Pada:**

5. Dyubhvaadhyaadhikaranam.

Dr Venkateshacharya has provided very useful summaries of the themes dealt with in each of these Adhikaranas. He has also given an account of various debatable issues for further debate and reflections in Goshthis.

I will present in the following few paragraphs, a brief account of the subjects dealt with in these Adhikaranas, for the benefit of comprehension by the Jijnasus..

**1. Antaradhikarana:**

This Adhikarana has five Sutras. The entity residing inside the Chakshus (Antah) and enjoying Ramamaanah) there, is Vishnu himself and not Agni. The attribute of Antaratva is applicable only to Vishnu. This is so, because the entity existing there is ascribed the attributes such as Amrutatva, Abhayatva, and the terms such as Brahma and Atma, used there are applicable only to Vishnu;

**2. Antaryaamyadhikaranam:**

This Adhikarana has three Sutras. The Attribute (Linga) considered here is that of existence inside an entity (Antaryaamii) and commanding its properties and activities (Niyamana). It is not either Prakriti or its commander, any Jiva. This is so because many attributes specifically applicable to Parabrahma alone are mentioned and also because the other Dharmas, such as Trigunatva and samsaaritva, which are relevant only for Jiva or Pradhana are not mentioned here.

**3. Adrushyatvaadhikaranam:**

This Adhikarana has three Sutras. The attribute of not being visible-Adrushyatva is explained to be applicable only to ParaBrahma, and not to Prakriti, Chaturmukha Brahma or Rudra. This is so because, the special features of ParaBrahma - such as being the subject matter of ParaVidya, such as, Rigeda are also mentioned in the same context. This Adrushya entity is also described to be Omniscient- Sarvajna, while Chaturmukha Btahma etc are not possessing this feature. Further the Adrushya entity is described to possess the luster of the Gold while others do not possess that feature.

**4. Vaishwanaradhikarana:**

. This is the fourth Adhikarana of the second Pada, covered in this Volume. This Adhikarana has nine Sutras. Though this second Pada is meant for explaining the applicability of the different Attributes (Lingas) to Para Brahma, this Adhikarana departs from that system. It explains the applicability of the term Vaishvanara,

which is characterized by many attributes, such as Pachakatva-feature of cooking etc. to describe ParaBrahma. This is so because, the entity, viz. Vaiswanara is further characterized by the word Atma, which is applicable only to Vishnu. Further, in Bhagavadgita, it is stated that, Vishnu alone takes the form of Vaishvanara. The word Vaishwanara does not refer to Agni.

**5. Dyubhvadyadhikarana:**

This Adhikarana has seven Sutras. Lord V ishnu is the only resort for all the worlds, like Earth, Heaven etc, Pradhan, Vayu, Rudra and Jiva are not such Resorts. Because, the word Swa is used in that context and it means Atma and it is applicable only to Vishnu. Further, this Resort is described to be the final destination of all Muktas, and this Characteristic is applicable only to Vishnu. Further the features of Rudra, such as, smearing Bhasma, being ferocious, and the attributes of Pradhana, being the orgin of all the three Gunas, are not described. The attributes of Jiva or Vayu are also not mentioned here.

In the comparative analysis of the different commentaries, Vidwan Venkateshacharya brings out many subtle points of significant Sastric relevance. These points include, among others, the following:

- Why "Vaiswanaradhikarana" is called in Tatva Pradipa, as "Adhikarana Raja"?
- Why in the Pada meant for establishing the applicability of the lingas noted elsewhere,(anyatra Prasiddha), the samanvaya of a Nama is presented?
- Is Vaiswanara nama , anyatra prasiddha or Ubhayatra Prasiddha?

- Jayatirtha presents, all the components of an Adhikarana, where as Panditacharya essentially presents only Purvapaksha and Siddhanta. Why?
- What is the etymological meaning of the term Badari?

The inquisitive nature of Vidwan Venkateshacharya is explicitly manifest at several places of this Volume as in other Volumes.

I would like to present my respectful Pranams to HH Sri Sri Subudhendra Tirtharu for providing a nvery perceptive and encouraging Anugraha Sandeswha to this Volume.

The task before Vidwan Venkateshacharya is horrendous. Even the first Adhyaya is not completed. But the number of Volumes has reached Five, covering more than 2000 printed pages.

The Anugraha of Sri Raghavendra Swamigalu and the encouraging words and Anugraha of Sri Sri Subudhendra Tirtha alone would instill confidence, courage and strength in Sri Acharya, to complete this Noble task up to its logical conclusion. We add our best wishes to further enhance Acharya's Capability. Obviously, "Praarbdhasya AntyagaamI dhIrah".

We are sure that all Jijnasus would find this Volume also useful like others.

Iti Sam

**Vachaspati Dr. V.R.Panchamukhi**

Chancellor, Sri Gurusarvabhouma Sanskrit Vidyapeetha and Executive Director, Sri Gurusarvabhouma Samsodhana Mandira. Mantralayam.

# INTRODUCTION

## BrahmaSutra Bhashya, Sattarka Dipavali, Tatva Pradipa, Tatva Prakashika, Bhavadipa, Tantra Dipika

by

**Vachaspati. Dr. V.R.Panchamukhi**

Chancellor, SGSVP, Executive Director, SGSM, Mantralayam

Vedas constitute the basic source material for the profound Philosophical Tenets of the Indian Knowledge Heritage. Upanishads, being in the form of Questions and Answers between the Guru and Sishya, provide the quintessence of the Vedic Thoughts. The Six Vedangas- Siksha, Kalpa, Nirukta, Vyakarana, Chandas and Jyotishya constitute the aides for deriving the prominent interpretations of the Vedas. Despite the existence of such support materials for understanding the purport of the Vedas, Vedavyasa felt it necessary to compose 564 BrahmaSutras to facilitate the proper interpretations of the Vedas. Sri Madhwacharya wrote Bhashya on Brahma Sutras, after refuting the twentyone previous Bhashyas with a view to establishing the true purport of the Vedas for the benefit of those who are eligible to realize Moksha.

Sri Madhavacharya also composed three other treatises in Sutra Prasthana- viz. Anuvyakhyana, NyayaVivarana and AnuBhashya, with different objectives in mind. On Sutra Bhashya, Sri Trivikrama Panditacharya wrote the commentary, known as "Tatve Pradipa" and Sri Padmanbha Tirtha wrote a commentary known as "Sattarka Dipavali". These two treatises were the earliest commentaries on Madhva Bhashya, and were regarded with great reverence and deep interest by the Scholars.

It may be noted that the above two Commentaries are, in a way the treatises produced, almost at the time of or very close to the life time of Sri Madhavacharya. Both Padmanabha Tirtha and Trivikrama Panditacharya, were Adwaitins, before being refuted by Madhavacharya, in Vadas, and then converted to Dwaita fold and accepted as the prominent Sishyas of Sri Madhavacharya. In a way the tasks of both of them was to document the Madhva's Siddhanta in an authentic way for the benefit of the posterity. They were familiar with the Samsaya and Purvapaksha and they were keen to highlight the promonence of Madhva Siddhanta. Their style of presentation seems to be one of putting together the crisp Notes taken at the time of the Teaching by Madhwa!!

Sri Jayatirtha- commonly known as Sri Tikarayaru, in view of his profound Commentaries (Tikas) on Madhva Granthas, came on the scene of philosophical discourses, almost fifty years after Madhvacharya. Even though the Advaita Vada had been refuted and almost silenced by the powerful campaign launched by Sri Madhacharya, there had emerged again many strong advocates of

Advaita Vada, in the form of Vidyaranya, Appayya Dixita,etc. just prior to the emergence of Sri Jayatirtha. The task of Sri Jayatirtha was to re-establish the authenticity and finality of Madhva's interpretations of Brahma Sutras.. Hence the great challenge before Sri JayairthaMuni, was to explicitly narrate the Advaita vada, as Purva Paksha and then refute its arguments thread-bare.

In His Tatwvaprakashika, Sri Jayatirtha presents very meticulously, all the basic components of an Adhikarana, viz. Vishaya, Visaya, Purvapaksha, Uttaram (Siddhanta) and Prayojanam.

**वशियो वशियश्चैव पूर्वपक्षस्तथोत्तरम् ।**
**प्रयोजनं पञ्चैते प्राञ्चो ऽधकिरणं वदिुः ।**

All the Jijnasus feel greatly indebted to Sri Jayatirtha muni for his presentation of these components of each Adhikarana, in a meticulous manner for the benefit of the poorly endowed Jijnasus. Sri Tikarayaru also shows very systematically, Sastra Sangati, Adhyaya Sangati Pada Sangati and Adhikarana Sangati. The Vishaya Vakyas are also very meticulously brought out. We owe a great deal to the ingenuity and compassion of Tikarayaru.

Sri Raghavendra Tirtha who came on the scene of the philosophical discourses, much much later, after almost more than hundred and fifty years after Sri Jayatirtha, and almost after hundred years after Sri Vyasatirtha, had had a more challenging task of refuting many schools with a view to finally establishing the authenticity of Madhva's thoughts.

The absorbing capacity of the Jijnasus, had been gradually getting reduced and as such, Sri Raghavendra Tirtha had to present more detailed accounts of the Purvapakshas and their refutations and then to present the finality of Madhva Siddhanta.

The reason for giving a brief account of this historical background of the periods when these different treatises were composed is to facilitate the proper appreciation of the style and the contents of these different compositions.

Over time, the power of comprehension of the Jijnasus has been further eroded and we need to have good authentic narration of these different commentaries in simple Kannada language. Dr. Bemmatti Venkateshacharya, has undertaken this most useful and benevolent task of presenting the arguments of Madhva Bhashya, Padmanabhatirtha's Sattarka Dipavali, Sri Trivikrama Panditacharya's Tatvapradipa, Tikacharya's Tatvaprakashika and Sri Raghavendra Swami's Bhavadipa, in one book in very simple and communicable Kannada language. The effort of Dr Venkateshacharya is highly commendable and the readers of these Volumes would certainly bear out my point that he has been very successful in his missions.

This is the fifth Volume in the Series of Volumes and it deals with five Adhikaranas, four Adhikaranasof the Second Pada of the First Adhyaya, and the first Adhikarana of the Third Pada of the First Adhyaya, of the Brahmasutras. The second Pada is aimed at explaining the applicability of the different Lingas- attributes, that are commonly applied in the entities other than Vishnu (Anyatra Prasiddha Lingas), while the third Pada is concerned with the Namas

# ತತ್ವಪ್ರಕಾಶಿಕಾ - ಭಾವದೀಪ

# ಸಾರಾಂಶ

## ಅಂತರಾಧಿಕರಣ

ಅಂತರಾಧಿಕರಣವು ಪ್ರಾರಂಭವಾಗುತ್ತಿದೆ. ಛಾಂದೋಗ್ಯದ ನಾಲ್ಕನೆಯ ಅಧ್ಯಾಯದಲ್ಲಿ ಉಪಕೋಸಲ ವಿದ್ಯೆಯು ಪ್ರಸಕ್ತವಾಗಿದೆ. ಆ ಸಂದರ್ಭದಲ್ಲಿ "ಯ ಏಷೋऽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ" ಎಂಬ ವಾಕ್ಯವು ಕೇಳಿಸುತ್ತಿದೆ. ಮೇಲ್ನೋಟಕ್ಕೆ ಅಗ್ನಿಯನ್ನು ಇದು ಪ್ರತಿಪಾದಿಸುವಂತೆ ಕಾಣಿಸುತ್ತಿದೆ. ಆದರೆ ವಿಷ್ಣುವೇ ಪ್ರತಿಪಾದ್ಯನೆಂಬುದು ಅಂತಿಮ ನಿರ್ಣಯ.

ಆದ್ದರಿಂದ ಒಂದುವೇಳೆ ವಿದ್ಯಾಭೇದವು ಅಯುಕ್ತವಾದರೆ ಆವಾಗ "ಕಂ ಬ್ರಹ್ಮ" ಎಂಬುದು ಅಧ್ಯಾತ್ಮವಿದ್ಯೆಯೆಂದು "ಯ ಏಷೋಂತರಾದಿತ್ಯೇ" ಎಂಬುದು ಅಸ್ಮದ್‌ವಿದ್ಯೆಯೆಂದು ಹೇಳಬೇಕಾಗುತ್ತದೆ. ಆವಾಗ ಆದಿತ್ಯಸ್ಥ ಪುರುಷನಲ್ಲಿ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಅಗ್ನಿಪರವಾಗುವುದರಿಂದ ಬಾಧಕವಶಾತ್ ಅಗ್ನಿಯಿಂದ ಅಭಿನ್ನನಾದ ಕಣ್ಣಿನಲ್ಲಿರುವವನಲ್ಲಿ ಕೇಳಿಸಲ್ಪಟ್ಟ ಅಮೃತತ್ವಾದಿಗಳನ್ನು ಗೌಣವೆನ್ನಬೇಕಾಗುತ್ತದೆ. ಹೀಗೆ ಅಗ್ನಿಶ್ರುತ್ಯಾದಿಗಳ ಬಲದಿಂದ ಅಗ್ನಿಯೇ ಚಕ್ಷುರಂತಸ್ಥನಾಗಿದ್ದಾನೆಂದು ಸಿದ್ಧವಾಗುತ್ತದೆ. ಇದು ಪೂರ್ವಪಕ್ಷದ ಫಲ.

ಒಂದು ವೇಳೆ ವಿದ್ಯಾಭೇದವು ಕೂಡುವುದಾದರೆ 'ಅಹಂ' ಶಬ್ದವು ಶಾಸ್ತ್ರದ ಪ್ರಕಾರ ಬ್ರಹ್ಮಪರವಾಗುತ್ತದೆ. ಆವಾಗ ಯಾವುದೇ ಬಾಧಕವಿಲ್ಲದ ಕಾರಣ ಅಮೃತತ್ವಾದಿಗಳು ಮುಖ್ಯವೇ ಆಗುತ್ತವೆ. ಇಂತಹ ಅಮೃತತ್ವಾದಿ ಲಿಂಗಗಳ ಬಲದಿಂದ ವಿಷ್ಣುವೇ ಶ್ರುತಿಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಫಲ.

'ಯ ಏಷಃ ಅಂತರಕ್ಷಿಣಿ' ಎಂಬ ಶ್ರುತಿಯಲ್ಲಿ ಚಕ್ಷುರಂತರ್ಗತನಾದವನು ಅಗ್ನಿದೇವತೆಯೆಂದು ಪೂರ್ವಪಕ್ಷ. ಏಕೆಂದರೆ ಅಗ್ನಿಯೇ ಸ್ವತಃ ತನ್ನನ್ನು ಆದಿತ್ಯದೇವತೆಯೆಂದು ಹೇಳಿಕೊಂಡಿದ್ದಾನೆ. ಚಕ್ಷುರಭಿಮಾನಿದೇವತೆ ಹಾಗೂ ಆದಿತ್ಯ ದೇವತೆ ಒಬ್ಬನೇ ಎಂದು 'ಆದಿತ್ಯಶ್ಚಕ್ಷುರ್ಭೂತ್ವಾಕ್ಷಿಣಿ ಪ್ರಾವಿಶತ್' ಎಂಬ ಶ್ರುತಿಯಿಂದ ತಿಳಿಯುತ್ತದೆ.

'ಅಕ್ಷಿ' ಶಬ್ದವು ಮುಖ್ಯವಾಗಿ ಕಣ್ಣಿಗೆ ಅಭಿಮಾನಿಯಾದ ದೇವತೆಯನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ ಎಂದು ಅಭಿಮಾನ್ಯಧಿಕರಣದಿಂದ ನಿರ್ಣಯವಾಗಿದೆ. ಮತ್ತು 'ಯಶ್ಚಕ್ಷುಷಿ ತಿಷ್ಠನ್' ಎಂಬ ಮತ್ತೊಂದು ಶ್ರುತಿಯಲ್ಲಿ ಪ್ರತಿಪಾದ್ಯವಾದ 'ಚಕ್ಷುಸ್ಸೇ ಅಂತರಕ್ಷಿಣಿ ಪುರುಷಃ' ಎಂಬಲ್ಲಿರುವ ಅಕ್ಷಿಶಬ್ದದಿಂದ ವಿವಕ್ಷಿತವಾಗಿದೆ. ಆ ಶ್ರುತಿಯಲ್ಲಿ ಹೇಳಲ್ಪಟ್ಟ 'ಚಕ್ಷುಷಃ ಯಂ ಚಕ್ಷುರ್ನವೇದ' ಎಂಬ ವಾಕ್ಯಶೇಷದಿಂದ ಚೇತನಪರವೆಂದು ಸಿದ್ಧವಾದ ಮೇಲೆ ಅಂತರಕ್ಷಿಣಿ ಎಂಬಲ್ಲಿರುವ ಅಕ್ಷಿಯೂ ಸಹ ಚೇತನಪರವೇ ಆಗಬೇಕು. ಈ ವಿಷಯದಲ್ಲಿ ಭಾಷ್ಯ ಹಾಗೂ ನ್ಯಾಯರತ್ನಾವಳಿಗಳ ಸಮ್ಮತಿಯೂ ಇದೆ.

ಅಥವಾ 'ಅಂತರಕ್ಷಿಣಿ ಪುರುಷಃ' ಎಂಬಲ್ಲಿರುವ ಅಕ್ಷಿ ಶಬ್ದವು ಜಡಪರವೆಂದು ಹೇಳಲು ಯಾವುದೇ ಶ್ರುತಿಯಿಲ್ಲ. ಪ್ರಸ್ತುತ ಸ್ಥಾನಾದಿಸೂತ್ರಗಳೆಲ್ಲವು ಸ್ವರಸವೇ ಆಗುತ್ತವೆ. 'ಯ ಏಷಃ ಆದಿತ್ಯೇ' ಎಂಬ ಮತ್ತೊಂದು ವಾಕ್ಯದ ಉಲ್ಲೇಖವು ಅನಾವಶ್ಯಕವಾಗುತ್ತದೆ.

ಆದಿತ್ಯಮಂಡಲ ಹಾಗೂ ಅಕ್ಷಿಗೋಲಕದಲ್ಲಿ ಒಬ್ಬನೇ ಚೇತನನಿರುವುದರಿಂದ 'ಏಕವಿಧತ್ವಾತ್' ಎಂಬ ಟೀಕೆಯು ಸ್ವಾರಸ್ಯವಾಗುತ್ತದೆ. ಆದ್ದರಿಂದ ಜಡಭೂತವಾದ ಅಧಿಷ್ಠಾನಗಳು ಭಿನ್ನವಾದ್ದರಿಂದ ಚೇತನರೂ ಸಹ ಭಿನ್ನರೇ ಆಗಬೇಕೆಂದು ಹೇಳಲಾಗದು.

ವಸ್ತುತಃ 'ಸೋऽಹಮಸ್ಮಿ' ಎಂಬ ಉಪದೇಶವು ವಿಷ್ಣುವಿನದ್ದೆಂದು ಪ್ರಶ್ನಿಸಬಹುದು. ಆದರೆ ಹಿಂದಿನ ಮುಂದಿನ ಪ್ರಕರಣವನ್ನು ನೋಡಿದಾಗ ಅಗ್ನಿಯ ಉಪದೇಶವೆಂದೇ ಸ್ಪಷ್ಟವಾಗುತ್ತದೆ. ಏಕೆಂದರೆ 'ಅಗ್ನಿಂ ಪರಿಚಚಾರ' ಇತ್ಯಾದಿಯಾಗಿ ಅನೇಕ ಬಾರಿ ಅಗ್ನಿ ಶಬ್ದವು ಕೇಳಿಸುತ್ತಿದೆ. ಮತ್ತು ಬಹುವಚನಾಂತವಾಗಿ ನಿರ್ದಿಷ್ಟವಾಗಿವೆ. ಮತ್ತು 'ಗಾರ್ಹಪತ್ಯ' ಮೊದಲಾದ ಅಗ್ನಿಯ ವಿಶೇಷ ರೂಪಗಳನ್ನು ಉಲ್ಲೇಖಿಸಿದೆ. ಈ ಮೂರು ಕಾರಣಗಳಿಂದ ಅಗ್ನಿಯೇ ಪ್ರತಿಪಾದ್ಯನೆನ್ನಬೇಕು.

ಅಂತಿಮಪ್ರಾಣಾಧಿಕರಣದ 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಲ್ಲಿರುವ ನ್ಯಾಯದಂತೆ 'ಅಹಂ' ಶಬ್ದವು ಅಂತರ್ಯಾಮಿಯಾದ ವಿಷ್ಣುವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಸ್ವತಃ ಅಗ್ನಿಯು ತನ್ನನ್ನು ಉಪಾಸನೆ ಮಾಡುವವರನ್ನು ರಕ್ಷಿಸುತ್ತೇನೆಂದು ಹೇಳಿಕೊಂಡಿದ್ದಾನೆ. ಬ್ರಹ್ಮನನ್ನು ಉಪಾಸನೆ ಮಾಡಿದರೆ ಅಗ್ನಿಯನ್ನು ರಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ತನ್ನ ಉಪಾಸನೆಯನ್ನೇ ಅಗ್ನಿಯು ಹೇಳಿಕೊಂಡಿದ್ದಾನೆಂದು ಹೇಳಬೇಕು.

ಅಕ್ಷಿ ಶ್ರುತಿಯಿಂದ ಅಗ್ನಿಯೇ ಪ್ರತಿಪಾದ್ಯನೆನ್ನಲು ಅನೇಕ ಬಾರಿ ಕೇಳಿಸುವ ಅಗ್ನಿ ಶಬ್ದವೇ ಪ್ರಮಾಣವೆಂದು ಸಾಧಿಸಿದರೂ ಅಷ್ಟೇ ಅಲ್ಲ 'ಸೋऽಹಮಸ್ಮಿ ಸ ಏವಾऽಹಮಸ್ಮಿ' ಎಂಬಲ್ಲಿ ಅವಧಾರಣಸಹಿತವಾದ ಅಭ್ಯಾಸವೂ ಸಹ ಪ್ರಮಾಣವಾಗಿದೆ. ಸ್ವರಸಪ್ರತಿಪನ್ನವಾದ ಅರ್ಥವನ್ನಷ್ಟೇ ಅಭ್ಯಾಸವು ಸ್ಪಷ್ಟಪಡಿಸುತ್ತದೆ.

ಉದಾ :- 'ಗಂಗಾಯಾಂ ಮೀನಃ' ಎಂದು ಹೇಳಿದಾಗ ಗಂಗಾ ಶಬ್ದಕ್ಕೆ ತೀರವೆಂಬರ್ಥವನ್ನು ಭ್ರಾಂತಿಯಿಂದ ಒಬ್ಬನು ತಿಳಿಯುತ್ತಾನೆ. ಆ ಭ್ರಾಂತಿಯನ್ನು ನಿರಾಸ ಮಾಡುವುದಕ್ಕಾಗಿ ಆಪ್ತನಾದವನು 'ಗಂಗಾಯಾಂ ಮೀನಃ' ಎಂಬ ಪದವನ್ನು ಅನೇಕ ಬಾರಿ ಪ್ರಯೋಗಿಸುತ್ತಾನೆ. ಅಂದರೆ ತೀರದಲ್ಲಿ ಮೀನು ಇರುವುದಿಲ್ಲ. ಗಂಗಾಪ್ರವಾಹದಲ್ಲೇ ಮೀನು ಇರುತ್ತದೆಂದು ಗಂಗಾಶಬ್ದದ ಅಭ್ಯಾಸದಿಂದ ಸ್ಪಷ್ಟಪಡಿಸುತ್ತಾನೆ. ಇದರಿಂದ ಮೊದಲು ಪ್ರಯೋಗಿಸಲ್ಪಟ್ಟ ಗಂಗಾಶಬ್ದವು ಸ್ವರಸವಾದ ಪ್ರವಾಹ ಎಂಬರ್ಥವನ್ನೇ ಹೇಳುತ್ತದೆಂದು ತಿಳಿಯಬೇಕು. ಅದರಂತೆ ಪ್ರಕೃತ ಅಗ್ನಿಯೂ ನಾನೇ ಆಗಿದ್ದೇನೆ ಎಂಬ ಮಾತನ್ನು ಅನೇಕ ಬಾರಿ ಪ್ರಯೋಗಿಸುತ್ತಿದ್ದಾನೆ. ಇದರಿಂದ ಉಪದೇಶಕನು ಅಗ್ನಿಯು ಹೊರತು ವಿಷ್ಣುವಲ್ಲವೆಂದು ನಿರ್ಣಯವಾಗುತ್ತದೆ.

ಮತ್ತು ಉಪನಿಷತ್ತಿನಲ್ಲಿ 'ಅಸ್ಮದ್‌ವಿದ್ಯಾ ಆತ್ಮವಿದ್ಯಾ' ಎಂಬುದಾಗಿ 'ಕಂ ಬ್ರಹ್ಮ' ಎಂಬ ಬ್ರಹ್ಮವಿದ್ಯೆಯೇ ಬೇರೆ ಆದಿತ್ಯನ ಅಂತರ್ಗತನಾದವನ ವಿದ್ಯೆಯೇ ಬೇರೆಯೆಂದು ಹೇಳಲಾಗಿದೆ. ಇದರಿಂದಲೂ ಸಹ ಅಗ್ನಿವಿದ್ಯೆಯನ್ನು ಬ್ರಹ್ಮವಿದ್ಯೆಯೆನ್ನಬಾರದೆಂದು ತಿಳಿಯುತ್ತದೆ.

ಟೀಕೆಯ ಪೂರ್ವಪಕ್ಷದಲ್ಲಿ ಅಗ್ನಿಯನ್ನು ಅಕ್ಷಿಸ್ಥನೆಂದು ಹೇಳಿದರೆ 'ಸಮಾಖ್ಯಾಶ್ರುತಿ' ವಿರೋಧ ಬರುತ್ತದೆಂದು ಹೇಳಿದ್ದಾರೆ, ಇದೇನೂ ತಪ್ಪಲ್ಲ. ಪೂರ್ವಪಕ್ಷಿಯು ಆದಿತ್ಯನಲ್ಲಿರುವವನು ಅಗ್ನಿಯೇ ಆಗಿದ್ದಾನೆಂದು ಎಲ್ಲಿಯ ತನಕ ನಿರ್ಣಯಿಸುವುದಿಲ್ಲವೋ ಅಲ್ಲಿಯ ತನಕ 'ಸಮಾಖ್ಯಾಶ್ರುತಿಯು' ವಿಷ್ಣುಪರವೇ ಆಗಿರುತ್ತದೆ.

ಇದರಂತೆ 'ಅಹಂ' ಶಬ್ದದ ಪ್ರಯೋಗವನ್ನು ವಿಷ್ಣುವಿನಲ್ಲಿ ಔಪಚಾರಿಕವೆನ್ನಲಾಗಿದೆ. ಇದರ ಅಭಿಪ್ರಾಯವೇನೆಂದರೆ ಆದಿತ್ಯನಲ್ಲಿ ಅಂತರ್ಗತನಾದ ವಿಷ್ಣುವಿನ ವಿಷಯದಲ್ಲಿ ಅಗ್ನಿಯಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದವು ಔಪಚಾರಿಕವಾಗಿದೆಯೆಂದು ಅಭಿಪ್ರಾಯ.

ಮತ್ತು ಅಕ್ಷಿಸ್ಥನಾದವನು ವಿಷ್ಣುವೆಂದು ಹೇಳಿದರೆ ಅಪೂರ್ವತ್ವವು ಬರುತ್ತದೆಂದು ಹೇಳಿದ್ದಾರೆ. ಇದೂ ಸಹ ತಪ್ಪಲ್ಲ. ಅಗ್ನಿಯಲ್ಲಿ ಕಣ್ಣಿಗೆ ಕಾಣಿಸದ ಪ್ರಯುಕ್ತ ಅಪೂರ್ವತ್ವವನ್ನು ಹೇಳಬಹುದು. ಆದರೆ ವಿಷ್ಣು ಅತ್ಯಂತ ಅಲೌಕಿಕನಾದ್ದರಿಂದ ಅಗ್ನಿಗಿಂತ ಅತಿಶಯವಾದ ಅಪೂರ್ವತ್ವವು ವಿಷ್ಣುವಿನಲ್ಲೇ ಇರುತ್ತದೆ. ಅಥವಾ ಹಗಲಿನ ಹೊತ್ತು ಅಗ್ನಿಯ ಪ್ರಭೆಯು ಕಾಣಿಸದ ಕಾರಣ ಆದಿತ್ಯನಲ್ಲಿ ಪ್ರವೇಶವಾಗಿರುತ್ತದೆಂದು ಅನುಮಾನದಿಂದ ಸಾಧಿಸಬಹುದು. ಈ ಕಾರಣದಿಂದಲೂ ಅಗ್ನಿಯಲ್ಲಿ ಅಪೂರ್ವತ್ವವನ್ನು ಹೇಳಲಾಗದು.

'ಅಪಹತೇ ಪಾಪಕೃತ್ಯಾಂ' ಎಂಬುದನ್ನು ಟೀಕೆಯಲ್ಲಿ ಅರ್ಥವಾದ ವಾಕ್ಯವೆಂದಿದ್ದಾರೆ. ಆದರೆ ಇದು ಫಲವಾಕ್ಯವೂ ಆಗಿದೆ. ಅರ್ಥವಾದತ್ವ ಫಲತ್ವ ಎರಡೂ ಇರುವುದರಿಂದ ಟೀಕೆಯಲ್ಲಿ ಅರ್ಥವಾದ ವಾಕ್ಯವೆಂದು ಪರಿಗಣಿಸಿದ್ದು ತಪ್ಪಲ್ಲ? ಅಥವಾ ಫಲವನ್ನು ಹೇಳುವ ವಾಕ್ಯದಲ್ಲಿ ಫಲತ್ವ ಹಾಗೂ ಅರ್ಥವಾದತ್ವಗಳೆರಡೂ ಇದ್ದೇ ಇರುತ್ತದೆಂದು ತಿಳಿಯಬಹುದು.

ಮತ್ತು ಅಮೃತತ್ವ ಅಭಯತ್ವಗಳನ್ನು ಅಗ್ನಿಯಲ್ಲಿ ಉಪಪಾದಿಸಿದ್ದೂ ಸಹ ತಪ್ಪಲ್ಲ. ತನಗಿಂತ ಅಧಮ ದೇವತೆಗಿಂತ ಹೆಚ್ಚು ಅಮೃತತ್ವ ಅಭಯತ್ವಗಳು ಅಗ್ನಿಯಲ್ಲಿ ಇರುತ್ತದೆ. ಅಥವಾ ಈ ಹಿಂದೆ ಉಪಪಾದಿಸಿದ ಅರ್ಥವಾದ ಸಹಿತವಾದ ಬಹುಶ್ರುತಿಗಳ ಬಲದಿಂದ ಮುಖ್ಯವಾದ ಅಮೃತತ್ವವನ್ನೇ ಅಗ್ನಿಯಲ್ಲಿ ಹೇಳಬಹುದು.

ಕಣ್ಣಿನಲ್ಲಿರುವವನು ಭಗವಂತನೇ ಹೊರತು ಅಗ್ನಿಯಲ್ಲ. ಪ್ರತಿಯೊಬ್ಬ ಪುರುಷರ ಎಡಗಣ್ಣಿನಲ್ಲಿ ಸ್ತ್ರೀಪ್ರೇರಕವಾದ ಭಗವಂತನ 'ವಾಮನಿ' ಎಂಬ ರೂಪವಿದೆ. ಬಲಗಣ್ಣಿನಲ್ಲಿ ಪುರುಷ ಪ್ರೇರಕವಾದ 'ಭಾಮನಿ' ಎಂಬ ರೂಪವಿದೆ. ಈ ರೂಪಗಳನ್ನು ಅಗ್ನಿ ಸ್ವರೂಪವೆಂದು ಹೇಳಲು ಸಾಧ್ಯವೇ ಇಲ್ಲ. ಹಾಗೇನಾದರೂ ಹೇಳಿದರೆ ಕಣ್ಣಿನ ಒಳಗಡೆ ಕುಳಿತಿರುವ ಅಗ್ನಿಯನ್ನು ಪ್ರೇರಣೆ ಮಾಡಲು ಅನೇಕ ಜೀವಿಗಳ ಪ್ರವಾಹವೇ ಹರಿಯಬೇಕಾಗುತ್ತದೆ.

ಅಗ್ನಿದೇವತೆಯು 'ಪರಿಹ್ಯೇನಂ ಮ್ರಿಯಂತೇ' ಎಂಬ ಶ್ರುತಿ ಹೇಳುವಂತೆ ಮರಣಶೀಲನಾಗಿದ್ದಾನೆ. 'ಭೀಷಾಸ್ಮಾತ್' ಎಂಬ ಶ್ರುತಿ ಹೇಳುವಂತೆ ಭಗವಂತನಿಗೆ ಹೆದರಿ ಪಲಾಯನ ಮಾಡುತ್ತಾನೆ. ಆದ್ದರಿಂದ ಅಮೃತತ್ವ ಅಭಯತ್ವಗಳೆಲ್ಲವೂ ಸಹ ವಿಷ್ಣುವಿನ ನಿರವಕಾಶಲಿಂಗಗಳೆಂದು ಸಾಬೀತಾಗುತ್ತದೆ.

'ಸೋऽಹಮಸ್ಮಿ' ಎಂದು ಉಪದೇಶಿಸಿದವನು ಅಂತರ್ಯಾಮಿಯೇ ಹೊರತು ಅಗ್ನಿಯಲ್ಲ. ಅಗ್ನಿ ಶಬ್ದದ ಅಭ್ಯಾಸವೂ ಸಹ ಅಗ್ನಿಗೆ ಪ್ರಚೋದಕವಲ್ಲ. ಹಿಂದಿನ ಮುಂದಿನ ವಾಕ್ಯಗಳೆಲ್ಲವೂ ವಿಷ್ಣುವನ್ನು ಬೆಂಬಲಿಸುತ್ತಿರುವಾಗ ಮಧ್ಯದಲ್ಲಿರುವ ಅಭ್ಯಾಸದ ಶಕ್ತಿ ಹೀನವಾಗುತ್ತದೆ.

'ಅಗ್ನಿವಿದ್ಯೆ' 'ಆತ್ಮವಿದ್ಯೆ' ಎಂಬ ವಿದ್ಯಾಭೇದದಿಂದ ಅಗ್ನಿಯು ಶ್ರುತಿಪ್ರತಿಪಾದ್ಯನೆಂಬ ಪೂರ್ವಪಕ್ಷದಲ್ಲಿ ಹುರುಳಿಲ್ಲ. ಏಕೆಂದರೆ ಒಬ್ಬನೇ ಬ್ರಹ್ಮನನ್ನು ವಿಷಯೀಕರಿಸುವ ವಿದ್ಯೆಗಳು ಪ್ರಕಾರಭೇದದಿಂದ ಅನೇಕ ಹೆಸರನ್ನು ಪಡೆಯಬಹುದು. ಬ್ರಹ್ಮವಿಷಯಕವಾದ ದಹರವಿದ್ಯೆ, ಪ್ರಾಣವಿದ್ಯೆ, ವೈಶ್ವಾನರವಿದ್ಯೆಗಳೇ ಇದಕ್ಕೆ ಉದಾಹರಣೆ.

ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಐದು ಸೂತ್ರಗಳ ಜೋಡಣೆಯು ಅತ್ಯಂತ ಸ್ವಾರಸ್ಯಮಯವಾಗಿದೆ. ಅದು ಹೀಗೆ - ಪ್ರಥಮ ಸೂತ್ರವು ವಿಷಯವಾಕ್ಯದಲ್ಲೇ ಇರುವ ಶ್ರುತಿಲಿಂಗಾದಿಗಳನ್ನು ಹೇಳುತ್ತಿರುವ ಕಾರಣ ಮೊದಲೇ ಉಲ್ಲೇಖಿಸಲು ಅರ್ಹವಾಗಿದೆ.

ಸೂತ್ರದಲ್ಲಿರುವ ಅಂತರ ಎಂಬ ಪದಕ್ಕೆ ಕೇವಲ ಅಂತರ್ಯಾಮಿ ಎಂದರ್ಥವಲ್ಲ. ಕಣ್ಣಿನ ಒಳಗಡೆ ಅಂತರ್ಯಾಮಿಯಾಗಿದ್ದು ರಮಿಸುತ್ತಾನೆಂದರ್ಥ. 'ಅಂತರ' ಎಂಬಲ್ಲಿರುವ 'ಅಂತ' ಎಂಬ ಉಪಪದವು ಅಂತರ್ಯಾಮಿಯೆಂಬರ್ಥವನ್ನು ಹೇಳಿದರೆ 'ರ' ಎಂಬ ಧಾತು 'ರಮಣ' ಎಂಬರ್ಥವನ್ನು ಹೇಳುತ್ತಿದೆ. ಕೇವಲ ಅಂತರ್ಯಾಮಿಯೆಂಬರ್ಥವು ವಿವಕ್ಷಿತವಾಗಿದ್ದಲ್ಲಿ 'ಅಂತ' ಎಂಬ ಶಬ್ದವು ಸಾಕಾಗಿತ್ತು. ಈ ರಮಣ ಎಂಬರ್ಥವನ್ನು ಶ್ರುತಿಯಲ್ಲಿರುವ ಆತ್ಮಶಬ್ದವು 'ಆದೇಯಂ ಮಾತಿ' ಎಂಬ ವ್ಯುತ್ಪತ್ತಿಯಿಂದ ಸ್ಪಷ್ಟಪಡಿಸುತ್ತಿದೆ. ಆದ್ದರಿಂದ ಪ್ರಥಮಸೂತ್ರಕ್ಕೆ ಹೀಗರ್ಥ. ಕಣ್ಣಿನ ಒಳಗಡೆ ಅಂತರ್ಯಾಮಿಯಾಗಿ ರಮಿಸುವವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಅಮೃತತ್ವ, ಅಭಯತ್ವ ಮತ್ತು ಬ್ರಹ್ಮಶಬ್ದ ಆತ್ಮಶಬ್ದಗಳೆಂಬ ಲಿಂಗಗಳೆಂದು ಎಂದು.

ವಿಷಯವಾಕ್ಯಗಳಲ್ಲಿರುವ ಶ್ರುತಿಲಿಂಗಗಳನ್ನು ಪ್ರಮಾಣವನ್ನಾಗಿ ಹೇಳುತ್ತಿರುವುದರಿಂದ ''ಅಂತರ ಉಪಪತ್ತೇಃ'' ಎಂಬ ಸೂತ್ರವು ಮೊದಲು ನಿಮಿತ್ತವಾಗಿದೆ. ಮುಂದಿನ ವಾಕ್ಯದಲ್ಲಿರುವ ಸ್ಥಾನಶಕ್ತಿ ಹಾಗೂ ಸ್ವರೂಪಶಕ್ತಿಗಳೆಂಬ ಲಿಂಗಗಳನ್ನು ಪ್ರತಿಪಾದಿಸುತ್ತಿರುವುದರಿಂದ 'ಸ್ಥಾನಾದಿವ್ಯಪದೇಶಾಚ್ಚ' ಎಂಬ ಸೂತ್ರವು ಎರಡನೆಯ ಸ್ಥಾನವನ್ನು ಹೊಂದಿದೆ.

ಪ್ರಕರಣದ ಪ್ರಾರಂಭದಲ್ಲಿರುವ ಬ್ರಹ್ಮನ ಲಿಂಗವನ್ನು ಪ್ರತಿಪಾದಿಸುವ ಕಾರಣ 'ಸುಖವಿಶಿಷ್ಟಾಭಿಧಾನಾದೇವಚ' ಎಂಬ ಸೂತ್ರವು ಮೂರನೆಯ ಸ್ಥಾನವನ್ನು ಅಲಂಕರಿಸಿದೆ.

ಉಪಕ್ರಮದಿಂದ ಪ್ರಾಪ್ತವಾದ ಬ್ರಹ್ಮಪ್ರಕರಣಕ್ಕೆ ವಿದ್ಯಾಭೇದವು ವಿಚ್ಛೇದಕವಾದಾಗ ಅದನ್ನು ಪರಿಹರಿಸಲು ಉಪಸಂಹಾರದಲ್ಲಿರುವ ಲಿಂಗವನ್ನು ಉಲ್ಲೇಖಿಸುವ ''ಶ್ರುತೋಪನಿಷತ್ಕಗತ್ಯಭಿಧಾನಾಚ್ಚ'' ಎಂಬ ಸೂತ್ರವು ನಾಲ್ಕನೆಯ ಸ್ಥಾನವನ್ನು ಪಡೆದಿದೆ.

ಪರಪಕ್ಷದಲ್ಲಿ ಬಾಧಕಗಳನ್ನು ಸಾಧಿಸುವುದರಿಂದ 'ಅನವಸ್ಥಿತೇರಸಂಭವಾಚ್ಚ ನೇತರಃ' ಎಂಬ ಸೂತ್ರವು ಕೊನೆಯ ಸ್ಥಾನವನ್ನು ಅಲಂಕರಿಸಿದೆ. ಹೀಗೆ ಸೂತ್ರಕಾರರ ಸೂತ್ರದ ಜೋಡಣೆ ಅತ್ಯಂತ ಸ್ವಾರಸ್ಯಮಯವಾಗಿದೆ.

ಅದ್ವೈತ ಮತದ ಪ್ರಕಾರ ಮತ್ತು ರಾಮಾನುಜ ಮತದ ಪ್ರಕಾರ ಈ ಅಧಿಕರಣವು ಪುನರುಕ್ತವಾಗಿದೆ. ಏಕೆಂದರೆ ಪ್ರಥಮಾಧ್ಯಾಯದ ಮೊದಲನೆಯ ಪಾದದಲ್ಲಿರುವ ಅಂತಸ್ಥಾಧಿಕರಣವನ್ನು ಇವರಿಬ್ಬರು ಅಂತರಧಿಕರಣವೆಂದೇ ಗುರುತಿಸುತ್ತಾರೆ. ಮತ್ತು ಇಲ್ಲಿಯಂತೆ ಅಲ್ಲಿಯೂ ಸಹ ಛಾಂದೋಗ್ಯದ ಪ್ರಥಮಾಧ್ಯಾಯದ ವಾಕ್ಯವನ್ನು ಬ್ರಹ್ಮಪರವೆಂದು ಸಿದ್ಧಾಂತ ಮಾಡುತ್ತಾರೆ. ಅಲ್ಲಿ 'ಅತ ಯ ಏಷೋ ಅಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ವಾಕ್ಯವನ್ನೇ ಬ್ರಹ್ಮಪರವೆಂದು ಸಿದ್ಧಾಂತ ಮಾಡಿದ ಮೇಲೆ ಪುನಃ ಇಲ್ಲಿ ಆಕ್ಷೇಪಕ್ಕೆ ಅವಕಾಶವೇ ಇರುವುದಿಲ್ಲ.

ಇನ್ನು ಭಾಮತಿಯಲ್ಲಿ ಅಕ್ಷಿಯಲ್ಲಿರುವ ಜೀವವಿಶೇಷನು ಆ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆ. ಈ ಅಧಿಕರಣದ ಪೂರ್ವಪಕ್ಷಕ್ಕೆ ಛಾಯಾಪುರುಷನು ವಿಷಯನಾಗಿದ್ದಾನೆ. ಈ ಅಧಿಕರಣದ ವಿಷಯವಾಕ್ಯದಲ್ಲಿ ದೃಶ್ಯತ್ವಾದಿಗಳು ಕೇಳಿಸುತ್ತಿರುವುದರಿಂದ ಜೀವವಿಶೇಷನಲ್ಲಿ ದೃಶ್ಯತ್ವಾದಿಗಳು ಅಸಂಭಾವಿತವಾಗಿವೆ. ಆದರೆ ಛಾಯಾಪುರುಷನು ಪ್ರತ್ಯಕ್ಷಸಿದ್ಧನಾದ್ದರಿಂದ ದೃಶ್ಯತ್ವಕ್ಕೆ ಆಧಾರನಾಗಿದ್ದಾನೆಂದು ಅಭ್ಯಧಿಕಾಶಂಕೆಯನ್ನು ತೋರಿಸಿದೆ.

ಭಾಮತಿಯ ಈ ಧೋರಣೆ ಸರಿಯಿಲ್ಲ. ಕೇವಲ ದೃಶ್ಯತ್ವವೆಂಬ ಒಂದು ಹೇತು ಇಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ಪುರುಷತ್ವ, ಅಮೃತತ್ವ, ಸಂಯದ್ವಾಮತ್ವವೇ ಮೊದಲಾದ ಅನೇಕ ಧರ್ಮಗಳಿಲ್ಲದ ಛಾಯಾಪುರುಷ ಪಕ್ಷವನ್ನು ಖಂಡಿತವಾಗಿಯೂ ಬಿಡಬೇಕು. ಛಾಯಾಪುರುಷನಲ್ಲಿ ಸ್ತೋತ್ರ ಮಾಡುವುದಕ್ಕಾಗಿ ಅಮೃತ ಅಭಯ ಮೊದಲಾದ ಶಬ್ದಗಳನ್ನು ಪ್ರಯೋಗಿಸಲಾಗಿದೆಯೆಂದು ಹೇಳುವುದಾದರೆ ಜೀವಪಕ್ಷದಲ್ಲಿಯೂ ಇದು ಸಮಾನ. ಆದ್ದರಿಂದ ಯಾವುದೇ ಪ್ರಕಾರದಲ್ಲಿಯೂ ಅಭ್ಯಧಿಕಾಶಂಕೆಯನ್ನು ತೋರಿಸಲು ಸಾಧ್ಯವಿಲ್ಲದ ಕಾರಣ ಪುನರುಕ್ತಿದೋಷವನ್ನು ತಪ್ಪಿಸಿಕೊಳ್ಳಲಾಗದು.

ಅದ್ವೈತಿಗಳ ಸಿದ್ಧಾಂತರಚನೆಯೂ ಸರಿಯಿಲ್ಲ. ಅಕ್ಷಿಸ್ಥನಾದವನು ಕಾರ್ಯಬ್ರಹ್ಮನಾದ ಚತುರ್ಮುಖನೆಂದು ಹೇಳಿದರೆ ಅವನಲ್ಲಿ 'ಅಮೃತತ್ವ', 'ಅಭಯತ್ವ' ಮೊದಲಾದ ಧರ್ಮಗಳು ಬರುವುದಿಲ್ಲ. ಅಕಾರ್ಯಬ್ರಹ್ಮನಾದರೆ ಅವನ ಉಪಾಸನೆಯಿಂದ ಅರ್ಚಿರಾದಿಮಾರ್ಗಗಮನವನ್ನು ಹೇಳಿದ್ದು ಅಯುಕ್ತವಾಗುತ್ತದೆ. ಏಕೆಂದರೆ ಕಾರ್ಯಬ್ರಹ್ಮನನ್ನು ಉಪಾಸನೆ ಮಾಡುವವರು ಮಾತ್ರ ಅರ್ಚಿರಾದಿಮಾರ್ಗದಲ್ಲಿ ಹೋಗುತ್ತಾರೆ. ಇದರಂತೆ ಅದ್ವೈತಿಗಳ ಸೂತ್ರ ವ್ಯಾಖ್ಯಾನವೂ ಸಮಂಜಸವಲ್ಲ.

1. ''ಅಂತರ ಉಪಪತ್ತೇಃ'' ಎಂಬಲ್ಲಿ 'ರ' ಶಬ್ದವು ವ್ಯರ್ಥವಾಗುತ್ತದೆ. 'ಅಮೃತತ್ವಾದಿ' ಉಪಪತ್ತಿಗಳು ಕಾರ್ಯಬ್ರಹ್ಮನಲ್ಲಾಗಲೀ ಅಕಾರ್ಯಬ್ರಹ್ಮನಲ್ಲಾಗಲೀ ಕೂಡುವುದಿಲ್ಲ.

2. ''ಸ್ಥಾನಾದಿವ್ಯಪದೇಶಾಚ್ಚ'' ಎಲ್ಲೆಡೆ ವ್ಯಾಪ್ತನಾದ ಪರಬ್ರಹ್ಮನು ಅಲ್ಪಸ್ಥಾನದಲ್ಲಿದ್ದಾನೆಂದು ''ಅರ್ಭಕೌಕಸ್ತ್ವಾತ್'' ಎಂಬ ಸೂತ್ರದಿಂದಲೇ ಸಮರ್ಥಿಸಿದ್ದಾಗಿದೆ. ಅದೇ ವಿಷಯವನ್ನು ಪ್ರತಿಪಾದಿಸುವ ಈ ಸೂತ್ರಕ್ಕೆ ಸಾರ್ಥಕ್ಯವಿಲ್ಲ.

3. ''ಸುಖವಿಶಿಷ್ಟಾಭಿಧಾನಾದೇವಚ'' ಸುಖವಿಶಿಷ್ಟ ಶಬ್ದಕ್ಕೆ ಸುಖ ಸಂಬಂಧವೆಂಬರ್ಥವನ್ನು ಹೇಳಿದರೆ ಜೀವನಲ್ಲಿ ಹೇತು ವ್ಯಭಿಚರಿತವಾಗುತ್ತದೆ. ಅಪರಿಚ್ಛಿನ್ನತ್ವವೆಂಬ ಶ್ರೇಷ್ಠಸುಖದ ಸಂಬಂಧವನ್ನು ವಿವಕ್ಷಿಸಿದರೆ ಸುಖಸ್ವರೂಪನಾದ ನಿಮ್ಮ ಬ್ರಹ್ಮನಲ್ಲಿ ಸುಖಸಂಬಂಧ ಬರುವುದಿಲ್ಲ. ವಿಶಿಷ್ಟಬ್ರಹ್ಮನಲ್ಲಿ ಸುಖಸಂಬಂಧವಿದ್ದರೂ ಸುಖವು ಅಪರಿಚ್ಛಿನ್ನವಾಗಿಲ್ಲ.

4. ''ಶ್ರುತೋಪನಿಷತ್ಕಭಿಧಾನಾತ್''ಅರ್ಚಿರಾದಿ ಮಾರ್ಗವು ಬ್ರಹ್ಮನನ್ನು ಮಿಥ್ಯಾಭೂತವಾಗಿ ಯಾರು ಉಪಾಸನೆ ಮಾಡುತ್ತಾನೋ ಅಂತಹವನಿಗೆ ಮಾತ್ರ ದೊರೆಯುತ್ತದೆಂಬುದು ನಿಮ್ಮ ಸಿದ್ಧಾಂತ. ನಿಜವಾದ ಬ್ರಹ್ಮಜ್ಞಾನಿಗೆ ಈ ಯಾವ ಮಾರ್ಗಗಳೂ ಸಹ ದೊರೆಯುವುದಿಲ್ಲ. ಆದ್ದರಿಂದ ಅರ್ಚಿರಾದಿಮಾರ್ಗ ಗಮನಕ್ಕೆ ಪರಬ್ರಹ್ಮನು ವಿಷಯನಾಗಲು ಸಾಧ್ಯವಿಲ್ಲದ ಕಾರಣ ಅಕ್ಷಿಸ್ಥನು ಬ್ರಹ್ಮನಾಗುವುದಿಲ್ಲ. ಮತ್ತು 'ಶ್ರುತೋಪನಿಷತ್ಕಸ್ಯ' ಎಂದು ಪದವಿಭಾಗ ಮಾಡುವುದಾದರೆ

ಸೂತ್ರದಲ್ಲಿರುವ 'ಕ' ಶಬ್ದವು ವ್ಯರ್ಥವಾಗುತ್ತದೆ. ಸೂತ್ರದಲ್ಲಿರುವ 'ಗತಿ' ಶಬ್ದಕ್ಕೆ 'ಮಾರ್ಗ' ಎಂಬರ್ಥವೂ ಅಸ್ವರಸವಾಗಿದೆ.

5. ''ಅನವಸ್ಥಿತೇರಸಂಭವಾಚ್ಚ ನೇತರಃ'' ಅನವಸ್ಥಾಶಬ್ದಕ್ಕೆ ಅಪ್ರಮಾಣಿಕವಾದ ಅನಂತ ವ್ಯಕ್ತಿ ಕಲ್ಪನೆಯೆಂಬ ದೋಷವು ಅರ್ಥವೆಂದು ಎಲ್ಲರೂ ಒಪ್ಪಿದ್ದಾರೆ. ಇದನ್ನು ಬಿಟ್ಟು ಚಕ್ಷುರಿಂದ್ರಿಯದಲ್ಲಿ ಛಾಯಾಪುರುಷನು ಅವಸ್ಥಿತನಾಗಿಲ್ಲ ಎಂಬರ್ಥವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ಸದಾಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ತಪ್ಪು. ಅಷ್ಟೇ ಅಲ್ಲದೆ 'ಉಪಪತ್ತೇಃ' ಎಂಬ ಮೊದಲನೇ ಸೂತ್ರದಿಂದಲೇ ಛಾಯಾಪುರುಷಾದಿಗಳಲ್ಲಿ ಅಮೃತತ್ವಾದಿಗಳು ಇರುವುದಿಲ್ಲವೆಂದು ತಿಳಿಯಲು ಬರುವಾಗ ಪುನಃ ಅದೇ ವಿಚಾರಕ್ಕಾಗಿ ಕೊನೆಯ ಸೂತ್ರ ಹೊರಡುವುದು ವ್ಯರ್ಥ. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ.

ರಾಮಾನುಜರೂ ಸಹ ಅದ್ವೈತಮತದ ಸಿದ್ಧಾಂತಕ್ಕೆ ಜೋತುಬಿದ್ದಿದ್ದಾರೆ. ಅವರನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಿಲ್ಲ. ಇನ್ನು ರಾಮಾನುಜರ ಮತದಲ್ಲಿ ಹೊಸವಿಚಾರವೆಂದರೆ 'ಅತ ಏವ ಚ ಸ ಬ್ರಹ್ಮ' ಎಂಬ ಪ್ರಕ್ಷಿಪ್ತವಾದ ಸೂತ್ರವನ್ನು ನಾಲ್ಕನೆಯ ಸೂತ್ರವೆಂದು ಪರಿಗಣಿಸುತ್ತಾರೆ. ಆದರೆ ಯಾವರೀತಿಯಾಗಿ ಈಕ್ಷತ್ಯಧಿಕರಣದಲ್ಲಿ 'ಪ್ರತಿಜ್ಞಾವಿರೋಧಾತ್'' ಎಂಬ ಸೂತ್ರವನ್ನು ಪ್ರಕ್ಷಿಪ್ತವಾದ್ದರಿಂದ ಉಪೇಕ್ಷಿಸಲಾಗಿತ್ತೋ ಅದರಂತೆ ಇದನ್ನೂ ಸಹ ಉಪೇಕ್ಷಿಸಬೇಕು.

ಅದ್ವೈತಿಗಳು ಏನೇ ವ್ಯಾಖ್ಯಾನಿಸಿದರೂ ಎಲ್ಲಾ ಅಧಿಕರಣಗಳಂತೆ ಇಲ್ಲಿಯೂ ಸಹ ಜೀವಬ್ರಹ್ಮಭೇದವನ್ನೇ ಒಪ್ಪಿಕೊಂಡಂತಾಯಿತು. ಚಕ್ಷುರಿಂದ್ರಿಯದಲ್ಲಿ ಜೀವನು ನೆಲೆಸಿಲ್ಲ ಬ್ರಹ್ಮನು ನೆಲೆಸಿದ್ದಾನೆಂದು ಅವರು ಸಾಧಿಸಿದ ಮೇಲೆ ಪುನಃ ಜೀವಬ್ರಹ್ಮಭೇದವನ್ನು ಬಾಯಿಬಿಟ್ಟು ಹೇಳಬೇಕಾಗಿಲ್ಲ.

## ಅಂತರ್ಯಾಮ್ಯಧಿಕರಣ

ಅಂತರ್ಯಾಮ್ಯಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಅಧಿಕರಣದಲ್ಲಿ ಚಕ್ಷುರಂತಃಸ್ಥನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಿದ್ದಾಯಿತು. ಆ ನಿರ್ಣಯಕ್ಕೆ ಅಮೃತತ್ವವನ್ನು ಹೇತುವೆಂದು ಹೇಳಿದರು. ಆದರೆ ವಿಷ್ಣುವಿನಲ್ಲಿ ಅಂತಹ ಅಮೃತತ್ವಾದಿ ಹೇತುಗಳೇ ಕೂಡುವುದಿಲ್ಲವೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಆನಂತರ್ಯ ಸಂಗತಿಯನ್ನು ತಿಳಿಯಬೇಕು.

'ಅಂತರ್ಯಾಮ್ಯಮೃತಃ' ಎಂಬ ಶ್ರುತಿ ವಾಕ್ಯ ಈ ಅಧಿಕರಣಕ್ಕೆ ವಿಷಯವಾಗಿದೆ. ಇಲ್ಲಿ ಕೇಳಿಸುತ್ತಿರುವ ಅಂತರ್ಯಾಮಿಯು ಪ್ರಕೃತ್ಯಾದಿಗಳೇಕಾಗಬಾರದು? ಎಂಬುದು ಪೂರ್ವಪಕ್ಷಿಗಳ ವಾದ. ವಿಷ್ಣುವೇ ಎಂದು ಸಿದ್ಧಾಂತಿಗಳ ನಿರ್ಣಯ. ಆದ್ದರಿಂದ ಒಂದು ವೇಳೆ ಮುಂದೆ ಹೇಳುವ ಪ್ರಕಾರ ಅಂತರ್ಯಾಮಿಯು ಅಚೇತನಪರವಾದರೆ ಆವಾಗ ಜಡವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಉಪಪನ್ನವಾಗುತ್ತದೆ. ಆವಾಗ ರೂಢ್ಯರ್ಥದಲ್ಲಿ ಬಾಧಕವಿಲ್ಲದ ಕಾರಣ ಪ್ರಕೃತ್ಯಾದಿಗಳನ್ನೇ ಶರೀರವಾಗಿ ಶರೀರವಾಗಿವುಳ್ಳ ವಿಷ್ಣುವೆಂಬರ್ಥವನ್ನು ಸ್ವೀಕರಿಸಬೇಕೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರಕೃತ್ಯಾದಿಗಳೇ ಅಂತರ್ಯಾಮಿಯೆಂದು ಪೂರ್ವಪಕ್ಷದ ಫಲ. ಜೀವನಿಗಿಂತ ಅಂತರ್ಯಾಮಿಗೆ ಭೇದವನ್ನು ಹೇಳುವ ವಚನಗಳಿರುವುದಿಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಒಂದು ವೇಳೆ ಚೇತನ ಪರವಾದರೆ ಆವಾಗ ಸಾಕಲ್ಯೇನಾವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಕೂಡುವುದಿಲ್ಲ. ಹೀಗೆ ಬಾಧಕವಿರುವುದರಿಂದ ರೂಢಿಯನ್ನು ಬಿಟ್ಟು ಶೀರ್ಯಮಾಣತ್ವ ಎಂಬ ಯೋಗದಿಂದ ವಿಷ್ಣುವಿನಲ್ಲೂ ಸಹ ಪ್ರಕೃತ್ಯಾದಿಗಳೇ ಶರೀರವಾಗಿವೆಯೆಂಬರ್ಥವನ್ನು ಕೂಡಿಸಬಹುದು. ಆದ್ದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತದ ಫಲ.

ಪೂರ್ವಪಕ್ಷ ಹೀಗಿದೆ - ''ಏಷ ತ ಆತ್ಮಾಅಂತರ್ಯಾಮೀ'' ಎಂಬ ವಿಷಯ ವಾಕ್ಯದಲ್ಲಿ ಪ್ರತಿಪಾದ್ಯವಾದ ಅಂತರ್ಯಾಮಿಯು ಪ್ರಕೃತಿಯೇ ಆಗಿದೆ. ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದರೆ ಶ್ರುತಿಯಲ್ಲಿ

ಹೇಳಲ್ಪಟ್ಟ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನು ಸುಲಭವಾಗಿ ಕೂಡಿಸಬಹುದು. ಪೃಥಿವ್ಯಾದಿಗಳಿಗೆ ಉಪಾದಾನವಾದ್ದರಿಂದ ಸ್ವರೂಪ ಎಂಬರ್ಥದಲ್ಲಿ ಶರೀರಶಬ್ದವನ್ನು ಪ್ರಯೋಗಿಸುವುದು ಕಷ್ಟವಾಗುವುದಿಲ್ಲ. ಆದರೆ ದಿಕ್ ಮೊದಲಾದವುಗಳು ಅಪ್ರಾಕೃತವಾದ್ದರಿಂದ ಪ್ರಕೃತಿಗೆ ಶರೀರಗಳಾಗಿವೆ ಎಂಬ ಮಾತನ್ನು ಕೂಡಿಸುವುದು ಸ್ವಲ್ಪ ಕಷ್ಟವಾಗುತ್ತದೆ. ಆದರೆ ಬ್ರಹ್ಮನು ಅಂತರ್ಯಾಮಿ ಎಂಬ ಪಕ್ಷವನ್ನು ಆಶ್ರಯಿಸಿದಾಗ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನೇ ಕೂಡಿಸಲು ಸಾಧ್ಯವಿಲ್ಲ. 'ಶೀರ್ಯಮಾಣತ್ವ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಲು ಹೊರಟರೆ ಅಪ್ರಾಕೃತವಾದ ದಿಗಾದಿಗಳಲ್ಲಿ ಅದೂ ಸಹ ತಪ್ಪಾಗುತ್ತದೆ. ಆದ್ದರಿಂದ ಪ್ರಕೃತಿಯನ್ನೇ ಅಂತರ್ಯಾಮಿಯೆನ್ನಬೇಕು. ದಿಕ್ ಮೊದಲಾದವನ್ನು ಶರೀರವೆಂದು ಹೇಳಿದ್ದರೆ ಗೌಣಾರ್ಥ ಮಾಡಬೇಕು.

ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದಾಗ ಅನೇಕ ಬಾಧಕಗಳಿಗೆ ಅವಕಾಶವಿದೆ –

ಹೇಗೆಂದರೆ 'ಯಃ ಪೃಥಿವ್ಯಾಂ ತಿಷ್ಠನ್' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ಆಧಾರತ್ವವು ಬಾಧಕವೋ. 'ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ನಿಯಾಮಕತ್ವವು ಬಾಧಕವೋ? ಅಥವಾ 'ಆತ್ಮಾನಂ ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಚೇತನ ನಿಯಾಮಕತ್ವವು ಬಾಧಕವೋ? ಅಥವಾ ಆತ್ಮಾವಿದಿತತ್ವವು ಬಾಧಕವೋ?. ''ಅದೃಷ್ಟೋ ದ್ರಷ್ಟಾಽಶ್ರುತಃ ಶ್ರೋತಾ ಅಮತೋ ಮಂತಾ ಅವಿಜ್ಞಾತೋ ವಿಜ್ಞಾತಾ'' ಎಂಬಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿಗಳು ಬಾಧಕಗಳೋ? ಎಂದು ಪ್ರಶ್ನಿಸುತ್ತೇವೆ ಎಂದರೆ ಈ ಯಾವ ಬಾಧಕಗಳಿಗೂ ಅವಕಾಶವಿಲ್ಲ. ಏಕೆಂದರೆ ಕಾರ್ಯದಲ್ಲಿ ಕಾರಣವಿದೆಯೆಂಬ ಪ್ರಯೋಗವು ಲೋಕದಲ್ಲಿ ಕಾಣಸುತ್ತಿದೆ. ಪೃಥಿವಿ ಹಾಗೂ ಪ್ರಕೃತಿಗಳಿಗೆ ಕಾರ್ಯಕಾರಣ ಭಾವವಿದ್ದರೂ ಅಧಾರಾಧೇಯಭಾವದಿಂದ ವ್ಯವಹರಿಸಬಹುದು.

ಇನ್ನು 'ಪೃಥಿವೀಂ ಯಮಯತಿ' ಎಂಬಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿನಿಯಾಮಕತ್ವವು ಪ್ರಕೃತಿಯಲ್ಲಿ ಕೂಡುವುದಿಲ್ಲವೆಂದು ಹೇಳಬೇಕು. ಆದರೆ ಆತ್ಮನ ಪ್ರವೃತ್ತಿಯು ಶರೀರದ ಮೂಲಕವೇ ಆಗಬೇಕೇ ಹೊರತು ನೇರವಾಗಿ ಆಗುವುದಿಲ್ಲ. ಆದ್ದರಿಂದ ಆತ್ಮನು ಪ್ರಕೃತ್ಯಧೀನವೆಂದು ಹೇಳಬಹುದು.

'ಯಮಾತ್ಮಾ ನ ವೇದ' ಎಂಬಲ್ಲಿ ಆತ್ಮನಿಂದ ಅಂತರ್ಯಾಮಿಯು ತಿಳಿಯಲು ಸಾಧ್ಯವಿಲ್ಲ ಎಂದು ಹೇಳಲಾಗಿದೆ. ಇದನ್ನೂ ಸಹ ಪ್ರಕೃತಿಯಲ್ಲಿ ಕೂಡಿಸಬಹುದು. ಏಕೆಂದರೆ 'ಅಪ್ರತರ್ಕ್ಯಮವಿಜ್ಞೇಯಂ' ಇತ್ಯಾದಿ ವಾಕ್ಯಗಳಂತೆ ಪ್ರಕೃತಿಯನ್ನು ಸಾಕಲ್ಯೇನ ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ.

ಅಂತರ್ಯಾಮಿಯಲ್ಲಿ 'ದ್ರಷ್ಟಾ ಶ್ರೋತಾ' ಇತ್ಯಾದಿಯಾಗಿ ದ್ರಷ್ಟೃತ್ವ, ಶ್ರೋತೃತ್ವಾದಿಗಳು ಕೇಳಿಸುತ್ತಿವೆ. ಇವುಗಳು ಪ್ರಾಕೃತವಾದ ಇಂದ್ರಿಯಗಳು ದರ್ಶನ ಸಾಧನವಾದ್ದರಿಂದ ಪ್ರಕೃತಿಯನ್ನು ದ್ರಷ್ಟಾಶ್ರೋತಾ ಇತ್ಯಾದಿಯಾಗಿ ಹೇಳಬಹುದು. ಏಕೆಂದರೆ ಕರಣದಲ್ಲಿ ಕರ್ತೃತ್ವದ ಪ್ರಯೋಗವನ್ನು ಮಾಡುವುದು ಕಂಡಿದೆ. (ಹಂತಾ ರಾಮಶರಃ ಇತ್ಯಾದಿ ಸ್ಥಳದಲ್ಲಿ) ಅಥವಾ ಅಭಿಮಾನಿಯಾದ ಜೀವನಲ್ಲಿ ದ್ರಷ್ಟೃತ್ವಾದಿಗಳಿರುವುದರಿಂದ ಅಭಿಮನ್ಯಮಾನವಾದ ಪ್ರಕೃತಿಯಲ್ಲೂ ಸಹ ದ್ರಷ್ಟೃತ್ವಾದಿಗಳನ್ನು ಹೇಳಬಹುದು. ಆದ್ದರಿಂದ ಪ್ರಕೃತಿಯೇ ಅಂತರ್ಯಾಮಿಯೆಂದು ಹೇಳಿದಾಗ ಯಾವ ಅಡಚಣೆಯಿರುವುದಿಲ್ಲ.

ನಮ್ಮ ಸಿದ್ಧಾಂತದ ಪ್ರಕಾರ ಪ್ರಕೃತಿ ಹಾಗೂ ಅಭಿಮಾನಿಯಾದ ದೇವತೆಯು ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡಲಾಗಿದೆ. ಆದರೆ ಅದ್ವೈತಿಗಳು ಹಾಗೂ ರಾಮಾನುಜರು ಇದಕ್ಕೆ ವಿರುದ್ಧವಾಗಿ ಜೀವಸಾಮಾನ್ಯನನ್ನು ಪೂರ್ವಪಕ್ಷಕ್ಕೆ ವಿಷಯನೆನ್ನುತ್ತಾರೆ. ಪ್ರಕೃತಿಯಲ್ಲಿ ಜ್ಞಾನವಿಷಯತ್ವವನ್ನು ಹೇಳುವ ದ್ರಷ್ಟೃತ್ವವು ಕೂಡುವುದಿಲ್ಲವೆಂಬ ಒಂದು ಯುಕ್ತಿ ಬಿಟ್ಟರೆ ಬೇರೆ ಯುಕ್ತಿಯನ್ನು ಅವರು ಹೇಳಲಾರರು.

ಇವರ ವಾದದಲ್ಲಿ ಹುರುಳಿಲ್ಲ. ಸ್ವತಃ ಅವರೇ ಈಕ್ಷತ್ಯಧಿಕರಣದಲ್ಲಿ ಪ್ರಕೃತಿಗೆ ಗೌಣವಾದ ಜ್ಞಾನವಿಷಯತ್ವವನ್ನು ಒಪ್ಪಿದ್ದಾರೆ. ಅಷ್ಟೇ ಅಲ್ಲದೆ ಇದೇ ಅಧಿಕರಣದ ಸಿದ್ಧಾಂತದಲ್ಲಿ ಬ್ರಹ್ಮನಿಗೆ ಆರೋಪಿತವಾದ ಜ್ಞಾನವಿಷಯತ್ವವನ್ನು ಒಪ್ಪಿದ್ದಾರೆ. ಹೀಗೆ ಬೇರೆ ಕಡೆ ಗೌಣವಾದ ದ್ರಷ್ಟೃತ್ವವನ್ನು ಒಪ್ಪುವ ಅವರು ಪ್ರಕೃತಿಯಲ್ಲೇಕೆ ಗೌಣವಾದ ದ್ರಷ್ಟೃತ್ವವನ್ನು

ನಿರಾಕರಿಸುತ್ತಾರೆಂಬುದು ಅರ್ಥವಾಗದ ವಿಚಾರ. ಮತ್ತು ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗದಿದ್ದ ಮೇಲೆ ಸೂತ್ರಕಾರರು 'ನಚ ಸ್ಮಾರ್ತಮ್' ಎಂಬ ಸೂತ್ರದಲ್ಲಿ ಪ್ರಕೃತಿಯನ್ನು ನಿಷೇಧಿಸಿದ್ದೂ ಸಹ ವ್ಯರ್ಥವಾಗುತ್ತದೆ.

ಪ್ರಕೃತಿಯು ಈ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯವಾದಂತೆ ಅಭಿಮಾನಿದೇವತೆಯೂ ಸಹ ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡಬಹುದು. ಈ ಪಕ್ಷದಲ್ಲಿ ಪೃಥಿವ್ಯಾದಿಗಳಿಗೆ ಶರೀರತ್ವವನ್ನು ಉಪಪಾದಿಸುವುದು ಸುಲಭವಾಗುತ್ತದೆ. ಆದರೆ ಭಾಮತಿಯಲ್ಲಿ ಒಬ್ಬನೇ ಅಭಿಮಾನಿ ಜೀವನಿಗೆ ಸಮಸ್ತ ಜಗತ್ತಿನ ನಿಯಾಮಕತ್ವವು ಅಸಂಭಾವಿತವಾದ್ದರಿಂದ ಅಭಿಮಾನಿದೇವತೆಯೆಂಬ ಪಕ್ಷವನ್ನು ನಿರಾಕರಿಸಲಾಗಿದೆ.

ಆದರೆ ಅಭಿಮಾನಿದೇವತೆಯನ್ನು ನಿರಾಕರಿಸುವ ಭಾಮತಿಕಾರ ಜೀವಸಾಮಾನ್ಯನನ್ನು ಅಂತರ್ಯಾಮಿಯೆಂದು ಒಪ್ಪಿರುವುದು ಹಾಸ್ಯಾಸ್ಪದ ವಿಚಾರ. ಒಬ್ಬ ಅಭಿಮಾನಿಗೆ ಸಕಲ ಜಗತ್ಪ್ರೇರಕಶಕ್ತಿಯು ಬಾರದಿದ್ದಾಗ ಒಬ್ಬ ಜೀವ ಸಾಮಾನ್ಯನಿಗೆ ಅಂತಹ ಶಕ್ತಿ ಎಲ್ಲಿಂದ ಬರುತ್ತದೆಂದು ತಿಳಿಯುವುದಿಲ್ಲ. ಮತ್ತು ಜೀವಸಾಮಾನ್ಯನು ಅಂತರ್ಯಾಮಿಯೆಂದು ಹೇಳಿದರೆ ಅವನಿಗೆ ಪೃಥಿವೀ, ಪ್ರಾಣ ಮೊದಲಾದವುಗಳ ಸಮುದಾಯವು ಶರೀರವಾಗಿದೆ ಹೊರತು ಕೇವಲ ಪೃಥಿವಿಯಾಗಲೀ, ಕೇವಲ ಪ್ರಾಣಾದಿಗಳಾಗಲೀ ಶರೀರಗಳಾಗಿರುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಕೇವಲ ಪೃಥಿವ್ಯಾದಿ ಶರೀರತ್ವವು ತಪ್ಪಾಗುತ್ತದೆ. ಆದರೆ ಅಭಿಮಾನಿ ದೇವತೆಯಲ್ಲಿ ಆಯಾ ಭೂತಗಳಿಗೆ ಅಭಿಮಾನಿಯಾಗಿದ್ದಾರೆಂಬ ಕಾರಣದಿಂದಲೇ ಅವುಗಳನ್ನು ಶರೀರವೆಂದು ಹೇಳಬಹುದು.

ಆದ್ದರಿಂದ ಅಭಿಮಾನಿದೇವತೆಗಳೇ ಅಂತರ್ಯಾಮಿಯು ಭಿನ್ನನಾದ್ದರಿಂದ ಅಕ್ಷಿಸ್ಥ ಹೊರತು ವಿಷ್ಣುವಲ್ಲವೆಂಬ ಪೂರ್ವಪಕ್ಷವು ದೃಢವಾಗುತ್ತದೆ. ವಿಷ್ಣುವಿನಲ್ಲಿ ಪೃಥಿವ್ಯಾದಿ ಶರೀರತ್ವವನ್ನು ಯೌಗಿಕವಾಗಿ ಹೇಳಬಹುದು. ಆದರೆ ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ರೂಢ್ಯರ್ಥವನ್ನೇ ಸ್ವೀಕರಿಸಬೇಕು. ಬಾಧಕವಿದ್ದಾಗ ರೂಢ್ಯರ್ಥವನ್ನು ಬಿಡಬಹುದಾದರೂ ಇಲ್ಲಿ ಅಂತಹ ಬಾಧಕಗಳೇನೂ ಕಾಣಿಸುತ್ತಿಲ್ಲ.

ಈ ಎಲ್ಲಾ ಕಾರಣಗಳಿಂದ ಅಂತರ್ಯಾಮಿಯು ಭಿನ್ನನಾದ್ದರಿಂದ ಅಕ್ಷಿಸ್ಥ ಪುರುಷನು ವಿಷ್ಣುವಾಗುವುದಿಲ್ಲ. ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವ ಅಥವಾ ಪ್ರಕೃತಿ ಆಗುತ್ತದೆ. ಅಮೃತತ್ವವೂ ಸಹ ಜೀವ ಅಥವಾ ಪ್ರಕೃತಿಯಲ್ಲಿಯೇ ಉಪಪನ್ನವಾಗುತ್ತದೆ. ಹೀಗಿರುವಾಗ ಹಿಂದಿನ ಅಂತರಾಧಿಕರಣದಲ್ಲಿ ಅಮೃತತ್ವವೆಂಬ ಹೇತುವಿನಿಂದ ಅಕ್ಷಿಸ್ಥನಾದವನು ವಿಷ್ಣುವೇ ಆಗುತ್ತಾನೆಂದು ಸಮರ್ಥಿಸುವುದು ಹೇಗೆ ಯುಕ್ತವಾಗುತ್ತದೆ ? ಇಷ್ಟು ಪೂರ್ವಪಕ್ಷಗಳ ಅಭಿಪ್ರಾಯ.

ಅಧಿಕರಣದ ಸಿದ್ಧಾಂತ ಹೀಗಿದೆ – ಸಕಲರಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವನು ಮಹಾವಿಷ್ಣುವೇ ಆಗಿದ್ದಾನೆ. ಯಾವ ಶ್ರುತಿಯು ಹೀಗೆ ಹೇಳುತ್ತಿದೆಯೋ ಅದೇ ಶ್ರುತಿಯಲ್ಲಿ ಕೇಳಿಸುತ್ತಿರುವ ಪೃಥಿವ್ಯಾದ್ಯವಿದಿತತ್ವವು ವಿಷ್ಣುವಿನಲ್ಲಿ ಸುಲಭವಾಗಿ ಬರುತ್ತದೆ. ಪೃಥಿವೀ ಶಬ್ದಕ್ಕೆ ಜಡವೆಂದು ಅರ್ಥವಲ್ಲ. ಹಾಗಾದಲ್ಲಿ ಅಪ್ರಸಕ್ತ ವಿಷಯ ನಿಷೇಧ ಮಾಡಿದಂತಾಗುತ್ತದೆ ಆದ್ದರಿಂದ ಅಭಿಮಾನಿಚೇತನರೆಂಬರ್ಥವನ್ನು ಹೇಳಬೇಕು. ಅಂತಹ ಅಭಿಮಾನಿಚೇತನರಿಂದ ಸಂಪೂರ್ಣವಾಗಿ ತಿಳಿಯಲು ಅಸಮರ್ಥನಾದವನು ಈಶ್ವರನೊಬ್ಬನೇ ಹೊರತು ಪ್ರಕೃತ್ಯಾದಿಗಳಲ್ಲ.

ಅಂತರತ್ವವೂ ಸಹ ವಿಷ್ಣುವಿನ ಧರ್ಮವೇ ಆಗಿದೆ –

ಪೃಥಿವ್ಯಾದ್ಯವಿದಿತತ್ವವು ಪರಮಾತ್ಮನಲ್ಲಿ ಬರುವಂತೆ ಅಂತರತ್ವವೂ ಸಹ ಬರುತ್ತದೆ. ಏಕೆಂದರೆ ಬಾಹ್ಯಪದಾರ್ಥಗಳ ಅಪೇಕ್ಷೆಯಿಲ್ಲದೇ ಯಾರು ವಿಹರಿಸುತ್ತಾರೋ ಅಂತಹವನು 'ಅಂತರಃ' ಎನಿಸುತ್ತಾನೆ. ಮತ್ತು ಅತ್ಯಂತ ಪ್ರಿಯನಾದ್ದರಿಂದಲೂ ಶ್ರೀಹರಿಯು ಅಂತರನೆಂದು ಹೇಳಲ್ಪಟ್ಟಿದ್ದಾನೆ.

ಪೂರ್ವಪಕ್ಷಕ್ಕೆ ಪ್ರಬಲ ಹೇತುವಾಗಿರುವ ಪೃಥಿವ್ಯಾದಿ ಶರೀರತ್ವವೂ ಸಹ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಅಗ್ನಿಯಲ್ಲಿ ಇಂದ್ರ ಶಬ್ದಪ್ರಯೋಗವನ್ನು ಯೌಗಿಕವಾಗಿ ಮತ್ತು ಗೌಣವಾಗಿ ಮಾಡುವಂತೆ ವಿಷ್ಣುವಿನಲ್ಲೂ ಯೌಗಿಕವಾಗಿ ಮತ್ತು ಗೌಣವಾಗಿ ಪೃಥಿವ್ಯಾದಿಶರೀರತ್ವವನ್ನು ಕೂಡಿಸಬೇಕು. ರೂಢ್ಯರ್ಥದಲ್ಲಿ ಬಾಧವಿರುವುದೇ ಇದಕ್ಕೆ ಕಾರಣ.

ಶಾರೀರ ಪದಕ್ಕೆ ಭಾಷ್ಯ ಹಾಗೂ ಟೀಕೆಗಳಲ್ಲಿ ಯೋಗಾರ್ಥವನ್ನಷ್ಟೇ ಹೇಳಲಾಗಿದೆ. ಬೃಹದಾರಣ್ಯಕ ಭಾಷ್ಯದಲ್ಲಿ

ಗೌಣಾರ್ಥವನ್ನು ಹೇಳಲಾಗಿದೆ. ಎರಡೂ ಭಾಷ್ಯಗಳನ್ನು ವಿವಕ್ಷಿಸಿ ಪ್ರಕೃತ ಗ್ರಂಥಕಾರರು ವ್ಯಾಖ್ಯಾನಿಸುತ್ತಿದ್ದಾರೆಂಬ ಅಂಶವನ್ನು ಗಮನಿಸಬೇಕು.

ಪರಮಾತ್ಮನೇ ಅಂತರ್ಯಾಮಿಯೆಂದು ಹೇಳುವುದರಿಂದ 'ಯ ಆತ್ಮನಿ ತಿಷ್ಠನ್' ಎಂಬುದನ್ನು ಸ್ವರಸವಾಗಿ ಅರ್ಥೈಸಿದಂತಾಗುತ್ತದೆ.

ಸೂತ್ರಗಳ ಜೋಡಣೆಯು ಸ್ವಾರಸ್ಯಮಯವಾಗಿದೆ. ಮೊದಲನೆಯ ಸೂತ್ರವು ಸ್ವಪಕ್ಷದಲ್ಲಿ ಸಾಧಕ ಪ್ರಮಾಣವನ್ನು ಹೇಳಿದೆ.

ಎರಡನೆಯ ಸೂತ್ರವು ಪ್ರಧಾನ ಹಾಗೂ ಜೀವಪಕ್ಷಗಳಲ್ಲಿ ಸಾಧಕವಿಲ್ಲವೆಂದು ಹೇಳಿದೆ. ಏಕೆಂದರೆ ಮೂರನೆಯ ಸೂತ್ರದಲ್ಲಿರುವ 'ಶಾರೀರಶ್ಚ' ಎಂಬ ಪದವು ಎರಡನೆಯ ಸೂತ್ರದಲ್ಲೂ ಅನ್ವಯವಾಗುತ್ತದೆ.

ಮೂರನೆಯ ಸೂತ್ರದಲ್ಲಿ ಜೀವಪಕ್ಷದಲ್ಲಿ ಬಾಧಕವನ್ನು ಹೇಳಲಾಗಿದೆ.

ಬೃಹದಾರಣ್ಯಕ ಭಾಷ್ಯದಲ್ಲಿ ಆತ್ಮಶಬ್ದಕ್ಕೆ ಚತುರ್ಮುಖ ಎಂಬರ್ಥವನ್ನು ಹೇಳಿದ್ದಾರೆ. ಆದರೆ ಪ್ರಕೃತ ಜೀವನೆಂಬರ್ಥವನ್ನು ಒಪ್ಪಿ ಜೀವಭೇದದ ವಿಷಯದಲ್ಲಿ ಅದೇ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದ್ದಾರೆ. ಇದು ವಿರುದ್ಧವಲ್ಲವೇ? ಎಂದು ಪ್ರಶ್ನಿಸಬಾರದು. ಚತುರ್ಮುಖಬ್ರಹ್ಮನಿಗೆ ನಿಯಾಮಕನಾದ್ದರಿಂದ ಬ್ರಹ್ಮನು ಚತುರ್ಮುಖಬ್ರಹ್ಮನಿಗಿಂತ ಭಿನ್ನನಾಗಿದ್ದಾನೆಂಬ ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ. ಚತುರ್ಮುಖನಿಂದಲೇ ಭಿನ್ನನಾದ ಮೇಲೆ ಚತುರ್ಮುಖನಿಂದ ಅಭಿಮನ್ಯಮಾನರಾದ ಸಕಲಜೀವರಿಗಿಂತ ಭಿನ್ನನಾಗಿದ್ದಾನೆಂದು ಇನ್ನೂ ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

'ಅಂತರ' ಶಬ್ದಕ್ಕೆ ಬೃಹದಾರಣ್ಯಕ ಭಾಷ್ಯದಲ್ಲಿ 'ಬಾಹ್ಯವಸ್ತುಗಳ ಅಪೇಕ್ಷೆಯಿಲ್ಲದೇ ಪೀಡಿಸುವಿಕೆ' ಎಂಬರ್ಥವನ್ನು ಹೇಳಿದ್ದಾರೆ. ಆದರೆ ಪ್ರಕೃತ ಟೀಕೆಯಲ್ಲಿ ಕೇವಲ ಭೇದವೆಂಬರ್ಥವನ್ನು 'ಅಂತರ' ಶಬ್ದಕ್ಕೆ ಹೇಳಿದ್ದಾರೆ. ಇದರ ವಿರೋಧ ಬರುತ್ತದಲ್ಲವೇ? ಎಂದೂ ಸಹ ಪ್ರಶ್ನಿಸಬಾರದು. 'ಆತ್ಮನೋ ಅಂತರಃ' ಎಂಬ ಶ್ರುತಿಯಲ್ಲಿರುವ ಅಂತರ ಶಬ್ದಕ್ಕೆ ಭೇದವೆಂಬರ್ಥವನ್ನು ಟೀಕೆಯಲ್ಲಿ ವಿವಕ್ಷಿಸಲಾಗಿದೆ. ಆದರೆ ಬೃಹದಾರಣ್ಯಕ ಭಾಷ್ಯದಲ್ಲಿ 'ಆತ್ಮಾನಾಂ ಅಂತರಃ' ಎಂಬಲ್ಲಿರುವ ಅಂತರ ಶಬ್ದವನ್ನು ಸ್ವೀಕರಿಸಿ ಅಂತಃಸ್ಥಿತ್ವ ರಮಣವೆಂಬ ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ಪರಸ್ಪರ ವಿರೋಧವಿರುವುದಿಲ್ಲ.

ಬೃಹದಾರಣ್ಯಕದಲ್ಲಿ ಮೂರು ಪ್ರಕರಣಗಳಿವೆ - 1. ಅಭಿಮಾನಿ ದೇವತಾ ಪ್ರಕರಣ, 2. ಅಧಿದೈವ ಪ್ರಕರಣ, 3. ಅಧ್ಯಾತ್ಮ ಪ್ರಕರಣ ಎಂದು. ಈ ಮೂರು ಪ್ರಕರಣಗಳಲ್ಲಿಯೂ ಅಂತರ್ಯಾಮಿಯಾಗಿ ಹೇಳಲ್ಪಟ್ಟವನು ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂಬ ವಿಚಾರವು ನಿರ್ಧಾರವಾಯಿತು.

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ -

ಬೃಹದಾರಣ್ಯಕೋಪನಿಷತ್ತಿನಲ್ಲಿರುವ 'ಯಃ ಪೃಥಿವ್ಯಾಂ ತಿಷ್ಠನ್' ಎಂಬ ವಾಕ್ಯವನ್ನೇ ಅದ್ವೈತಿಗಳೂ ಸಹ ವಿಷಯವಾಕ್ಯವೆಂದು ಹೇಳುತ್ತಾರೆ. ಈ ವಾಕ್ಯದಲ್ಲಿ ಲೋಕ, ವೇದ, ಯಜ್ಞ, ಪ್ರಾಣಿ ಮತ್ತು ಆತ್ಮ ಇವುಗಳ ಒಳಗಡೆ ನಿಯಾಮಕನಾಗಿ ನೆಲೆಸಿರುವ ವ್ಯಕ್ತಿಯನ್ನು ಪ್ರಸ್ತಾಪ ಮಾಡಲಾಗಿದೆ. ಈ ವ್ಯಕ್ತಿಯು ಅದೃಷ್ಟದ ಮೂಲಕ ಜೀವನಾಗಬಹುದು. ಅಥವಾ ಯೋಗಿಪುರುಷನೂ ಆಗಬಹುದು. ಅಥವಾ ದೇವತೆಗಳಾಗಬಹುದು. ಆದರೆ ಶರೀರವಿಲ್ಲದ ಬ್ರಹ್ಮನು ಅಂತರ್ಯಾಮಿಯಾಗಲು ಸಾಧ್ಯವಿಲ್ಲ. ನಿಯಾಮಕನೂ ಸಹ ಆಗಲಾರನು. ಇಷ್ಟು ಪೂರ್ವಪಕ್ಷ.

ಸರ್ವನಿಯಾಮಕತ್ವವು ಬ್ರಹ್ಮನ ಧರ್ಮವಾಗಿದೆ. ಅವನಿಂದ ನಿಯಮ್ಯವಾದ ಪ್ರಪಂಚವೇ ಶರೀರವಾಗಿದೆ. ಅಥವಾ ತನ್ನಲ್ಲಿರುವ ಮಾಯಾಶಕ್ತಿಯಿಂದ ಶರೀರದ ಅಪೇಕ್ಷೆ ಇಲ್ಲದೆಯೂ ಪ್ರಪಂಚವನ್ನು ನಿಯಮನ ಮಾಡುವ ಸಾಮರ್ಥ್ಯ ಅವನಿಗಿದೆ. ಆತ್ಮನಿಗೆ ಒಬ್ಬ ನಿಯಾಮಕನಿರುವುದಾದರೆ ಅವನಿಗೆ ಮತ್ತೊಬ್ಬ ನಿಯಾಮಕನು ಇರಬೇಕಾಗುತ್ತದೆಂದು ಅನವಸ್ಥಾದೋಷಕ್ಕೆ ಅವಕಾಶವಿಲ್ಲ. ನಿಯಮ್ಯನಾದ ಜೀವಾತ್ಮನು ಮತ್ತು ನಿಯಾಮಕನಾದ ಪರಮಾತ್ಮನು ಒಬ್ಬನೇ

ಆಗಿದ್ದಾನೆ. ಇವರಿಬ್ಬರಿಗೆ ತಾತ್ವಿಕವಾದ ಭೇದವಿರುವುದಿಲ್ಲ. ಮತ್ತು ಈ ಪ್ರಕರಣದಲ್ಲಿ 'ಏಷ ತ ಆತ್ಮಾ' ಎಂಬ ಶ್ರುತಿಯಲ್ಲಿ ಆತ್ಮತ್ವ, ಅಮೃತತ್ವ ಮೊದಲಾದ ಧರ್ಮಗಳನ್ನು ಅದೃಶ್ಯತ್ವಾದಿಧರ್ಮಗಳನ್ನು ಹೇಳಲಾಗಿದೆ. ಇವೆಲ್ಲವೂ ಬ್ರಹ್ಮನ ಅಸಾಧಾರಣಧರ್ಮವಾದ್ದರಿಂದ ಬ್ರಹ್ಮನೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತ.

ಈ ಅಧಿಕರಣ ಶರೀರವು ತಪ್ಪು. ಅಜ್ಞಾನವೇ ಕಲ್ಪಿತವಾದದ್ದು. ಅಜ್ಞಾನ ಕಲ್ಪಿತವಾದ ಜಗತ್ತು ಬ್ರಹ್ಮನ ಶರೀರವಾದರೆ ಶುಕ್ತಿಯ ಅಜ್ಞಾನದಿಂದ ಕಲ್ಪಿತವಾದ ರಜತವೂ ಸಹ ಶುಕ್ತಿಯ ಶರೀರವಾಗಬೇಕಾಗುತ್ತದೆ. ಮತ್ತು ನಮ್ಮಂತೆ ಬ್ರಹ್ಮನೂ ಸಹ ಸಂಸಾರಿಯಾಗಬೇಕಾಗುತ್ತದೆ. ಜಗತ್ತನ್ನು ಸೃಷ್ಟಿ ಮಾಡುವ ಮೊದಲು ಶರೀರ ರಹಿತನಾಗಿ ಇದ್ದಂತೆ ಜಗತ್ತನ್ನು ಸೃಷ್ಟಿಸಿದ ಮೇಲೂ ಶರೀರರಹಿತನಾಗಿಯೇ ಇರಬಹುದಲ್ಲವೇ?

ರೋಗಗ್ರಸ್ಥನಾದ ವ್ಯಕ್ತಿಗೆ ರೋಗವನ್ನು ಪರಿಹರಿಸಲು ಕಾಲ್ಪನಿಕವಾದ ಔಷಧಿಯನ್ನು ನೀಡುವುದರಿಂದ ಅವನ ರೋಗವು ಪರಿಹಾರವಾಗುವುದಿಲ್ಲ. ಅದರಂತೆ ಶರೀರ ಇಲ್ಲದ ವ್ಯಕ್ತಿಗೆ ನಿಯಮನ ಮಾಡಲು ಸಾಧ್ಯವಿಲ್ಲವೆಂದು ಹೇಳಿದಾಗ ಗೌಣವಾದ ಶರೀರವನ್ನು ಒಪ್ಪುವುದರಿಂದೇನೂ ಪ್ರಯೋಜನವಿಲ್ಲ. ಶುದ್ಧಬ್ರಹ್ಮನನ್ನು ನಿಯಾಮಕನೆಂದು ಹೇಳಲು ಸಾಧ್ಯವಿಲ್ಲ. ವಿಶಿಷ್ಟಬ್ರಹ್ಮನನ್ನು ಅವಿದ್ಯಾವಿಷಯನೆಂದು ಹೇಳಲು ಸಾಧ್ಯವಿಲ್ಲ. ಒಟ್ಟಾರೆ ಅದ್ವೈತಸಿದ್ಧಾಂತದಲ್ಲಿ ಸಿಲುಕಿಕೊಂಡಿರುವ ಇಬ್ಬರು ಬ್ರಹ್ಮರಿಗೂ ಏನೂ ಕೆಲಸವಿಲ್ಲ.

ಮತ್ತು ಅದ್ವೈತಿಗಳು ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ನಿಯಮ್ಯನಾದ ಜೀವನಿಗೂ ನಿಯಾಮಕನಾದ ಬ್ರಹ್ಮನಿಗೂ ಅಭೇದವನ್ನು ಒಪ್ಪುವದರ ಮೂಲಕ ಅನವಸ್ಥಾ ದೋಷವನ್ನು ಪರಿಹರಿಸಿದ್ದಾರೆ. ಆದರೆ ಜೀವಾದಿಗಳಿಂದ ಅಭೇದವಿದ್ದ ಮೇಲೆ ಅವರನ್ನು ಬ್ರಹ್ಮನು ಹೇಗೆ ತಾನೇ ನಿಯಮನ ಮಾಡುತ್ತಾನೆ. ಶ್ರುತಿ, ಸೂತ್ರಗಳಲ್ಲೆಲ್ಲಾ ಭೇದವೇ ಹೇಳಲ್ಪಟ್ಟಿರುವಾಗ ಅಭೇದದ ಮಾರ್ಗಕ್ಕೆ ಏಕೆ ಶರಣಾಗುತ್ತಾರೆ. ಇನ್ನು ಕಾಲ್ಪನಿಕ ಭೇದವನ್ನು ಒಪ್ಪುವ ಮೂಲಕ ಕಣ್ಣೊರೆಸುವಂತಹ ಪ್ರಯತ್ನವು ವ್ಯರ್ಥ. ಯಾವರೀತಿಯಾಗಿ ಜೀವಬ್ರಹ್ಮರಿಗೆ ಕಾಲ್ಪನಿಕ ಭೇದವನ್ನು ಒಪ್ಪುತ್ತಾರೋ ಅದರಂತೆ ಈಶ್ವರನನ್ನು ನಿಯಮನ ಮಾಡುವಂತಹ ಕಾಲ್ಪನಿಕ ಭೇದವುಳ್ಳ ಮತ್ತೊಬ್ಬ ವ್ಯಕ್ತಿಯೂ ಇರಬಹುದೆಂದು ಆಪಾದಿಸುತ್ತೇವೆ. ಆದ್ದರಿಂದ ಅದ್ವೈತಿಗಳು ಭಗವಂತನಲ್ಲಿ ಸ್ವಾತಂತ್ರ್ಯವೆಂಬ ಗುಣವನ್ನು ಒಪ್ಪಿಯೇ ತಮಗೆ ಅಂಟಿಕೊಂಡ ದೋಷಗಳನ್ನೆಲ್ಲಾ ಜಾಡಿಸಿಕೊಳ್ಳಬೇಕು. ಬೇರೆ ಉಪಾಯವಿಲ್ಲ. ಅನವಸ್ಥಾ ಪರಿಹಾರಕ್ಕಾಗಿ ಜೀವಬ್ರಹ್ಮರಿಗೆ ಅಭೇದವನ್ನು ಒಪ್ಪುವುದಕ್ಕಿಂತ ಜಡವಾದ ಶರೀರೇಂದ್ರಿಯಾದಿಗಳಿಗೂ ಜೀವನಿಗೂ ಅಭೇದವನ್ನು ಒಪ್ಪಿದ್ದರೆ ಸ್ವಲ್ಪವಾದರೂ ಬುದ್ಧಿವಂತಿಕೆಯನ್ನು ತೋರಿಸಿಕೊಂಡಂತಾಗುತ್ತಿತ್ತು. ಜಡಪದಾರ್ಥಗಳೊಟ್ಟಿಗೆ ಅಭೇದವು ಪ್ರಮಾಣ ವಿರುದ್ಧವೆಂದು ಹೇಳುವುದಾದರೆ; 'ಭೇದೇನೈನಮಧೀಯತೇ' ಇತ್ಯಾದಿ ಸೂತ್ರಗಳಲ್ಲಿ ಜೀವಬ್ರಹ್ಮರ ಭೇದವನ್ನೂ ಸಹ ನಿರಾಕರಿಸಲಾಗಿದೆ. ಈ ಎಲ್ಲಾ ಕಾರಣಗಳಿಂದ ಜಗತ್ತು ಬ್ರಹ್ಮನ ಅವಿದ್ಯಾಕಲ್ಪಿತವಾದ್ದರಿಂದ ಅವನ ಶರೀರವಾಗಿದೆಯೆಂಬ ಸಿದ್ಧಾಂತವು ಅತ್ಯಂತ ಅಯುಕ್ತವಾಗಿದೆ.

ಅನವಸ್ಥಾದೋಷವನ್ನು ಪರಿಹರಿಸುವುದಕ್ಕಾಗಿ ನಿಯಾಮಕರಿಗೆ ಭೇದವನ್ನೇನೂ ಒಪ್ಪಬೇಕಾಗಿಲ್ಲ. ಒಂದು ಶರೀರದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳನ್ನು ಒಪ್ಪಲು ಸಾಧ್ಯವಿಲ್ಲದ ಕಾರಣ ಅವರಿಬ್ಬರಿಗೆ ಐಕ್ಯವನ್ನು ಅನಿವಾರ್ಯವಾಗಿ ಹೇಳಬೇಕೆಂದು ಅದ್ವೈತಿಗಳು ಆಕ್ಷೇಪಿಸುತ್ತಾರೆ. ಆದರೆ ಇದನ್ನು ಒಂದೇ ಶರೀರದಲ್ಲಿ ಜೀವಬ್ರಹ್ಮರಿದ್ದಾರೆ. ಅನೇಕ ಅಭಿಮಾನಿದೇವತೆಗಳೂ ಇದ್ದಾರೆಂದು ಹೇಳುವ ದ್ವೈತಿಗಳಿಗೆ ಮನದಟ್ಟಾಗಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ. ಒಂದು ಶರೀರದಲ್ಲಿ ಪಿಶಾಚಿಯು ಸೇರಿಕೊಂಡಾಗ ಇಬ್ಬರು ಚೇತನರಿರುವುದು ನಮ್ಮ ಅನುಭವದಲ್ಲಿ ಕಾಣುತ್ತಿದೆ. ಐತರೇಯೋಪನಿಷತ್ತಿನಲ್ಲಂತೂ ಸ್ಪಷ್ಟವಾಗಿ ''ಹಂತಾಸ್ಮಾತ್ ಶರೀರಾತ್'' ಇತ್ಯಾದಿ ವಾಕ್ಯದಿಂದ ಅನೇಕ ಅಭಿಮಾನಿದೇವತೆಗಳು ಒಂದೇ ಶರೀರದಲ್ಲಿ ಪ್ರವೇಶಿಸಿದ್ದಾರೆಂಬುದು ಕಾಣುತ್ತಿದೆ. ಹೀಗೆ ಹೇಳಿದಾಗ ಏನೂ ಬಾಧಕವಿಲ್ಲ. 'ನಾನ್ಯೋಽತೋಽಸ್ತಿ ದ್ರಷ್ಟಾ'' ಎಂಬ ಶ್ರುತಿಯು ಆಪಾತತಃ ಮತ್ತೊಬ್ಬನಿಲ್ಲ ಎಂದು ಹೇಳಿದಂತೆ ಕಾಣಸಬಹುದು. ಆದರೆ ಸ್ವತಂತ್ರನಾದ ಮತ್ತೊಬ್ಬ ದ್ರಷ್ಟೃಪುರುಷನಿಲ್ಲವೆಂದೇ ಆ ಶ್ರುತಿಯ ಅಭಿಪ್ರಾಯ.

एवेत्यनेन तिष्ठतु तावत् खं ब्रह्मेति पूर्णज्ञानाभिधानमित्याह । विशिष्टेति जीवे व्यभिचारनिरासाय ।।

'ಏವ' ಎಂದು ಹೇಳಿದ್ದರಿಂದ 'ಖಂ ಬ್ರಹ್ಮ' ಎಂದು ಪೂರ್ಣಜ್ಞಾನವೆಂದು ಹೇಳಿರುವುದು ಹಾಗೆಯೇ ಇರಲಿ ಎಂದು ತಿಳಿಸಿದ್ದಾರೆ. ವಿಶಿಷ್ಟ ಎಂಬ ಪದವನ್ನೂ ಹೇಳಿದ್ದರಿಂದ ಬ್ರಹ್ಮನಲ್ಲಿರುವ ಸುಖಪೂರ್ಣತ್ವವು ಜೀವನಲ್ಲಿ ಬರುವುದಿಲ್ಲವೆಂದು ವ್ಯಭಿಚಾರವನ್ನು ಪರಿಹರಿಸಿದ್ದಾರೆ.

अस्तु कं ब्रह्मेत्युक्ता ब्रह्मविद्या । अक्षिविद्या त्वग्निपराऽस्त्वित्यत आह – **श्रुतोपनिषत्कगत्यभिधानाच्च ।। १-२-१६ ।।**

श्रुतेत्युपलक्षणम् । केति ब्रह्मवायू तन्त्रेणोक्तौ । 'प्राणो ब्रह्म कं ब्रह्म' इति तयोः प्रकृतत्वात् । श्रुतोपनिषदां श्रुतमतध्यातैतद्विद्यानां पुंसां केन वायुना कस्य ब्रह्मणो गतेः प्राप्तेः 'स एनान् ब्रह्म गमयति' इत्यभिधानाच्चान्तरो ब्रह्मैवेत्यर्थः ।

अन्यविद्याश्रवणादिनाऽन्यप्राप्तेरयोगादिति भावः ।।

'ಕಂ ಬ್ರಹ್ಮ' ಎಂದು ಹೇಳಿರುವುದು ಬ್ರಹ್ಮವಿದ್ಯೆಯೆಂದು ಒಪ್ಪೋಣ ಆದರೆ ಅಕ್ಷಿ ವಿದ್ಯೆ ಮಾತ್ರ ಅಗ್ನಿಪರವೇ ಆಗಲಿ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಿದ್ದಾರೆ.

ಶ್ರುತೋಪನಿಷತ್ಕಗತ್ಯಭಿಧಾನಾಚ್ಚ (೧-೨-೧೬)

ಶ್ರುತ ಎಂಬುದು ಉಪಲಕ್ಷಣವಾಗಿದೆ. 'ಕಂ ಬ್ರಹ್ಮ' ಎಂಬುದರಿಂದ ಬ್ರಹ್ಮವಾಯುಗಳು ಪ್ರಕೃತರಾದ್ದರಿಂದ ಒಮ್ಮೆ ಉಚ್ಚರಿಸಿದ 'ಕ' ಶಬ್ದದಿಂದಲೇ ಬ್ರಹ್ಮವಾಯುಗಳಿಬ್ಬರೂ ಪ್ರತಿಪಾದ್ಯರಾಗಿದ್ದಾರೆ. ಶ್ರುತೋಪನಿಷದಾಂ = ಅಕ್ಷಿವಿದ್ಯೆ, ಶ್ರವಣ, ಮನನ, ಧ್ಯಾನ ಇವುಗಳನ್ನು ಮಾಡಿದ ಪುರುಷರಿಗೆ ಕೇನ = ವಾಯುವಿನಿಂದ, ಕಸ್ಯ = ಬ್ರಹ್ಮನ, ಗತೇಃ = ಪ್ರಾಪ್ತಿಯು, ಅಭಿಧಾನಾತ್ = 'ಸ ಏನಾನ್ ಬ್ರಹ್ಮ ಗಮಯತಿ' ಎಂದು ಹೇಳಿರುವುದರಿಂದಲೂ ಅಂತರ ಎನಿಸಿದವನು ಬ್ರಹ್ಮನೇ ಆಗುತ್ತಾನೆಂದು ಸೂತ್ರಾರ್ಥ. ಒಬ್ಬರ ವಿದ್ಯೆಯಿಂದ ಮತ್ತೊಬ್ಬರನ್ನು ಹೊಂದುವುದು ಸಾಧ್ಯವಿಲ್ಲವೆಂದು ತಿಳಿಯಬೇಕು.

विपक्षे बाधकेनाप्येवमित्याह –

**अनवस्थितेरसम्भवाच्च नेतरः ।। १-२-१७ ।।**

अन्तर इतरोऽग्निर्न । किन्तु ब्रह्मैव । कुतः? अनवस्थितेः । जीवस्याग्नेर्जीवान्तरप्रेरकत्वे तस्यापि प्रेरकान्तरेण भाव्यम् । तस्यापि तथेत्यनवस्थानात् । अङ्गीकृत्य चेदमुदितम् । अग्नेरपि प्रेर्येण जीवत्वसाम्येन प्रेरणासम्भवाच्चेत्यर्थः ।।

'ಅಂತರ' ಎಂಬ ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಒಪ್ಪದಿದ್ದರೆ ಬಾಧಕವಿದೆಯೆಂದು ಹೇಳುತ್ತಿದ್ದಾರೆ.

ಅನವಸ್ಥಿತೇರಸಂಭವಾಚ್ಚ ನೇತರಃ (೧-೨-೧೭)

ಅಂತರನು ಇತರಃನ = ಬ್ರಹ್ಮನಿಗಿಂತ ಭಿನ್ನನಾದ ಅಗ್ನಿಯಲ್ಲ. ಹೊರತು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಅನವಸ್ಥಿತೇಃ = ಜೀವನೇ ಆದ ಅಗ್ನಿಗೆ ಜೀವಾಂತರಪ್ರೇರಕತ್ವವನ್ನು ಒಪ್ಪಿದರೆ ಅವನಿಗೂ ಮತ್ತೊಬ್ಬ ಪ್ರೇರಕನ ಅವಶ್ಯಕತೆ ಇದೆ. ಆ ಪ್ರೇರಕನಿಗೂ ಮತ್ತೊಬ್ಬ ಪ್ರೇರಕನು ಬೇಕಾಗಿರುವುದರಿಂದ ಅನವಸ್ಥಾ ದೋಷ ಬರುತ್ತದೆ. ಅಗ್ನಿಗೆ ಪ್ರೇರಕತ್ವವನ್ನು ಒಪ್ಪಿದಾಗ ಅನವಸ್ಥಾವನ್ನು ಹೇಳಿದ್ದಾರೆ. ಆದರೆ ಅಗ್ನಿಯು ಪ್ರೇರಕನೇ ಅಲ್ಲ. ಹೊರತಾಗಿ ಪ್ರೇರ್ಯನಾದ ಜೀವನಿಂದ ಸಮಾನಧರ್ಮವುಳ್ಳವನಾದ್ದರಿಂದ ಪ್ರೇರಣೆಯೇ ಇವನಿಗೆ ಅಸಂಭಾವಿತವಾಗಿದೆ. ಈ ಕಾರಣದಿಂದಲೂ ಅಗ್ನಿಯು ಅಂತರ ಎನಿಸಲು ಸಾಧ್ಯವಿಲ್ಲ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅಂತರಾಧಿಕರಣವು ಮುಗಿಯಿತು ॥

* * * * *

# ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ಅಂತರಾಧಿಕರಣ
# ಮತ್ತು
# ವಿಮರ್ಶೆ

ಮಾಯಾವಾದಿಗಳ ಪ್ರಕಾರ ಮತ್ತು ರಾಮಾನುಜರ ಪ್ರಕಾರ ಈ ಅಧಿಕರಣವು 'ಅಂತಸ್ತದ್ಧರ್ಮೋಪದೇಶಾತ್' ಎಂಬ ಅಧಿಕರಣದಿಂದ ಪುನರುಕ್ತವಾಗುತ್ತದೆ. ಮೊದಲು ಮಾಯಾವಾದಿಗಳ ಅಧಿಕರಣ ಶರೀರವನ್ನು ತಿಳಿಯೋಣ -

''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' ಎಂಬುದನ್ನೇ ಮಾಯಾವಾದಿಗಳೂ ಈ ಅಧಿಕರಣದಿಂದ ವಿಷಯವಾಕ್ಯವೆಂದು ಹೇಳುತ್ತಾರೆ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಕಣ್ಣಿನಲ್ಲಿರುವವನು ಛಾಯಾಪುರುಷನೊ? ಅಥವಾ ಬ್ರಹ್ಮನೋ? ಎಂದು ಸಂಶಯ. (ಛಾಯಾಪುರುಷ ಶಬ್ದಕ್ಕೆ ಪ್ರತಿಬಿಂಬ ಎಂದರ್ಥ. ಪರಸ್ಪರ ಇಬ್ಬರು ವ್ಯಕ್ತಿಗಳು ಎದುರುಬದುರು ನಿಂತು ಕಣ್ಣನ್ನು ನೋಡಿದಾಗ ಇಬ್ಬರ ಕಣ್ಣಿನಲ್ಲಿಯೂ ಅವರವರ ಪ್ರತಿಬಿಂಬವು ಕಾಣಿಸುತ್ತದೆ. ಈ ಪ್ರತಿಬಿಂಬವನ್ನೇ ಕಣ್ಣಿನಲ್ಲಿರುವುದೆಂದು ಮಾಯಾವಾದಿಗಳು ಪೂರ್ವಪಕ್ಷ ಮಾಡುತ್ತಾರೆ.)

ಪೂರ್ವಪಕ್ಷ - 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಪಾತೃತ್ವಲಿಂಗವು ಮೊದಲು ತಿಳಿಯುತ್ತದೆ. ಆದ್ದರಿಂದ ಇಬ್ಬರು ಚೇತನರೇ ಈ ಶ್ರುತಿಯಿಂದ ಪ್ರತಿಪಾದ್ಯರೆಂದು ತಿಳಿಯುತ್ತದೆ. ಮೊದಲು ತಿಳಿಯುವ ಈ ವಿಚಾರವನ್ನು ಗೌರವಿಸಿ ಅನಂತರ ತಿಳಿಯುವ ಗುಹಾಪ್ರವೇಶಾದಿಗಳನ್ನು ಹೇಗಾದರೂ ವ್ಯಾಖ್ಯಾನಿಸಬಹುದು. ಅದರಂತೆ ''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' ಎಂಬಲ್ಲಿಯೂ 'ದೃಶ್ಯತೇ' ಎಂಬುದಾಗಿ ಕಣ್ಣಿಗೆ ಕಾಣಿಸುವ ವ್ಯಕ್ತಿಯ ಜ್ಞಾನವು ಮೊದಲು ತಿಳಿಯುತ್ತದೆ. ಈ ಪ್ರತ್ಯಕ್ಷವಿಷಯತ್ವವು ಛಾಯಾಪುರುಷನಲ್ಲೇ ಯುಕ್ತವಾಗುವುದರಿಂದ ಮೊದಲು ತಿಳಿಯಲ್ಪಟ್ಟಿದ್ದಾನೆ. ಆದ್ದರಿಂದ ಮೊದಲು ಪ್ರಾಪ್ತವಾದ ಛಾಯಾಪುರುಷನ ತಿಳುವಳಿಕೆಗೆ ಮನ್ನಣೆ ನೀಡಿ ಅನಂತರ ತಿಳಿಯುವ ಅಮೃತತ್ವ ಅಭಯತ್ವಾದಿಗಳನ್ನು ಛಾಯಾಪುರುಷನಿಗೆ ಅನುಸಾರಿಯಾಗಿ ಅರ್ಥೈಸಬೇಕು. ಅಂದರೆ ಛಾಯಾಪುರುಷನಲ್ಲಿ ಅಮೃತತ್ವ ಅಭಯತ್ವಗಳು ಯಥಾರ್ಥವಾಗಿ ಇಲ್ಲದಿದ್ದರೂ ಕೇವಲ

ಸ್ತೋತ್ರ ಮಾಡುತ್ತಿರುವುದರಿಂದ ಯುಕ್ತವಾಗುತ್ತದೆಂದು 'ಕಥಂಚಿತ್' ವ್ಯಾಖ್ಯಾನಿಸಬೇಕು. ಇದನ್ನೇ ಭಾಮತಿಯಲ್ಲಿ ಹೇಳಿದ್ದಾರೆ -

> ಏಷ ದೃಶ್ಯತೇ ಇತ್ಯೇತತ್ತತ್ರ್ಯಕ್ಷೇಽರ್ಥೇ ಪ್ರಯುಜ್ಯತೇ ।
> ಪರೋಕ್ಷಂ ಬ್ರಹ್ಮ ನ ತಥಾ ಪ್ರತಿಬಿಂಬೇ ತು ಯುಜ್ಯತೇ ॥
> ಉಪಕ್ರಮವಶಾತ್ ಪೂರ್ವಮಿತರೇಷಾಂ ಹಿ ವರ್ಣನಮ್ ।
> ಕೃತಂ ನ್ಯಾಯನಯೇನೈವ ಸ ಖಲ್ವತ್ರಾನುಷಜ್ಯತೇ ॥

'ಏಷಃ ದೃಶ್ಯತೇ' ಎಂಬುದಾಗಿ ಶ್ರುತಿಯು ಪ್ರತ್ಯಕ್ಷ ಸಿದ್ಧವಾದ ವ್ಯಕ್ತಿಯನ್ನು ಪ್ರತಿಪಾದಿಸುತ್ತಿದೆ. ಬ್ರಹ್ಮನು ಪರೋಕ್ಷನಾದ್ದರಿಂದ ಅವನಲ್ಲಿ ಈ ಪ್ರಯೋಗವು ಕೂಡುವುದಿಲ್ಲ. ಆದರೆ ಛಾಯಾಪುರುಷನಲ್ಲಿ ಪ್ರತ್ಯಕ್ಷ ವಿಷಯತ್ವವು ಕೂಡುತ್ತದೆ. ಹೀಗೆ ಉಪಕ್ರಮಕ್ಕೆ ಅನುಗುಣವಾಗಿ ಉಳಿದ ಅಮೃತತ್ವಾದಿಗಳನ್ನು ಅರ್ಥೈಸಬೇಕು. ಹೀಗೆ ಯಾವ ನ್ಯಾಯವನ್ನು ಹಿಂದಿನ ಗುಹಾಧಿಕರಣದಲ್ಲಿ ಹೇಳಲ್ಪಟ್ಟಿದೆಯೋ? ಆ ನ್ಯಾಯವನ್ನೇ ಅನುಷಂಗ ಮಾಡಬೇಕು. ಇಷ್ಟು ಪೂರ್ವಪಕ್ಷ.

ಬ್ರಹ್ಮನೇ 'ಯ ಏಷಃ' ಎಂಬ ಶ್ರುತಿಯಿಂದ ಪ್ರತಿಪಾದ್ಯನು. ಅಮೃತತ್ವ ಅಭಯತ್ವಾದಿಲಿಂಗಗಳು ಅವನಲ್ಲೇ ಯುಕ್ತವಾಗುತ್ತದೆ. ಪ್ರಥಮ ಪ್ರಾಪ್ತವಾದ ಪ್ರತ್ಯಕ್ಷವಿಷಯನಾದ ಛಾಯಾಪುರುಷನನ್ನೇ ವಿವಕ್ಷಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. 'ದೃಶ್ಯತೇ' ಎಂಬ ಪದಕ್ಕಿಂತ ಮೊದಲು ಚೇತನವಾಚಿಯಾದ ಪುರುಷ ಪದವು ಕೇಳಿಸುತ್ತಿದೆ. ಈ ಪುರುಷ ಪದದಿಂದ ಪರಮಾತ್ಮನೇ ತಿಳಿಯುತ್ತಾನೆ. 'ಯ ಏಷಃ' ಎಂಬ ಸರ್ವನಾಮ ಶಬ್ದಗಳು ಸನ್ನಿಹಿತನಾದ ಪುರುಷಪದಪ್ರತಿಪಾದ್ಯನಲ್ಲಿ ಅನ್ವಯವನ್ನು ಹೊಂದಿ. ನಿರಾಕಾಂಕ್ಷಿತವಾಗಿವೆ. ಪುರುಷಪದವಿಲ್ಲದಿದ್ದರೆ 'ಯ ಏಷಃ' ಎಂಬ ಪದವು ಯಾರನ್ನು ಹೇಳುತ್ತಿದೆ ಎಂಬ ಆಕಾಂಕ್ಷೆಯೇ ಶಾಂತವಾಗುತ್ತಿರಲಿಲ್ಲ. ಇದರಂತೆ 'ದೃಶ್ಯತೇ' ಎಂಬ ಪದವೂ ಸಹ ಸನ್ನಿಹಿತನಾದ ಪುರುಷಪದಾರ್ಥದಲ್ಲಿ ಅನ್ವಯವನ್ನು ಹೊಂದಿ ನಿರಾಕಾಂಕ್ಷಿತವಾಗಿದೆ.

ಹಾಗಾದರೆ ಪರೋಕ್ಷನಾದ ಬ್ರಹ್ಮನಲ್ಲಿ 'ದೃಶ್ಯತೇ' ಎಂಬ ಪ್ರತ್ಯಕ್ಷಪದ ಪ್ರಯೋಗವು ಹೇಗೆ ಕೂಡುತ್ತದೆ? ಎಂದು ಶಂಕಿಸಬಾರದು. ಬ್ರಹ್ಮವಿಷಯಕವಾದ ಶಾಸ್ತ್ರಜನ್ಯಜ್ಞಾನವು ಅತ್ಯಂತ ಸ್ಪಷ್ಟವಾಗಿರುವುದರಿಂದ ಶ್ರುತಿಯು ಔಪಚಾರಿಕವಾಗಿ 'ದೃಶ್ಯತೇ' ಎಂದು ಹೇಳಿದೆ. ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಿದ್ದಾರೆ - 'ಯ ಏಷಃ' ಎಂಬೆರಡು ಸರ್ವನಾಮಪದಗಳು ಸಾಕಾಂಕ್ಷಿತವಾಗಿರುವಾಗ ಸನ್ನಿಹಿತವಾದ ಪುರುಷಪದಾರ್ಥದಲ್ಲಿ ಅನ್ವಯವನ್ನು ಹೊಂದಿ ನಿರಾಕಾಂಕ್ಷಿತವಾಗಿದೆ ಎಂದು.

ವಸ್ತುತಃ ಶಾಂಕರ ಭಾಷ್ಯದಲ್ಲಿ "ಕಿಂ ಪ್ರತಿಬಿಂಬ ಉತ ಜೀವಃ ಅಥೇಂದ್ರಿಯಾಸ್ಯಾಧಿಷ್ಠಾತೃದೇವತಾ ಉತ ಪರಮಾತ್ಮಾ" ಪ್ರತಿಬಿಂಬನೋ? ಅಥವಾ, ಇಂದ್ರನೋ? ಅಥವಾ ಅಧಿಷ್ಠಾತೃ ದೇವತೆಯೋ? ಅಥವಾ ಪರಮಾತ್ಮನೋ? ಎಂಬುದಾಗಿ ನಾಲ್ಕು ಬಗೆಯ ಸಂಶಯಕೋಟಿಯನ್ನು ತೋರಿಸಿದ್ದಾರೆ. ಆದರೆ ಗ್ರಂಥಕಾರರು ಎರಡೇ ಕೋಟಿಗಳನ್ನು ತೋರಿಸಿದ್ದಾರಲ್ಲಾ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಭಾಮತಿಯಲ್ಲಿ "ಜೀವದೇವತಯೋರಧಿಕಾಶಂಕಾಽಯೋಗಾತ್ "ಸಂಭವಮಾತ್ರೇಣ ಜೀವದೇವತೇ ಭಾಷ್ಯೇ ಉಪನ್ಯಸ್ತೇ" ವಸ್ತುತಃ ಜೀವ ಹಾಗೂ ದೇವತೆಗಳ ಪಕ್ಷದಲ್ಲಿ ಅಧಿಕಾಶಂಕೆಯು ಇಲ್ಲದ ಕಾರಣದಿಂದ ಕೇವಲ ಸಂಭವಾನ ಪೂರ್ವಕವಾಗಿ ಜೀವ ಹಾಗೂ ದೇವತೆಗಳೆಂಬ ಕೋಟಿಗಳು ಶಂಕರಭಾಷ್ಯದಲ್ಲಿ ಹೇಳಿರುತ್ತಾರೆ." ಹೀಗೆ ಭಾಮತಿಯಲ್ಲಿ ಹೇಳಿರುವ ಪ್ರಯುಕ್ತ ಗ್ರಂಥಕಾರರು ಎರಡೇ ಕೋಟಿಗಳನ್ನು ಪ್ರದರ್ಶಿಸಿರುತ್ತಾರೆ.

ರಾಮಾನುಜರ ಅಧಿಕರಣ ಶರೀರ ಹೀಗಿದೆ - ಅಕ್ಷಿಗೆ ಆಧಾರನಾದ ಪುರುಷನು, ಪ್ರತಿಬಿಂಬನೋ? ಅಥವಾ ಜೀವನೋ? ಅಥವಾ ದೇವತೆಯೋ? ಅಥವಾ ಪರಮಾತ್ಮನೋ? ಎಂದು ಸಂಶಯ. 'ಯ ಏಷಃ' ಎಂಬೆರಡು ಪದಗಳಿರುವುದರಿಂದ ಪ್ರಸಿದ್ಧಾರ್ಥದಲ್ಲಿರುವ 'ದೃಶ್ಯತೇ' ಎಂಬ ಪದವಿರುವುದರಿಂದ ಪ್ರತಿಬಿಂಬಾದಿ ಮೂವರಲ್ಲಿ ಯಾರಾದರೂ ಒಬ್ಬರು 'ಅಕ್ಷಿಗೆ' ಆಧಾರರಾಗಿರುತ್ತಾರೆ. ಉಪಕ್ರಮಕ್ಕೆ ಅನುಸಾರಿಯಾಗಿ ಉಳಿದ ಅಮೃತತ್ವಾದಿಗಳನ್ನು ಶ್ರುತಿಪರವಾಗಿ ಅರ್ಥೈಸಬೇಕೆಂದು ಪೂರ್ವಪಕ್ಷ.

ನಿರೂಪಾಧಿಕತ್ವ, ಆತ್ಮತ್ವ, ಅಮೃತತ್ವ, ಅಭಯತ್ವ, ಸಂಯದ್ವಾಮತ್ವ ಮೊದಲಾದ ಲಿಂಗಗಳೆಲ್ಲವೂ ಪರಮಾತ್ಮನಲ್ಲೇ ಉಪಪನ್ನವಾಗುವುದರಿಂದ ಪರಮಾತ್ಮನೇ ಅಕ್ಷಿಸ್ಥನಾಗಿದ್ದಾನೆ. 'ಯಃ ಚಕ್ಷುಷಿ ತಿಷ್ಠನ್' ಇತ್ಯಾದಿಯಾಗಿ ಬೇರೆ ಶ್ರುತಿಯಿಂದ 'ದೃಶ್ಯತೇ' ಎಂಬ ಪದವು ಪ್ರಸಿದ್ಧನೆಂದಷ್ಟೇ ಹೇಳುತ್ತಿದೆ. 'ಯ ಏಷಃ' ಎಂಬೆರಡು ಪದಗಳು ಮತ್ತು 'ದೃಶ್ಯತೇ' ಎಂಬ ಪದವು ಪರಮಾತ್ಮನನ್ನು ಉಪಾಸನಾ ಮಾಡುವ ಅಧಿಕಾರವುಳ್ಳವರಿಗೆ ಅಪರೋಕ್ಷನಾಗುತ್ತಾನೆಂದಷ್ಟೇ ಹೇಳುತ್ತಿದೆ. ಆದ್ದರಿಂದ ಪರಮಾತ್ಮನೇ ಅಕ್ಷಿಸ್ಥನೆಂದು ಸಿದ್ಧಾಂತ.

ಹೀಗೆ ಅದ್ವೈತಿಗಳು ಹಾಗೂ ರಾಮಾನುಜರು ಒಂದೇ ರೀತಿಯಲ್ಲೇ ಈ ಅಧಿಕರಣವನ್ನು ರಚಿಸಿರುತ್ತಾರೆ.

ಅದ್ವೈತಮತದಲ್ಲಿ ಹಾಗೂ ರಾಮಾನುಜ ಮತದಲ್ಲಿ ಅಂತಸ್ಥತ್ವಾಧಿಕರಣದಿಂದ ಈ ಅಧಿಕರಣವು ಪುನರುಕ್ತವಾಗಿದೆ. ಏಕೆಂದರೆ ಅಂತಸ್ಥತ್ವಾಧಿಕರಣದಲ್ಲಿ ಆದಿತ್ಯನಲ್ಲಿದ್ದಾನೆಂದು ಹೇಳುವುದರ ಜೊತೆಗೆ ಅಕ್ಷಿಯಲ್ಲಿದ್ದಾನೆಂದೂ ಸಹ ಹೇಳಲಾಗಿದೆ.

ಪ್ರಶ್ನೆ - ಅಂತಸ್ಥತ್ವಾಧಿಕರಣದಲ್ಲಿ ಉದ್ಗೀಥೋಪಾಸನೆಯಲ್ಲಿರುವ ಅಕ್ಷಿ ವಾಕ್ಯವು ವಿಷಯವಾಗಿದೆ. ಆದರೆ ಈ ಅಧಿಕರಣದಲ್ಲಿ ಉಪಕೋಸಲವಿದ್ಯೆಯಲ್ಲಿರುವ ಅಕ್ಷಿವಾಕ್ಯವು ವಿಷಯವಾಗಿದೆ. ಹೀಗೆ ಸಮನ್ವಯವಾಗುತ್ತಿರುವ ವಾಕ್ಯಗಳು ವಿಭಿನ್ನವಾಗಿರುವುದರಿಂದ ಪುನರುಕ್ತಿಯನ್ನು ಹೇಗೆ ಹೇಳುತ್ತೀರಿ?

ಉತ್ತರ - ಕೇವಲ ವಿಷಯವಾಕ್ಯದ ಭೇದದಿಂದ ಪುನರುಕ್ತಿಯನ್ನು ಪರಿಹರಿಸಲಾಗದು. ಒಂದೊಂದು ವಾಕ್ಯಕ್ಕೂ ಒಂದೊಂದು ಅಧಿಕರಣ ಹೊರಡುವುದಾದರೆ ಶಾಸ್ತ್ರವು ಪರ್ಯವಸಾನವಾಗದಿರಬೇಕಾದೀತು. ಮತ್ತು ಅಂತಸ್ಥತ್ವಾಧಿಕರಣದ ವಿಷಯವಾಕ್ಯದಂತೆ ಈ ಅಧಿಕರಣದ ವಿಷಯವಾಕ್ಯದಲ್ಲೂ ಸಹ ಬೇರೆಡೆ ಅಸಂಭಾವಿತವಾದ ಅಮೃತತ್ವವೇ ಮೊದಲಾದ ಬ್ರಹ್ಮನ ಧರ್ಮಗಳು ಕೇಳಿಸುತ್ತಿವೆ. ಅಷ್ಟೇ ಅಲ್ಲದೆ ಅಲ್ಲಿ ಒಮ್ಮೆ ಬ್ರಹ್ಮಶಬ್ದವು ಕೇಳಿಸಿದರೆ ಇಲ್ಲಿ ಅನೇಕ ಬಾರಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ಆದ್ದರಿಂದ ಎರಡೂ ಕಡೆ ಬ್ರಹ್ಮನ ಲಿಂಗಗಳು ಸಮಾನವಾಗಿವೆ.

ಆಕ್ಷೇಪ - ಅಂತಸ್ಥತ್ವಾಧಿಕರಣದಿಂದ ಪುನರುಕ್ತಿಯನ್ನು ಹೇಳಲಾಗದು. ಏಕೆಂದರೆ ಒಟ್ಟು ನಾಲ್ಕು ಬಗೆಯಲ್ಲಿ ಅಂತಸ್ಥತ್ವಾಧಿಕರಣದಿಂದ ವೈಲಕ್ಷಣ್ಯವನ್ನು ಇಲ್ಲಿ ತಿಳಿಯಬಹುದು -

೧) ಅಂತಸ್ಥತ್ವಾಧಿಕರಣದಲ್ಲಿ ''ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ'' ಎಂಬ ವಾಕ್ಯದಿಂದ ಬ್ರಹ್ಮನು ಆದಿತ್ಯನಲ್ಲಿದ್ದಾನೆಂದು ಸಮರ್ಥಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ಕಣ್ಣಿನಲ್ಲಿದ್ದಾನೆಂದು ಸಮರ್ಥಿಸಲಾಗಿದೆ.

೨) ಅಂತಸ್ಥತ್ವಾಧಿಕರಣದಲ್ಲಿ ಛಾಂದೋಗ್ಯದ ಮೊದಲನೆಯ ಅಧ್ಯಾಯದಲ್ಲಿ 'ಉದ್ಗಿಥೋಪಾಸನೆ'ಯನ್ನು ಹೇಳುವ ವಾಕ್ಯವು ವಿಷಯವಾಗಿದೆ. ಈ ಅಧಿಕರಣದಲ್ಲಿ ಛಾಂದೋಗ್ಯದ ನಾಲ್ಕನೆಯ ಅಧ್ಯಾಯದಲ್ಲಿರುವ ಉಪಕೋಸಲವಿದ್ಯೆಯಲ್ಲಿರುವ ವಾಕ್ಯವು ವಿಷಯವಾಗಿದೆ.

೩) ಅಂತಸ್ಥತ್ವಾಧಿಕರಣದಲ್ಲಿ ''ಸೈವರ್ಕ್ ತತ್ಸಾಮ ತದುಕ್ಥಂ ತದ್ಯಜುಸ್ತದ್ಬ್ರಹ್ಮ' ಎಂಬುದಾಗಿ ಸರ್ವಾತ್ಮಕತ್ವವೇ ಮೊದಲಾದ ಬ್ರಹ್ಮಲಿಂಗಗಳು ಕೇಳಿಸುತ್ತಿವೆ. ಆದರೆ ಈ ಅಧಿಕರಣದಲ್ಲಿ ಅಂತಹ ಬ್ರಹ್ಮಲಿಂಗಗಳು ಇರುವುದಿಲ್ಲ.

೪) ''ಯಃ ಏಷಃ '' ಎಂಬ ಪದಗಳು 'ಪ್ರಸಿದ್ಧ' ಎಂಬರ್ಥವನ್ನು 'ದೃಶ್ಯತೇ' ಎಂಬ ಪದವು ಅಪರೋಕ್ಷ ಎಂಬರ್ಥವನ್ನು ಹೇಳುತ್ತವೆಂದು ಇಲ್ಲಿ ನಿರ್ದೇಶಿಸಲಾಗಿದೆ. ಆದರೆ ಅಲ್ಲಿ ಇದನ್ನು ಹೇಳದ ಕಾರಣ ಆ ವಾಕ್ಯಕ್ಕಿಂತ ವಿಲಕ್ಷಣವಾದ ಶಂಕೆಯನ್ನು ಮಾಡಿದಂತಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಪುನರುಕ್ತಿಯನ್ನು ಪರಿಹರಿಸಬಹುದಲ್ಲವೇ?

ಇದು ತಪ್ಪು. ದೃಶ್ಯತ್ವವಿಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ವಿಷಯವಾಕ್ಯದಲ್ಲೇ ಇರುವ ಪುರುಷತ್ವ, ಅಮೃತತ್ವ, ಮೊದಲಾದ ಧರ್ಮಗಳು ಮತ್ತು ಹಿಂದಿನ ವಾಕ್ಯದಲ್ಲಿರುವ ಅಕ್ಷಿಯಲ್ಲಿರುವವನ ಜ್ಞಾನದಿಂದ ಪಾಪಲೇಪವು ಮುಂದಿನ ವಾಕ್ಯದಲ್ಲಿರುವ ಸಂಯದ್ವಾಮತ್ವಾದಿಗಳು ಛಾಯಾಪುರುಷನಲ್ಲಿ ಸರ್ವಥಾ ಬರಲಾರವು. ಆದ್ದರಿಂದ ಒಂದು ಧರ್ಮವಿಲ್ಲದ ಕಾರಣ ಜೀವಪಕ್ಷವನ್ನು ಬಿಡುವುದಾದರೆ ಅನೇಕ ಧರ್ಮಗಳಿಲ್ಲದ ಕಾರಣ ಛಾಯಾಪುರುಷಪಕ್ಷವನ್ನು ಖಂಡಿತವಾಗಿಯೂ ಬಿಡಬೇಕು.

ಒಂದು ವೇಳೆ ಛಾಯಾಪುರುಷನಲ್ಲಿ ಅಮೃತತ್ವಾದಿ ಧರ್ಮಗಳನ್ನು ಸ್ತುತಿಗೋಸ್ಕರವೆಂದು ಕಥಂಚಿತ್ ಕೂಡಿಸುವುದಾದರೆ ಜೀವಪಕ್ಷದಲ್ಲಿಯೂ ಸಹ ಪ್ರಯತ್ನ ಪಟ್ಟು ದೃಶ್ಯತ್ವಾದಿಧರ್ಮಗಳನ್ನು ಏಕೆ ಕೂಡಿಸಬಾರದು? ಆದ್ದರಿಂದ ಅಂತಸ್ಥತ್ವಾಧಿಕರಣಕ್ಕಿಂತ ವಿಭಿನ್ನವಾದ ಪೂರ್ವಪಕ್ಷವು ಈ ಅಧಿಕರಣದಲ್ಲಿ ಭಾಮತಿಯ ಪ್ರಕಾರ ಹುಟ್ಟಲು ಸಾಧ್ಯವೇ ಇಲ್ಲ?

ನಮ್ಮ ಮತದಲ್ಲಿ ಈ ದೋಷವಿಲ್ಲ. ಏಕೆಂದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಇಂದ್ರಾದಿ ಶ್ರುತಿಗಳಿಂದ ಇಂದ್ರಾದಿಗಳೇ ಅಂತಸ್ಥರೆಂದು ಪೂರ್ವಪಕ್ಷ ಮಾಡಿ ಇಂದ್ರಾದಿಗಳಲ್ಲವೆಂದು ಸಿದ್ಧಾಂತ ಮಾಡಲಾಗಿದೆ. ಆದರೆ ಈ ಅಧಿಕರಣದಲ್ಲಿ ಅಭ್ಯಾಸ, ಅರ್ಥವಾದ ಸಹಿತವಾದ ಬಹುಶ್ರುತಿಗಳಿವೆ. ಈ ಎಲ್ಲಾ ಪ್ರಮಾಣಗಳಿಂದ ಅಗ್ನಿಯು ಚಕ್ಷುರಂತಸ್ಥನೆಂದು ಪೂರ್ವಪಕ್ಷ ಮಾಡಿ ಅಗ್ನಿಯಲ್ಲವೆಂದು ಸಿದ್ಧಾಂತ ಮಾಡಲಾಗಿದೆ. ಹೀಗೆ ಎರಡೂ ಅಧಿಕರಣಗಳಿಗೆ ಬಹಳಷ್ಟು ವೈಲಕ್ಷಣ್ಯವಿರುವುದರಿಂದ ನಮ್ಮ ಸಿದ್ಧಾಂತದ ಪ್ರಕಾರ ಪುನರುಕ್ತಿದೋಷ ಬರುವುದಿಲ್ಲ.

ಇಲ್ಲಿಯ ತನಕ ಅದ್ವೈತಿಗಳ ಅಧಿಕರಣಶರೀರವನ್ನು ನಿರಾಕರಿಸಿದ್ದಾಯಿತು. ಪ್ರಕೃತ ಅವರ ಸೂತ್ರಾರ್ಥವನ್ನು ನಿರಾಕರಿಸುತ್ತಿದ್ದಾರೆ. ಮೊದಲನೆಯ ಸೂತ್ರವನ್ನು ನಮ್ಮ ಮತದ ಪ್ರಕಾರ ಕ್ರಿಯಾಲಿಂಗಸಮನ್ವಯರೂಪವೆಂದು ಹೇಳುವುದಿಲ್ಲ ಹೊರತಾಗಿ ಒಳಗಿರುವಿಕೆ ಎಂಬ ಧರ್ಮವನ್ನಷ್ಟೇ ಹೇಳುತ್ತಾರೆ. ಈ ಅರ್ಥವನ್ನು ವಿವಕ್ಷಿಸಿದಾಗ ''ಅಂತರುಪಪತ್ತೇಃ'' ಎಂದು ನಿರ್ದೇಶಿಸಿದರೆ ಸಾಕು. 'ಅಂತರ ಉಪಪತ್ತೇಃ' ಎಂಬ 'ರ' ಶಬ್ದದ ಅವಶ್ಯಕತೆ ಇರುವುದಿಲ್ಲ. ಆದ್ದರಿಂದ ಸೂತ್ರದ ಪ್ರತಿಜ್ಞೆಯೇ ಅದ್ವೈತಿಗಳ ಪ್ರಕಾರ ತಪ್ಪಾಗುತ್ತದೆಂದು 'ಸೂತ್ರಕ್ರಮಸ್ತು' ಇತ್ಯಾದಿ ಹಿಂದಿನ ಗ್ರಂಥದಿಂದಲೇ ತಿಳಿಸಿದಂತಾಯಿತು. ಇನ್ನು 'ಉಪಪತ್ತೇಃ' ಎಂಬ ಹೇತ್ವಂಶವು 'ಕಾರ್ಯಬ್ರಹ್ಮ' ಇತ್ಯಾದಿ ಗ್ರಂಥದಿಂದ ದೂಷಿಸಿದಂತಾಯಿತು ಎಂಬ ಅಭಿಪ್ರಾಯದಿಂದ ಪ್ರತ್ಯೇಕವಾಗಿ ಇಲ್ಲಿ ಗ್ರಂಥಕಾರರು ಪ್ರಥಮ ಸೂತ್ರವನ್ನು ದೂಷಣೆ ಮಾಡಿಲ್ಲ. ಮುಂದಿನ 'ಸ್ಥಾನಾದಿವ್ಯಪದೇಶಾಚ್ಚ' ಇತ್ಯಾದಿ ಸೂತ್ರಗಳನ್ನು

ದೂಷಿಸಲು ಹೊರಟಿದ್ದಾರೆ. ಮೊದಲು ಎರಡನೆಯ ಸೂತ್ರಾರ್ಥವನ್ನು ಅನುವಾದ ಮಾಡಿ 'ಯಚ್ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

ಪ್ರಥಮಸೂತ್ರದ ಮೇಲೆ ಬರುವ ಅನುಪಪತ್ತಿಯ ಪರಿಹಾರಕ್ಕಾಗಿ ಎರಡನೆಯ ಸೂತ್ರವು ಹೊರಟಿದೆಯೆಂದು ಅದ್ವೈತಿಗಳು ಹೇಳುತ್ತಾರೆ. ಹೊರತು ನಾವು ಹೇಳುವಂತೆ ಅಕ್ಷಿಸ್ಥನಾದವನು ಬ್ರಹ್ಮನೆಂಬ ವಿಷಯದಲ್ಲಿ ಈ ಸೂತ್ರವು ಮತ್ತೊಂದು ಹೇತುವನ್ನು ಹೇಳುತ್ತಿದೆಯೆಂದು ವ್ಯಾಖ್ಯಾನಿಸುವುದಿಲ್ಲ.

ಎಲ್ಲೆಡೆ ಇರುವ ಬ್ರಹ್ಮನು ಅತ್ಯಲ್ಪಸ್ಥಾನವಾದ ಚಕ್ಷುರಿಂದ್ರಿಯದಲ್ಲಿ ಇರದಿದ್ದರೂ ಕೇವಲ ಉಪಾಸನೆಗೋಸ್ಕರ ಅಕ್ಷಿಸ್ಥನೆಂದು ಶ್ರುತಿಯು ಹೇಳುತ್ತಿದೆಯೆಂಬುದಾಗಿ ಎರಡನೆಯ ಸೂತ್ರದಲ್ಲಿ ವ್ಯಾಖ್ಯಾನಿಸುತ್ತಾರೆ. ಅಂದರೆ 'ಯಃ ಪೃಥಿವ್ಯಾಂ ತಿಷ್ಠನ್' ಎಂದು ಉಪಕ್ರಮವಾದ ಪ್ರಕರಣದಲ್ಲಿ 'ಯಶ್ಚಕ್ಷುಷಿ ತಿಷ್ಠನ್' ಎಂಬುದಾಗಿ ಚಕ್ಷುಸ್ಸಿನ ಅಂತರ್ಯಾಮಿಯಾಗಿರುವನೆಂಬ ಸ್ಥಾನವನ್ನು ನಿರ್ದೇಶಿಸಿದ್ದು ಕೇವಲ ಉಪಾಸನೆಗೋಸ್ಕರ ''ಯ ಏಷೋಽಂತರಕ್ಷಿಣಿ'' ಎಂದು ಹೇಳಿರುವುದರಿಂದ.

ಅದ್ವೈತಿಗಳು 'ಸುಖವಿಶಿಷ್ಟಾಭಿಧಾನಾದೇವಚ' ಎಂಬ ಮೂರನೇ ಸೂತ್ರವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. - ಪ್ರಕರಣದ ಆರಂಭದಲ್ಲಿ ''ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ'' ಎಂದು ಸುಖವಿಶಿಷ್ಟನಾದ ಬ್ರಹ್ಮನನ್ನು ಹೇಳಿರುವುದರಿಂದಲೂ ಪ್ರಕೃತ ಶ್ರುತಿಯಲ್ಲಿ ಹೇಳಲ್ಪಟ್ಟ ಅಕ್ಷಿಸ್ಥನು ಪರಬ್ರಹ್ಮನೇ ಆಗುತ್ತಾನೆ. ಆದ್ದರಿಂದಲೇ ಅಗ್ನಿದೇವತೆಯು ತನ್ನ ಮಹತ್ವವನ್ನು ಹೇಳಿ ಮೊದಲು ಪ್ರಸ್ತುತನಾದ ಬ್ರಹ್ಮನ ಬಗ್ಗೆಯೂ ಹೇಳಿ 'ಅಸ್ಮದ್ವಿದ್ಯಾ ಆತ್ಮವಿದ್ಯಾ' ಎಂದು ಉಪದೇಶಿಸಲಾಗಿದೆ. ಕೊನೆಯಲ್ಲಿ ವಿದ್ಯೆ ಫಲಿಸಬೇಕಾದ್ದರಿಂದ ನಿನ್ನ ಗುರುಗಳು ವಿದ್ಯೆಯಿಂದುಂಟಾಗುವ ಫಲವನ್ನು ಉಪದೇಶಿಸಲಾಗಿದೆ. ಮುಂದೆ ಗುರುಗಳು ಪದ್ಮಪತ್ರದಂತೆ ಅಕ್ಷಿಸ್ಥನಲ್ಲಿರುವ ಜ್ಞಾನದಿಂದ ಪಾಪದ ಅಲೇಪ ಹಾಗೂ ಬ್ರಹ್ಮನ ಪ್ರಾಪ್ತಿಯು ಉಂಟಾಗುತ್ತದೆಂದು ಉಪದೇಶಿಸುತ್ತಾರೆ.

ಹೀಗೆ ವ್ಯಾಖ್ಯಾನಿಸುವಾಗ ''ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಂ'' ಎಂಬ ವಾಕ್ಯಶೇಷದಲ್ಲಿ ''ಕಂ ಬ್ರಹ್ಮ'' ಎಂಬಲ್ಲಿರುವ 'ಕ' ಶಬ್ದವು ಲೌಕಿಕಸುಖವನ್ನು ಹೇಳುತ್ತದೆಂಬ ಭ್ರಾಂತಿ ಬರುತ್ತದೆ. ಅದನ್ನು ನಿರಾಸ ಮಾಡುವುದಕ್ಕಾಗಿ ಅಪರಿಚ್ಛಿನ್ನತ್ವವನ್ನು ಸುಖದಲ್ಲಿ ವಿಶೇಷಣವನ್ನಾಗಿ ಹೇಳುವ 'ಖ' ಶಬ್ದವನ್ನು ಶ್ರುತಿಯು ಹೇಳಿದೆ. ಇದರಿಂದ ಸುಖವು ಅಪರಿಚ್ಛಿನ್ನವಾಗಿದೆಯೆಂಬರ್ಥವು

ತಿಳಿಯುತ್ತದೆಂದು ಹೇಳಬೇಕು. ಇಲ್ಲದಿದ್ದರೆ ಕೇವಲ ಸುಖಸಂಬಂಧವನ್ನು ಹೇಳಿದಂತಾಗಿ ಜೀವನೂ ಸಹ ಅಕ್ಷಿಸ್ಥನಾಗಬೇಕಾಗುತ್ತದೆ.

'ಶ್ರುತೋಪನಿಷತ್ಕಗತ್ಯಭಿಧಾನಾಚ್ಚ' ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - ಶ್ರುತೋಪನಿಷತ್ಕಸ್ಯ = ರಹಸ್ಯವಿದ್ಯೆಯನ್ನು ತಿಳಿದ ಬ್ರಹ್ಮಜ್ಞಾನಿಯು ಶ್ರುತ್ಯಂತರದಲ್ಲಿ ಪ್ರಸಿದ್ಧವಾದ ಅರ್ಚಿರಾದ - ಮಾರ್ಗವೆಂಬ ಗತಿಯನ್ನು ಹೊಂದುತ್ತಾನೆಂದು ಶ್ರುತ್ಯಂತರದಲ್ಲಿ ಹೇಳಲಾಗಿದೆ. ಆದ್ದರಿಂದ ಪ್ರಕೃತ ಶ್ರುತಿಯಲ್ಲಿ ಅಕ್ಷಿಸ್ಥನಾದವನು ಬ್ರಹ್ಮನೇ ಆಗಿದ್ದಾನೆ. ಏಕೆಂದರೆ ಯಾರು ಬ್ರಹ್ಮಜ್ಞಾನಿಯಲ್ಲವೋ ಅವನಿಗೆ ಅರ್ಚಿರಾದಿ ಮಾರ್ಗದಲ್ಲಿ ಪ್ರವೇಶವಿರುವುದಿಲ್ಲವೆಂದು.

ಇದೂ ಕೂಡ ಸರಿಯಿಲ್ಲ. ನಿಮ್ಮ ಮತದಲ್ಲಿ ಅರ್ಚಿರಾದಿಮಾರ್ಗವು ಉಪಾಸಕನಿಗಷ್ಟೇ ದೊರೆಯುತ್ತದೆ ಹೊರತು ಬ್ರಹ್ಮಜ್ಞಾನಿಗೆ ದೊರೆಯುವುದಿಲ್ಲ. ಅಷ್ಟೇ ಅಲ್ಲದೆ ಸೂತ್ರದಲ್ಲಿ 'ಕಗತ್ಯಭಿಧಾನಾತ್' ಎಂದು ಅನ್ವಯ ಮಾಡುವುದೇ ಸೂಕ್ತ ಹೊರತು 'ಶ್ರುತೋಪನಿಷತ್ಕ' ಎನ್ನುವುದು ಸೂಕ್ತವಲ್ಲ. 'ಕಗತ್ಯಭಿಧಾನಾತ್' ಎಂದು ಹೇಳಿದಾಗ 'ಸ ಏನಾನ್ ಬ್ರಹ್ಮ ಗಮಯತಿ'' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಗತಿಗೆ 'ಕಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ 'ಕ' ಶಬ್ದ ನಿರ್ದಿಷ್ಟವಾದ ಬ್ರಹ್ಮವಿಷಯತ್ವವನ್ನು ಹೇಳಿದಾಗ ಶ್ರುತಿಯನ್ನು ಅನುಸರಿಸಿದಂತಾಗುತ್ತದೆ. ಬ್ರಹ್ಮಪ್ರಾಪ್ತಿ ಸಾಧನವಾದ ವಿದ್ಯೆಗೆ ಸಾಕ್ಷಾತ್ ಬ್ರಹ್ಮವಿಷಯತ್ವವನ್ನು ಹೇಳಿದಂತಾಗುತ್ತದೆ. ವಿದ್ಯೆಗೂ ತತ್ಸಾಧ್ಯವಾದ ಪ್ರಾಪ್ತಿಗೂ ಏಕವಿಷಯತ್ವವೆಂಬ ನಿಯಮವಿರುವುದರಿಂದ ನಮ್ಮ ವ್ಯಾಖ್ಯಾನವೇ ಸಾಧುವಾಗಿದೆ. ಹೊರತು ಮಾರ್ಗಕ್ಕೆ ಅರ್ಚಿರಾದಿತ್ವವನ್ನು ಹೇಳಿದ ಮಾತ್ರದಿಂದ ಈ ಪ್ರಯೋಜನವು ದೊರೆಯುವುದಿಲ್ಲ.

ಮತ್ತು ''ಶೇಷಾದ್ವಿಭಾಷಾ'' ಎಂಬ ಸೂತ್ರದಲ್ಲಿ 'ಕ' ಪ್ರತ್ಯಯವನ್ನು ವಿಕಲ್ಪವಾಗಿ ಹೇಳಿರುವುದರಿಂದ ಬಹುವ್ರೀಹಿಸಮಾಸ ಮಾಡಿದರೂ ಸಹ 'ಕ' ಪ್ರತ್ಯಯವು ವ್ಯರ್ಥವಾಗುತ್ತದೆ. ಮತ್ತು ನಿಮ್ಮ ವ್ಯಾಖ್ಯಾನದಲ್ಲಿ ಸೂತ್ರದಲ್ಲಿರುವ 'ಗತಿ' ಶಬ್ದಕ್ಕೆ ಮಾರ್ಗವೆಂಬರ್ಥವು ಅಸ್ವರಸವಾಗುತ್ತದೆ.

'ಅನವಸ್ಥಿತೇಽಸಂಭವಾಚ್ಚ' ಎಂಬ ಕೊನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡಲಾಗಿದೆ. ಛಾಯೆಯು ನಿರಂತರವಾಗಿ ಚಕ್ಷುರಿಂದ್ರಿಯದಲ್ಲಿ ಇರುವುದಿಲ್ಲ. ಜೀವನಾದರೂ ಸಹ ಸಕಲ ಶರೀರೇಂದ್ರಿಯಗಳ ಸಂಬಂಧವನ್ನು ಹೊಂದಿರುವ ಕಾರಣ ಕೇವಲ ಚಕ್ಷುರಿಂದ್ರಿಯದಲ್ಲಿ ಇರಲಾರನು.

ಮತ್ತು ಅಮೃತತ್ವಾದಿಗಳು ಛಾಯಾಪುರುಷನಲ್ಲಾಗಲೀ, ಜೀವನಲ್ಲಾಗಲೀ ಅಸಂಭಾವಿತವಾದ್ದರಿಂದ 'ನೇತರಃ' = ಇತರ ಪದಾರ್ಥಗಳು ಚಕ್ಷುರಿಂದ್ರಿಯದಲ್ಲಿ ಇರಲು ಸಾಧ್ಯವಿಲ್ಲ ಎಂದು.

ಇದೂ ಸಹ ತಪ್ಪು. 'ಅನವಸ್ಥಿತಿ' ಶಬ್ದಕ್ಕೆ ಅಪ್ರಮಾಣಿಕವಾದ ಅನಂತ ವ್ಯಕ್ತಿಗಳನ್ನು ಕಲ್ಪಿಸುವಿಕೆ ಎಂಬರ್ಥವೇ ಲೋಕದಲ್ಲಿ ಪ್ರಸಿದ್ಧವಾಗಿದೆ ಹೊರತು ''ಇರುವುದಿಲ್ಲ'' ಎಂಬರ್ಥವು ಪ್ರಸಿದ್ಧವಾಗಿಲ್ಲ. ಮತ್ತು 'ಸದಾ' ಶಬ್ದ 'ಚಕ್ಷುಷ್ಯೇವ' ಎಂಬ ಶಬ್ದ ಇವುಗಳನ್ನೆಲ್ಲಾ ಅಧ್ಯಾಹಾರ ಮಾಡಬೇಕಾಗುತ್ತದೆ. ಮತ್ತು ''ಉಪಪತ್ತೇಃ'' ಎಂಬುದರಿಂದಲೇ ಬ್ರಹ್ಮನನ್ನು ಬಿಟ್ಟು ಬೇರೆ ಕಡೆ ಅಮೃತತ್ವ ಮೊದಲಾದವುಗಳು ಅಸಂಭಾವಿತವೆಂಬರ್ಥ ತಿಳಿಯುವುದರಿಂದ ಪುನಃ 'ಅಸಂಭವಾತ್' ಎಂಬ ಪದವು ವ್ಯರ್ಥವಾಗುತ್ತದೆ. ಇದೇ ರೀತಿಯಾಗಿ ಬೇರೆ ಅಧಿಕರಣದಲ್ಲಿರುವ ಸೂತ್ರಗಳಲ್ಲಿಯೂ ಅನುಪಪತ್ತಿಯನ್ನು ತಿಳಿಯಬೇಕು. ಅಥವಾ ಪ್ರಥಮ ಸೂತ್ರದಲ್ಲಿ ಅನುಪಪತ್ತಿಯನ್ನು ತಿಳಿಯಬೇಕು.

ರಾಮಾನುಜರ ಮತವು ಅದ್ವೈತಮತಕ್ಕಿಂತ ಏನೂ ವ್ಯತ್ಯಾಸವಿಲ್ಲದ ಕಾರಣ ಅದ್ವೈತಮತದ ನಿರಾಕರಣೆಯಿಂದಲೇ ಇವರ ಮತವನ್ನೂ ಸಹ ನಿರಾಕರಿಸಿದಂತಾಯಿತು.

ಇನ್ನು ಕೆಲವರು 'ಅತ ಏವ ಚ ಸ ಬ್ರಹ್ಮ' ಎಂಬ ಸೂತ್ರವನ್ನು ಈ ಅಧಿಕರಣದಲ್ಲಿ ಸೇರಿಸುತ್ತಾರೆ. ಆದರೆ ಈಕ್ಷತ್ಯಧಿಕರಣದಲ್ಲಿ 'ಪ್ರತಿಜ್ಞಾವಿರೋಧಾತ್' ಎಂಬ ಸೂತ್ರವನ್ನು ಸೇರಿಸಿದ್ದು ಹೇಗೆ ಪ್ರಕ್ಷಿಪ್ತವಾಗಿದೆಯೋ ಅದರಂತೆ ಇದೂ ಸಹ ಪ್ರಕ್ಷಿಪ್ತವಾಗಿದೆಯೆಂದು ಉಪೇಕ್ಷಿಸಬೇಕು.

ಉಳಿದ ಅಧಿಕರಣಗಳಂತೆ ಈ ಅಧಿಕರಣದಲ್ಲೂ ಸಹ 'ಅನವಸ್ಥಿತೇರಸಂಭವಾತ್' 'ನೇತರಃ' ಎಂಬುದಾಗಿ ಜೀವನನ್ನು ನಿಷೇಧ ಮಾಡಿ ಬ್ರಹ್ಮನನ್ನು ಅಕ್ಷಿಸ್ಥನೆಂದು ಹೇಳಿದ್ದರಿಂದ ಜೀವಬ್ರಹ್ಮರಿಗೆ ಭೇದವನ್ನೇ ಅದ್ವೈತಿಗಳು ಸಾಧಿಸಿದಂತಾಗುತ್ತದೆ.

ಇಲ್ಲಿಗೆ ಅಂತರಾಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅಂತರ್ಯಾಮ್ಯಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ, ತತ್ತ್ವಪ್ರಕಾಶಿಕಾ, ಭಾವದೀಪ

ವಿಶೇಷ ವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅಂತರ್ಯಾಮ್ಯಧಿಕರಣ

## ಬ್ರಹ್ಮಸೂತ್ರ

'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – ।। अन्तर्याम्यधिदैवादिषु तद्धर्मव्यपदेशात् ।। १८ ।।**

**ಸೂತ್ರಾರ್ಥ - 'ಏಷ ಆತ್ಮಾಂऽತರ್ಯಾಮೀ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಅಧಿದೈವಾದಿಪ್ರಕರಣಗಳಲ್ಲಿ ಅವಿದಿತತ್ವವೇ ಮೊದಲಾದ ವಿಷ್ಣುವಿನ ಧರ್ಮಗಳನ್ನು ಹೇಳಿರುವುದರಿಂದ.**

**ಅರ್ಥ** — 'ಏಷ ಆತ್ಮಾ ಅಂತರ್ಯಾಮೀ' ಎಂಬ ಬೃಹದಾರಣ್ಯಕಶ್ರುತಿಯು ಈ ಸೂತ್ರಕ್ಕೆ ವಿಷಯವಾಗಿದೆ. ಇಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ; ಹೊರತು ಪ್ರಕೃತ್ಯಾದಿಗಳಲ್ಲ. ಏಕೆಂದರೆ ಅಧಿದೈವಾದಿಷು = ಅಧಿದೈವ, ಅಧ್ಯಾತ್ಮ, ಅಧಿಭೂತ ಮೊದಲಾದ ಪ್ರಕರಣಗಳಲ್ಲಿ, ತದ್ಧರ್ಮವ್ಯಪದೇಶಾತ್ = ಅಂತರ್ಯಾಮಿಯಲ್ಲಿ 'ಯಂ ಪೃಥಿವೀ ನ ವೇದ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅವಿದಿತತ್ವ ಮೊದಲಾದ ಬ್ರಹ್ಮನ ಧರ್ಮಗಳನ್ನು ಹೇಳಿರುವುದರಿಂದ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

### ಬೃಹದಾರಣ್ಯಕ ಅಂತರ್ಯಾಮಿಯ ಬಗ್ಗೆ ಏನು ಹೇಳುತ್ತದೆ ?

**ब्रह्मसूत्रभाष्यम् –**

**'यः पृथिव्यां तिष्ठन् (पृथिव्या अन्तरो यं पृथिवी न वेद यस्य पृथिवी शरीरं यः पृथिवीमन्तरो यमयत्येष त आत्माऽन्तर्याम्यमृतः') (बृ. ५-७-३) इत्यादि अन्तर्याम्युच्यते ।**

ಅನುವಾದ - 'ಯಾರು ಪೃಥಿವಿಯಲ್ಲಿ ಗರುಡನಲ್ಲಿ ನೆಲೆಸಿ ಅದಕ್ಕಿಂತಲೂ ಭಿನ್ನನಾಗಿ ಇರುವನೋ, ಯಾರನ್ನು ಪೃಥಿವೀ ಅಭಿಮಾನಿ ಗರುಡನು ತಿಳಿಯಲು ಸಾಧ್ಯವಿಲ್ಲವೋ ಯಾರು ಅಲ್ಲಿದ್ದು ಸ್ವರಮಣನಾಗಿ ಎಲ್ಲವನ್ನೂ ನಿಯಮನ ಮಾಡುತ್ತಾನೋ, ಅಂತಹ ಪುರುಷನೇ ನಿನ್ನ ಒಳಗಿದ್ದು ನಿಯಮಿಸುತ್ತಿದ್ದಾನೆ. ಈ ಪುರುಷನೇ ನಿನಗೆ ಸ್ವಾಮಿಯಾಗಿದ್ದಾನೆ. ಎಲ್ಲರ ಅಂತರ್ಯಾಮಿಯೂ ಆಗಿದ್ದಾನೆ. ಮತ್ತು ನಾಶ ರಹಿತನಾಗಿದ್ದಾನೆ'

ಇವೇ ಮೊದಲಾದ ವಾಕ್ಯಗಳಿಂದ ಎಲ್ಲರಲ್ಲಿಯೂ ಒಬ್ಬನೇ ವ್ಯಕ್ತಿಯು ನೆಲೆಸಿದ್ದಾನೆಂದು ಹೇಳಲ್ಪಟ್ಟಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಅಂತಃಸ್ಥತ್ವ ಎಂಬ ಭಾವಧರ್ಮದಿಂದ ಸಹಿತವಾದ ನಿಯಮನ ಎಂಬ ಕ್ರಿಯಾರೂಪವಾದ ಲಿಂಗದ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಲಾಗಿದೆ. ವಿಷಯ-ವಾಕ್ಯವನ್ನು ಉದಾಹರಿಸುವ ಮೂಲಕ ವಿಷಯವನ್ನು ತೋರಿಸುತ್ತಿದ್ದಾರೆ.

ಯಃ = ಯಾವಾತನು, ಪೃಥಿವ್ಯಾಂ = ಭೂಮಿಯಲ್ಲಿ ಗರುಡನಲ್ಲಿ, ತಿಷ್ಠನ್ = ನೆಲೆಸಿದವನಾಗಿ, (ಪೃಥಿವ್ಯಾಃ = ಪೃಥಿವಿಯಿಂದ ಹಾಗೂ ತದಭಿಮಾನಿದೇವತೆಯಿಂದ, ಅಂತರಃ = ಭಿನ್ನನಾಗಿದ್ದಾನೋ, ಯಂ =

ಯಾವಾತನನ್ನು, ಪೃಥಿವೀ = ಪೃಥಿವೀ ಅಭಿಮಾನಿ ಗರುಡನು, ನ ವೇದ = ಸಾಕಲ್ಯೇನ ತಿಳಿಯುವುದಿಲ್ಲವೋ, ಯಸ್ಯ = ಯಾವನಿಗೆ, ಪೃಥಿವೀ = ಪೃಥಿವಿಯೇ, ಪೃಥಿವೀ ಅಭಿಮಾನಿ ದೇವತೆಯೇ, ಶರೀರಂ = ಅವನ ವಶವಾಗಿರುವ ಕಾರಣದಿಂದ ದೇಹವಾಗಿದೆಯೋ, ಯಃ = ಯಾವಾತನು, ಪೃಥಿವೀಂ = ಪೃಥಿವೀ, ಹಾಗೂ ಗರುಡರನ್ನು, ಅಂತರಃ = ಅತ್ಯಂತ ಪ್ರಿಯನಾಗಿ, ಯಮಯತಿ = ಪ್ರೇರಣೆ ಮಾಡುತ್ತಾನೋ, ಏಷಃ = ಅಂತಹ ಈ ಪುರುಷನೇ, ತೇ= ನಿನಗೆ, ಆತ್ಮಾ = ಹೃದಯದಲ್ಲಿ ನೆಲೆಸಿರುವ ಸ್ವಾಮಿಯು ಮತ್ತು, ಅಂತರ್ಯಾಮೀ = ಎಲ್ಲೆಡೆ ಎಲ್ಲರ ಹೃದಯದಲ್ಲಿ ನೆಲೆಸಿರುವವನು, ಅಮೃತಃ = ನಾಶ ರಹಿತನು, ನಿತ್ಯನೂ ಆಗಿದ್ದಾನೆ.)

ಇತ್ಯಾದಿ = ಇವೇ ಮೊದಲಾದ ವಾಕ್ಯಗಳಿಂದ (ವಾಕ್ಯಗಳಲ್ಲಿ), ಅಂತರ್ಯಾಮೀ = ಎಲ್ಲರ ಹೃದಯದಲ್ಲಿ ನೆಲೆಸಿರುವ ವ್ಯಕ್ತಿಯು ಒಬ್ಬನೇ ಎಂದು, ಉಚ್ಯತೇ = ಕರೆಸಿಕೊಳ್ಳುತ್ತಾನೆ.

### ಅಂತರ್ಯಾಮಿಯು ಪ್ರಕೃತಿಯೋ ? ಜೀವನೋ ಆಗಬಹುದೇ ?

**ब्रह्मसूत्रभाष्यम् — तत्र च 'एतदमृतम्' (छां. ४-१५.१) इत्युक्तममृतत्वमुच्यते। स च 'यस्य पृथिवी शरीरम्' इत्यादिना सर्वात्मकत्वात् प्रकृतिस्तत्तज्जीवो वा युक्तः ।**

ಅನುವಾದ - ಆ ಪರಮಾತ್ಮನಲ್ಲಿ 'ಏತದಮೃತಮ್, ಏತದಭಯಮ್' ಇತ್ಯಾದಿಯಾಗಿ ಛಾಂದೋಗ್ಯದಲ್ಲಿ ಹೇಳಿದಂತೆ ನಾಶವಿಲ್ಲದಿರುವಿಕೆಯು ತಿಳಿಯುತ್ತದೆ. 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿಯಾಗಿ ಸರ್ವಾತ್ಮಕತ್ವವು ಹೇಳಲ್ಪಟ್ಟಿದೆ. ಈ ಧರ್ಮವು ಪ್ರಕೃತಿ ಅಥವಾ ಆಯಾ ಜೀವರಲ್ಲಿ ಕಂಡುಬರುವುದರಿಂದ ಅಮೃತತ್ವಧರ್ಮವು ಅವರಿಗೇ ಸರಿಹೊಂದುತ್ತದೆ.

ಪ್ರತಿಪದಾರ್ಥ -- ಹಿಂದಿನ ಅಧಿಕರಣದ ವಿಷಯವಾಕ್ಯದಿಂದ ಸಂಗತಿಯನ್ನು ತೋರಿಸುತ್ತಿದ್ದಾರೆ.

ತತ್ರ ಚ = ಅದೇ ಪ್ರಕರಣದಲ್ಲಿ, ಏತದಮೃತಂ = 'ಏತದಮೃತಮ್, ಏತದಭಯಂ' ಎಂದು ಛಾಂದೋಗ್ಯದಲ್ಲಿ, ಉಕ್ತಮ್ = ಹೇಳಲಾಗಿರುವ. ಅಮೃತಂ = ನಾಶವಿಲ್ಲದಿರುವಿಕೆ ಎಂಬ ಧರ್ಮವು, ಉಚ್ಯತೇ = ಹೇಳಲ್ಪಟ್ಟಿದೆ.

ಸ ಚ = ಇಂತಹ ಧರ್ಮಗಳಿಂದ ವಿಶಿಷ್ಟನಾದವನು, 'ಪೃಥಿವೀ ಶರೀರಂ' = ಪೃಥಿವಿಯೇ ಶರೀರವು, ಯಸ್ಯ = ಯಾವನಿಗಿದೆಯೋ, ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಸರ್ವಾತ್ಮಕತ್ವಾತ್ = ಎಲ್ಲೆಡೆ ವ್ಯಾಪ್ತವಾಗಿರುವಿಕೆ ಎಂಬ ಕಾರಣದಿಂದ, ಪ್ರಕೃತಿಃ = ಚಿತ್‌ಪ್ರಕೃತಿ ಅಥವಾ ಜಡಪ್ರಕೃತಿಯು, ತತ್ತಜ್ಜೀವೋ ವಾ = ಅಥವಾ ಅಲ್ಲಿರುವ ಆಯಾಯಾ ಜೀವರು, ಯುಕ್ತಃ = ಅಂತರ್ಯಾಮಿತ್ವವೆಂಬ ಧರ್ಮವುಳ್ಳವರೆಂದು ಹೇಳಬಹುದು.

### ವಿಷ್ಣುವಿಗೆ ಸರ್ವಶರೀರತ್ವವಿದೆಯೇ ?

**ब्रह्मसूत्रभाष्यम् — नहि विष्णोः पृथिव्यादिशरीरत्वमङ्गीक्रियत इति ।**

ಅನುವಾದ - ವಿಷ್ಣುವಿಗೆ ಪೃಥಿವಿಯ ಶರೀರವಾಗಿರುವಿಕೆಯನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ವಿಷ್ಣುವು ಅಂತರ್ಯಾಮಿಯಲ್ಲ. ಹೀಗೆ ಆಕ್ಷೇಪ.

ಪ್ರತಿಪದಾರ್ಥ - ಯಾವ ರೀತಿಯಾಗಿ ಪ್ರಕೃತಿಯನ್ನು ಅಂತರ್ಯಾಮಿಯೆಂದು ಹೇಳುವ ಲಿಂಗಗಳಿರುವುದರಿಂದ ಪ್ರಕೃತ್ಯಾದಿಗಳನ್ನು ಅಂತರ್ಯಾಮಿಯೆಂದು ಹೇಳಲಾಗುತ್ತದೋ ಅದರಂತೆ ಅಮೃತತ್ವ ಎಂಬ ಲಿಂಗದಿಂದ ವಿಷ್ಣುವನ್ನು ಅಂತರ್ಯಾಮಿಯೆಂದು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಪೃಥಿವ್ಯಾದಿಶರೀರತ್ವಂ = ಪೃಥಿವಿ ಮೊದಲಾದವುಗಳ ದೇಹವಾಗಿರುವಿಕೆಯು, ವಿಷ್ಣೋಃ ನಾಂಗೀಕ್ರಿಯತೇ = ವಿಷ್ಣುವಿಗೆ ಒಪ್ಪುವುದಿಲ್ಲ. ಆದ್ದರಿಂದ ವಿಷ್ಣು ಸರ್ವಾಂತರ್ಯಾಮಿಯು ಆಗುವುದಿಲ್ಲ. ಇತಿ = ಹೀಗೆ ಪೂರ್ವಪಕ್ಷ-ಸ್ವರೂಪವು.

ಅಂತರ್ಯಾಮಿಯು ವಿಷ್ಣುವೇ ?

**ब्रह्मसूत्रभाष्यम् — अत आह -**

**।। अन्तर्याम्यधिदैवादिषु तद्धर्मव्यपदेशात् ।। ।।१८।।**

**'यं पृथिवी न वेद, यः पृथिव्या अन्तरः' (बृ. ५-७-३.) इत्यादिना अधिदैवादिषु तद्धर्मव्यपदेशाद् विष्णुरेवान्तर्यामी ।**

ಅನುವಾದ- ಹಿಂದಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ 'ಯಂ ಪೃಥಿವೀ ನ ವೇದ' ಇತ್ಯಾದಿಯಾಗಿ ಬೃಹದಾರಣ್ಯಕದ ವಾಕ್ಯಗಳಿಂದ ಬೃಹದಾರಣ್ಯಕದಲ್ಲಿರುವ ಅಧಿದೈವ, ಅಧಿಭೂತ, ಅಧ್ಯಾತ್ಮ ಈ ಮೂರು ಪ್ರಕರಣಗಳಲ್ಲಿಯೂ ಅಂತರ್ಯಾಮಿಯೆಂದು ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. ಆ ಧರ್ಮಗಳೂ ಸಹ ವಿಷ್ಣುವಿನದ್ದೇ ಆಗಿವೆ.

ಪ್ರತಿಪದಾರ್ಥ - ಸಿದ್ಧಾಂತವನ್ನು ಮಾಡುತ್ತಾ ಸೂತ್ರವನ್ನು ಹೇಳಿ ವ್ಯಾಖ್ಯಾನಿಸುತ್ತಿದ್ದಾರೆ. ಅತಃ = ಹಿಂದಿನ ಪೂರ್ವಪಕ್ಷದ ನಿರಾಕರಣೆಗೋಸ್ಕರ, ಆಹ = ಸೂತ್ರಕಾರರು 'ಅಂತರ್ಯಾಮ್ಯಧಿ-ದೈವಾದಿಷು ತದ್ಧರ್ಮೋಪದೇಶಾತ್' ಎಂದು ಹೇಳಿದ್ದಾರೆ.

ಪೃಥಿವೀ = ಪೃಥಿವಿಯು ಗರುಡನು, ಯಂ = ಯಾವನನ್ನು , ನ ವೇದ = ತಿಳಿಯಲಾರಳೋ(ನೋ), ಪೃಥಿವ್ಯಾಃ = ಪೃಥಿವಿಯಿಂದ ಗರುಡನಿಂದ, ಯಃ = ಯಾವಾತನು, ಅಂತರಃ = ಅಂತರ್ಯಾಮಿಯಾಗಿದ್ದು ಭಿನ್ನನಾಗಿದ್ದಾನೋ ಪ್ರೇರಣೆ ಮಾಡುತ್ತಾನೋ, ಇತ್ಯಾದಿನಾ = ಇವೇ ಮೊದಲಾದ ಬೃಹದಾರಣ್ಯಕದ ಮಾತುಗಳಿಂದ ಅಧಿದೈವಾದಿಷು = ಅಧಿದೈವ, ಅಧಿಭೂತ, ಅಧ್ಯಾತ್ಮ ಮೊದಲಾದ ಪ್ರಕರಣಗಳಲ್ಲಿ, ತದ್ಧರ್ಮವ್ಯಪದೇಶಾತ್ = ಆ ವಿಷ್ಣುವಿನ ಧರ್ಮಗಳೇ ಹೇಳಲ್ಪಟ್ಟಿರುವುದರಿಂದ, ವಿಷ್ಣುರೇವ = ಮಹಾವಿಷ್ಣುವೇ ಅಂತರ್ಯಾಮೀ = ಸರ್ವಾಂತರ್ಯಾಮಿಯಾಗಿದ್ದಾನೆ.

ಋಗ್ವೇದಸಂಹಿತೆ ಮತ್ತು ಆರಣ್ಯಕಗಳಲ್ಲಿ ಪ್ರತಿಪಾದ್ಯನಾದವನು ವಿಷ್ಣುವೇ

**ब्रह्मसूत्रभाष्यम् –**

**स हि- 'न ते विष्णो जायमानो न जातः' (ऋ.७-९९-२) 'स योऽतोऽश्रुतोऽगतोऽमतोऽनतोऽदृष्टोऽविज्ञातोऽनादिष्टः सर्वेषां भूतानामन्तरपुरुषः' (ऐ.आ. ३-२-४.) इत्यादिनाऽविदितोऽन्तरश्च ।। १८ ।।**

ಅನುವಾದ - ಅಂತಹ ವಿಷ್ಣುವು ಶ್ರುತ್ಯುಕ್ತಧರ್ಮವುಳ್ಳವನು ಎಂದರೆ 'ಎಲೈ ! ವಿಷ್ಣುವೇ ಹಿಂದೆ ಹುಟ್ಟಿದವನಾಗಲೀ, ಮುಂದೆ ಹುಟ್ಟುವ ಜೀವರಾಶಿಗಳಾಗಲೀ ಯಾರೂ ಸಹ ನಿನ್ನ ಮಹಿಮೆಯನ್ನು ಇದುವರೆಗೂ ತಿಳಿದಿಲ್ಲ. ಮುಂದೆ ತಿಳಿಯುವುದೂ ಇಲ್ಲ' ಎಂದು ಋಗ್ವೇದದಲ್ಲಿ;

ಮತ್ತು ಐತರೇಯ ಆರಣ್ಯಕದಲ್ಲಿಯೂ 'ಪ್ರಸಿದ್ಧನಾದ ವಿಷ್ಣುವೇ ಸಂಪೂರ್ಣವಾಗಿ ಕೇಳುವುದರಿಂದ ತಿಳಿಯಲು ಅಸಮರ್ಥನು, ಹೊಂದಲು ಅಶಕ್ಯನು, ತಿಳಿಯಲು ಸಾಧ್ಯವಿಲ್ಲದವನು, ಯಾರಿಗೂ ಮಣಿಯಲಾರದವನು. ಕಾಣಲು ಸಾಧ್ಯವಿಲ್ಲದವನು. ಜ್ಞಾನಕ್ಕೆ ನಿಲುಕದವನು. ಯಾರಿಂದಲೂ ಆಜ್ಞೆಗೆ ಒಳಗಾಗದವನು. ಸಕಲಪ್ರಾಣಿಗಳ ಹೃದಯದಲ್ಲಿ ಭಿನ್ನನಾಗಿ ನೆಲೆಸಿ ಪ್ರೇರಣೆ ಮಾಡುವ ಮಹಾಪುರುಷನು ಇವನೇ --ಹೀಗೆ ಹೇಳಿದೆ. ಇಂತಹ ಶ್ರುತಿಗಳಿಂದ ಅಪ್ರಮೇಯನೂಅಂತರ್ಯಾಮಿಯಾದವನೂ ವಿಷ್ಣುವೇ ಆಗಿದ್ದಾನೆ.

ಪ್ರತಿಪದಾರ್ಥ -- ಅವಿದಿತತ್ವಾದಿಗಳನ್ನು ಅಂತಹ ವಿಷ್ಣುವಿನ ಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಸ ಹಿ = ಅಂತಹ ವಿಷ್ಣುವೇ, ಋಗ್ವೇದದಲ್ಲಿ ಹೀಗೆ ಹೇಳಲ್ಪಟ್ಟಿದ್ದಾನೆ - ಹೇ ವಿಷ್ಣೋ = ಎಲೈ ವಿಷ್ಣುವೇ, ಜಾಯಮಾನಃ = ಮುಂದೆ ಹುಟ್ಟುವ ಸಕಲಜೀವರಾಶಿಗಳು, ಜಾತಃ = ಇಲ್ಲಿಯ ತನಕ ಹುಟ್ಟಿದ ಸಕಲ ಜೀವರಾಶಿಗಳು, ತೇ = ನಿನ್ನ ಅಗಾಧವಾದ ಮಹಿಮೆಯನ್ನು, ನ = ತಿಳಿಯಲು ಸಾಧ್ಯವೇ ಇಲ್ಲ. ಎಂದು.

ಐತರೇಯೋಪನಿಷತ್ತಿನಲ್ಲೂ - ಯಃ = ಯಾವ ಪ್ರಸಿದ್ಧನಾದ, ಸಃ = ಆ ವಿಷ್ಣುವು, ಅಶ್ರುತಃ = ಸಂಪೂರ್ಣವಾಗಿ ಕೇಳುವಿಕೆಯಿಂದ ತಿಳಿಯಲು ಸಾಧ್ಯವಿಲ್ಲದವನು. ಅಗತಃ = ಹೊಂದಲು ಅಸಮರ್ಥನು, ಅಮತಃ = ಮನನದಿಂದ ತಿಳಿಯಲು ಸಾಧ್ಯವಿಲ್ಲದವನು, ಅನತಃ = ಯಾರಿಗೂ ಮಣಿಯಲಾರದವನು, ಅದೃಷ್ಟಃ = ಕಾಣಲು ಸಾಧ್ಯವಿಲ್ಲದವನು, ಅವಿಜ್ಞಾತಃ = ಜ್ಞಾನಕ್ಕೆ ನಿಲುಕದವನು. ಅನಾದಿಷ್ಟಃ = ಯಾರ ಆಜ್ಞೆಗೂ ಒಳಗಾಗದವನು. ಸರ್ವೇಷಾಂ ಭೂತಾನಾಂ = ಸಕಲಪ್ರಾಣಿಗಳ ಅಂತರಪುರುಷಃ = ಒಳಗಡೆ ನೆಲೆಸಿ ಪುರುಷನಾಗಿರುವವನು -- ಹೀಗೆ ಹೇಳಿದೆ.

ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ಅವಿದಿತಃ = ಅಪ್ರಮೇಯನೂ, ಚ = ಮತ್ತು, ಅಂತರಃ = ಅಂತರ್ಯಾಮಿಯಾದವನು (ಮಹಾವಿಷ್ಣುವೇ) ಆಗಿದ್ದಾನೆ.

### ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

### ವಿಷ್ಣುವೇ ಅಂತರ್ಯಾಮಿ ಏಕಾಗಬೇಕು ?

**सत्तर्कदीपावलिः –**

**अन्तर्याम्यधिदैवादिषु तद्धर्मव्यपदेशात् ।।१-२-१८।।**
**नच स्मार्तमतद्धर्माभिलापात् ।। १-२-१९ ।।**
**शारीरश्चोभयेऽपि हि भेदेनैनमधीयते ।। १-२-२० ।।**

**'एतमदमृतमभयम्' इति यदक्ष्यन्तरपुरुषस्य विष्णुत्वसाधकममृतत्वमुक्तं तदन्तर्यामिणः श्रूयते । 'एष त आत्माऽन्तर्याम्यमृतः' इति अन्तर्यामी**

**विष्णोरन्यः प्रतीयत इत्याशङ्क्य विष्णुरेवान्तर्यामीति प्रतिपादयितुमुत्तराधिकरणमारभ्यते ॥**

'ಏತದಮೃತಮಭಯಮ್' ಇತ್ಯಾದಿ ಶ್ರುತಿಯಲ್ಲಿ ಚಕ್ಷುರಿಂದ್ರಿಯದಲ್ಲಿರುವ ಪುರುಷನು ವಿಷ್ಣುವೇ ಆಗಿದ್ದಾನೆನ್ನಲು ಅಮೃತತ್ವವೆಂಬ ಧರ್ಮವನ್ನು ಹೇಳಲಾಯಿತು. ಆದರೆ ಈ ಧರ್ಮವು ಅಂತರ್ಯಾಮಿಯಲ್ಲಿ ಕೇಳಿಸುತ್ತಿದೆ. ಅದು ಹೀಗೆ -- ''ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ'' ಎಂದು. ಒಂದು ವೇಳೆ ಅಂತರ್ಯಾಮಿಯು ವಿಷ್ಣುವಿಗಿಂತ ಭಿನ್ನನಾದರೆ ಅವನೇ ಅಮೃತತ್ವ ಧರ್ಮವುಳ್ಳವನಾಗುತ್ತಾನೆಂದು ಆಶಂಕಿಸಿ, ಅಂತರ್ಯಾಮಿಯಾದವನು ವಿಷ್ಣುವೇ ಆಗಿದ್ದಾನೆಂದು ಪ್ರತಿಪಾದಿಸುವುದಕ್ಕಾಗಿ ಈ ಅಧಿಕರಣವು ಹೊರಟಿರುತ್ತದೆ.

ಕಾಣ್ವರು ಅಂತರ್ಯಾಮಿಯ ಬಗ್ಗೆ ಏನು ಹೇಳುತ್ತಾರೆ ?

**सत्तर्कदीपावळिः – यः पृथिव्यां तिष्ठन्निति ॥ यं पृथिवी न वेद पृथिवी देवता न वेदेत्यर्थः ॥ उभयेऽपीति ॥ काण्वा माध्यन्दिनायनाश्चान्तर्यामिणः सकाशाज्जीवमधीयत इत्यर्थः ।**

''ಯಂ ಪೃಥಿವೀ ನ ವೇದ'' ಇತ್ಯಾದಿ ವಾಕ್ಯವು ಈ ಅಧಿಕರಣದ ವಿಷಯವಾಗಿದೆ. ಯಾವ ವ್ಯಕ್ತಿಯನ್ನು ಪೃಥಿವೀ ಎಂದರೆ ಪೃಥಿವ್ಯಭಿಮಾನಿಯಾದ ದೇವತೆಯು ತಿಳಿಯುವುದಿಲ್ಲವೋ ಎಂದು ಈ ಶ್ರುತಿಗೆ ಅರ್ಥ.

''ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ'' ಎಂಬ ಸೂತ್ರದಲ್ಲಿ 'ಉಭಯೇಽಪಿ' ಎಂದರೆ ಕಾಣ್ವಶಾಖಿಗಳು ಹಾಗೂ ಮಾಧ್ಯಂದಿನ ಶಾಖಿಗಳು ಅಂತರ್ಯಾಮಿಗಿಂತ ಜೀವನು ಭಿನ್ನನಾಗಿದ್ದಾನೆಂದು ಅಧ್ಯಯನ ಮಾಡುತ್ತಾರೆ ಎಂದರ್ಥ.

ಶರೀರ ಶಬ್ದ ಯೌಗಿಕವೇ ?

**सत्तर्कदीपावळिः – 'यस्य पृथिवी शरीरम्' इत्यादिषु शरीरशब्दो न भोगायतनादित्वाभिप्रायः, किन्तु यौगिक इत्याह – शीर्यत इति ॥**

**॥ इति सत्तर्कदीपावळ्याम् अन्तर्याम्याधिकरणम् ॥**

''ಯಸ್ಯ ಪೃಥಿವೀ ಶರೀರಂ'' ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ ಶರೀರಶಬ್ದವು (ರೂಢವಾಗಿರುವ) ಭೋಗಕ್ಕೆ ಆಶ್ರಯವಾದ ದೇಹ ಎಂಬರ್ಥವನ್ನು ಹೇಳುತ್ತಿಲ್ಲ. ಹೊರತು ನಿತ್ಯವಾಗಿ ನಾಶ ಹೊಂದುವ ವಸ್ತುವೆಂದು ಯೌಗಿಕವಾದ ಅರ್ಥವನ್ನು ಹೇಳುತ್ತಿದೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ಅಂತರ್ಯಾಮ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

### ವಿಷಯವಾಕ್ಯದ ಪೂರ್ಣಪಾಠ

**तत्वप्रदीपः – 'यः पृथिव्यां तिष्ठन्' इत्यादीति प्रथमा सप्तम्यर्थे; तृतीयार्थे वा । 'यः पृथिव्यां तिष्ठन् पृथिव्या अन्तरो यं पृथिवी न वेद यस्य पृथिवी शरीरं यः पृथिवीमन्तरो यमयत्येष त आत्माऽन्तर्याम्यमृत' इत्यादिवाक्येषु अन्तर्याम्युच्यते ।**

'ಯಃ ಪೃಥಿವ್ಯಾಂ ತಿಷ್ಠನ್ ಇತ್ಯಾದಿ' ಎಂಬ ಭಾಷ್ಯದ ವಾಕ್ಯದಲ್ಲಿರುವ 'ಇತ್ಯಾದಿ' ಎಂಬ ಪ್ರಥಮಾವಿಭಕ್ತಿಯು 'ಇತ್ಯಾದಿಷು' ಎಂಬ ಸಪ್ತಮ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಅಥವಾ 'ಇತ್ಯಾದಿಭಿಃ' ಎಂಬುದಾಗಿ ತೃತೀಯಾರ್ಥದಲ್ಲಿ ಪ್ರಯುಕ್ತವಾಗಿದೆ. ಭಾಷ್ಯದಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್' ಎಂದಷ್ಟೇ ಉಲ್ಲೇಖಿಸಿದ್ದಾರೆ. ಆದರ ಪೂರ್ಣಪಾಠ ಹೀಗಿದೆ - 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾऽಂತರ್ಯಾಮ್ಯಮೃತಃ' ಇತ್ಯಾದಿ ವಾಕ್ಯಗಳಲ್ಲಿ ಅಂತರ್ಯಾಮಿಯನ್ನು ಹೇಳಲಾಗಿದೆ.

ವಿಶೇಷವಿಚಾರ - ಎಂಬ ಪಾಠವು ಕಾಣಿಸುತ್ತಿದೆ. 'ಇತ್ಯಾದಿನಾ'ಎಂಬುದು ಪಾಠಾಂತರ. ಆದರೆ 'ಇತ್ಯಾದಿ' ಎಂಬ ಸರಿಯಾದ ಪಾಠ. 'ಥ್ಯಾಆದಕ್ಕೆ ಸಂವಾದಿಯಾಗಿಯೇ ತತ್ವಪ್ರದೀಪಕಾರರು 'ಇತ್ಯಾದೀತಿ ಪ್ರಥಮಾ' ಎಂದು ಉಲ್ಲೇಖಿಸಿದ್ದಾರೆ. ಭಾಷ್ಯದ ಮಾತು 'ಇತ್ಯಾದಿ' ಎಂಬುದಾಗಿ ಇರುವುದರಿಂದಲೇ 'ಇತ್ಯಾದಿಷು' ಎಂಬ 'ಸಪ್ತಮ್ಯರ್ಥವನ್ನು ವಿವಕ್ಷಿಸಬೇಕೆಂದು ತತ್ವಪ್ರದೀಪಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ. ಅಥವಾ 'ಇತ್ಯಾದಿಭಿಃ' ಎಂಬುದಾಗಿ ತೃತೀಯಾರ್ಥವನ್ನೂ ಕೂಡ ತಿಳಿಯಬಹುದು. ಆಗ 'ಯ ಪೃಥಿವ್ಯಾಂ ತಿಷ್ಠನ್' ಇತ್ಯಾದಿ ವಾಕ್ಯಗಳಲ್ಲಿ, ಅಥವಾ ಇತ್ಯಾದಿ ವಾಕ್ಯಗಳಿಂದ ಅಂತರ್ಯಾಮಿಯನ್ನು ಪ್ರತಿಪಾದನೆ ಮಾಡಲಾಗಿದೆ ಎಂಬರ್ಥವನ್ನು ಹೇಳಿದಂತಾಗುತ್ತದೆ.

ಮುದ್ರಿತ ಪುಸ್ತಕಗಳಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್' ಎಂಬಲ್ಲಿಂದ ಪ್ರಾರಂಭಿಸಿ 'ಆತ್ಮಾಂತರ್ಯಾಮ್ಯಮೃತಃ' ಎಂಬಲ್ಲಿಯ ತನಕ ಭಾಷ್ಯದ ವಾಕ್ಯವನ್ನಾಗಿ ನೀಡಿದ್ದಾರೆ. ಆದರೆ 'ಯಃ ಪೃಥಿವ್ಯಾಂ ತಿಷ್ಠನ್' ಎಂಬುದಷ್ಟೇ ಭಾಷ್ಯದಲ್ಲಿರುವ ವಿಷಯವಾಕ್ಯದ ಶರೀರವೆಂದು ಪ್ರಾಚೀನಕೋಶಗಳಲ್ಲಿದೆ.

### ಅಕ್ಷಿಪುರುಷನಲ್ಲಿ ಅಮೃತತ್ವ

**तत्वप्रदीपः – तत्र च वाक्येषु तस्मिन्नन्तर्यामिणि 'एतदमृतमभयम्' इत्यक्षिपुरुषस्योक्तममृतत्वं 'एष आत्माऽन्तर्याम्यमृत' इत्युच्यते ।**

ಈ ವಿಷಯ ವಾಕ್ಯಗಳಲ್ಲಿ ಅಂತರ್ಯಾಮಿಯಲ್ಲಿ 'ಏತದಮೃತಭಯಮ್' ಎಂಬುದಾಗಿ ಅಕ್ಷಿಪುರುಷನಿಗೆ ಯಾವ ಅಮೃತತ್ವವು ಹೇಳಲ್ಪಟ್ಟಿದೆಯೋ, ಅದನ್ನು 'ಏಷ ಆತ್ಮಾऽಂತರ್ಯಾಮ್ಯಮೃತಃ' ಎಂಬುದಾಗಿ ಹೇಳಲಾಗಿದೆ.

ವಿಶೇಷವಿಚಾರ - ಭಾಷ್ಯದಲ್ಲಿರುವ 'ತತ್ರ' ಎಂಬ ಪದಕ್ಕೆ 'ತತ್ರ ಚ ವಾಕ್ಯೇಷು' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. 'ತಸ್ಮಿನ್ ಅಂತರ್ಯಾಮಿಣಿ' ಎಂಬುದನ್ನು ಅಧ್ಯಾಹಾರ ಮಾಡಿದ್ದಾರೆ. 'ಇತ್ಯುಕ್ತಮ್' ಎಂಬುದಕ್ಕೆ 'ಅಕ್ಷಿಪುರುಷನಿಗೆ ಹೇಳಲ್ಪಟ್ಟ' ಎಂಬರ್ಥವನ್ನು ಹೇಳಿದ್ದಾರೆ. ಆದ್ದರಿಂದ ಅಕ್ಷಿಪುರುಷನಲ್ಲಿ ಹೇಳಲ್ಪಟ್ಟ ಅಮೃತತ್ವವನ್ನು 'ಏಷ ಆತ್ಮಾಂತರ್ಯಾಮ್ಯಮೃತಃ' ಎಂಬ ವಾಕ್ಯವು ಅಂತರ್ಯಾಮಿಯಲ್ಲಿ ಹೇಳುತ್ತಿದೆ ಎಂಬರ್ಥವು 'ತಚ್ಯುತೇ ಎಂಬ ಭಾಷ್ಯದ ವಾಕ್ಯದಿಂದ ತಿಳಿಯುತ್ತದೆ.

### 'ಸರ್ವಾತ್ಮಕತ್ವಾತ್ ಪ್ರಕೃತಿಃ' ಎಂಬ ಭಾಷ್ಯದ ವ್ಯಾಖ್ಯಾನ

**तत्वप्रदीपः – स च 'यस्य पृथिवी शरीरम्' इत्यादिना सर्वात्मकत्वात् प्रकृतिरित्यादेरयमर्थः । स चान्तर्यामी जडप्रकृतिर्युज्यते । 'यस्य पृथिवी शरीरम्' इति शरीरशब्दस्य स्वरूपवाचकत्वात् । सर्वोपादानत्वेन सर्वात्मकत्वाच्च तस्याः ।**

ಇಲ್ಲಿ ಹೇಳಲ್ಪಟ್ಟ ನಾಶರಹಿತವಾದ ಅಂತರ್ಯಾಮಿಯನ್ನು 'ಯಸ್ಯ ಪೃಥಿವೀ ಶರೀರಮ್' ಎಂಬ ವಾಕ್ಯವು 'ಸರ್ವಾತ್ಮಕ' ಎಂದು ಹೇಳುತ್ತಿದೆ. ಆದ್ದರಿಂದ 'ಸರ್ವಾಕತ್ಮಾತ್ವಾತ್ ಪ್ರಕೃತಿಃ' ಇತ್ಯಾದಿ ಭಾಷ್ಯದ ಅಭಿಪ್ರಾಯ ಹೀಗಿದೆ - ಅಂತರ್ಯಾಮಿಯಾದದ್ದು ಜಡಪ್ರಕೃತಿ ಆಗುತ್ತದೆ. ಏಕೆಂದರೆ 'ಯಸ್ಯ ಪೃಥಿವೀ ಶರೀರಮ್' ಎಂಬ ಶ್ರುತಿಯಲ್ಲಿರುವ 'ಶರೀರ'ಶಬ್ದಕ್ಕೆ ಸ್ವರೂಪ ಎಂದರ್ಥ. ಅಥವಾ ಜಡಪ್ರಕೃತಿಯು ಎಲ್ಲಕ್ಕೂ ಉಪಾದಾನಕಾರಣವಾಗಿರುವುದರಿಂದಲೂ ಸರ್ವಾತ್ಮಕ ಎಂದು ಕರೆಸಿಕೊಳ್ಳುತ್ತದೆ.

ವಿಶೇಷವಿಚಾರ - 'ಶರೀರ' ಶಬ್ದವನ್ನು 'ಸ್ವರೂಪ' ಎಂಬರ್ಥದಲ್ಲಿ ಪ್ರಯೋಗಿಸುವುದು ಇತ್ಯಾದಿ ಪ್ರಯೋಗಗಳಲ್ಲಿ ಕಂಡಿದೆ. ಅದರಂತೆ 'ಯಸ್ಯ ಪೃಥಿವೀ ಶರೀರಮ್' ಎಂಬಲ್ಲಿರುವ ಶರೀರ ಎಂಬ ಶಬ್ದವೂ ಸಹ ಸ್ವರೂಪಾರ್ಥದಲ್ಲಿದೆ ಎಂದು ವಿವಕ್ಷಿಸಿ, 'ಜಡಪ್ರಕೃತಿ' ಎಂಬರ್ಥವನ್ನು ಸುಲಭವಾಗಿ ತಿಳಿಯಬಹುದು.

### ಸರ್ವಾಂತರ್ಯಾಮಿ ಚಿತ್‌ಪ್ರಕೃತಿ

**तत्वप्रदीपः – चित्प्रकृतिर्वा, सर्वाभिमानेन सर्वशरीरत्वात् । सर्वादानेन सर्वव्याप्त्या च सर्वात्मकत्वाच्च तस्याः । तत्तदभिमानी जीवो वा ।**

ಚಿತ್‌ಪ್ರಕೃತಿಯನ್ನೇ ಅಂತರ್ಯಾಮಿ ಎಂದು ಹೇಳಬಹುದು. ಸಕಲಕ್ಕೂ ಅಭಿಮಾನಿ ದೇವತೆಯಾಗಿರುವುದರಿಂದ ಸಕಲವೂ ಕೂಡ ಚಿತ್‌ಪ್ರಕೃತಿಯ ಶರೀರವಾಗಿದೆ. ಮತ್ತು ಎಲ್ಲಾ ಜಡಪದಾರ್ಥಗಳಿಗೆ ಉಪಾದಾನಕಾರಣವಾಗಿರುವುದರಿಂದ ಎಲ್ಲೆಡೆಯೂ ವ್ಯಾಪ್ತವಾಗಿರುವುದರಿಂದ ಸರ್ವಾತ್ಮಕದಿಂದಲೂ ಅಂತರ್ಯಾಮಿ ಎಂದು ಹೇಳಬಹುದು.

ಅಥವಾ ಆಯಾ ಜಡಪದಾರ್ಥಗಳ ಅಭಿಮಾನಿಯಾದ ಜೀವರನ್ನು ಅಂತರ್ಯಾಮಿ ಎಂದು ಹೇಳಬಹುದು.

### ವಿಷ್ಣು ಅಂತರ್ಯಾಮಿ ಅಲ್ಲವೆಂದು ಪೂರ್ವಪಕ್ಷ

**तत्वप्रदीपः – नहि विष्णोः पृथिव्यादिरूपं तदभिमानित्वं वाऽस्ति, येन तच्छरीरत्वमुच्येतेत्यत आह – अन्तर्याम्यधिदैवादिषु तद्धर्मव्यपदेशात् ।**

ವಿಷ್ಣುವಿಗೆ ಪೃಥಿವ್ಯಾದಿಸ್ವರೂಪವನ್ನು ಅಥವಾ ಪೃಥಿವ್ಯಾದಿಗಳ ಅಭಿಮಾನಿತ್ವವನ್ನು ಹೇಳಲು ಸಾಧ್ಯವಿಲ್ಲ. ಹಾಗೇ ಹೇಳಿದ್ದಲ್ಲಿ ಪೃಥಿವ್ಯಾದಿಗಳೇ ವಿಷ್ಣುವಿನ ಶರೀರವೆಂದು ಹೇಳಬಹುದಿತ್ತು. ಈ ಪ್ರಶ್ನೆಗೆ 'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂಬ ಸೂತ್ರದಿಂದ ಉತ್ತರಿಸುತ್ತಿದ್ದಾರೆ.

### ಮಹಾವಿಷ್ಣುವೇ ಅಂತರ್ಯಾಮಿಯೆಂದು ಸಿದ್ಧಾಂತ

**तत्वप्रदीपः – विष्णुरेवान्तर्यामी, अधिदैवाधिभूताध्यात्मप्रकरणेषु अन्तर्यामिणोऽविदितत्वान्तरत्वादिविष्णुधर्मव्यपदेशात् । 'यः पृथिव्यां तिष्ठन्' इत्याद्यधिदैवम् । 'यः सर्वेषु भूतेषु तिष्ठन्' इत्याद्यधिभूतम् । 'यः प्राणेषु तिष्ठन्' इत्यद्यध्यात्मम् ।**

ಮಹಾವಿಷ್ಣುವೇ ಅಂತರ್ಯಾಮಿಯಾಗಿದ್ದಾನೆ. ಅಧಿದೈವ, ಅಧಿಭೂತಾ, ಅಧ್ಯಾತ್ಮ ಈ ಮೂರು ಪ್ರಕರಣಗಳಲ್ಲಿ ಯಾವ ಅಂತರ್ಯಾಮಿಯು ಪ್ರತಿಪಾದ್ಯನಾಗಿದ್ದಾನೋ, ಅವನಲ್ಲಿ ಅವಿದಿತತ್ವ, ಅಂತರತ್ವ ಮೊದಲಾದ ಧರ್ಮಗಳನ್ನು ಹೇಳಲಾಗಿದೆ. ಇವೆಲ್ಲವೂ ವಿಷ್ಣುವಿನ ಅಸಾಧಾರಣಧರ್ಮವಾಗಿರುವುದರಿಂದ ಮಹಾವಿಷ್ಣುವೇ ಅಂತರ್ಯಾಮಿಯಾಗಿದ್ದಾನೆ ಎಂದು ನಿರ್ಣಯವಾಗುತ್ತದೆ.

'ಯಃ ಪೃಥಿವ್ಯಾಂ ತಿಷ್ಠನ್' ಎಂಬುದು ಅಧಿದೈವಪ್ರಕರಣವಾಗಿದೆ. 'ಯಃ ಸರ್ವೇಷು ಭೂತೇಷು ತಿಷ್ಠನ್' ಅಧಿಭೂತವಾದ ಪ್ರಕರಣವಾಗಿದೆ. 'ಯಃ ಪ್ರಾಣೇಷು ತಿಷ್ಠನ್' ಎಂಬುದು ಅಧ್ಯಾತ್ಮ ಪ್ರಕರಣವಾಗಿದೆ.

ವಿಶೇಷವಿಚಾರ - 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ, ಯಂ ಪೃಥಿವೀ ನ ವೇದ, ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।

ಯಾರು ಪೃಥಿವೀನಾಮಕ ಗರುಡ ಹಾಗೂ ಗರುಡಪತ್ನಿಯರಲ್ಲಿದ್ದು ಅವರಿಗಿಂತ ಭಿನ್ನನಾಗಿದ್ದಾನೋ, ಅವರು ಯಾರನ್ನು ತಿಳಿದಿಲ್ಲವೋ, ಅವರು ಯಾರಿಗೆ ಅಧೀನರಾಗಿದ್ದು ಶರೀರದಂತಿರುವರೋ, ಯಾರು ಅವರ ಒಳಗಿದ್ದು ತಾನು ಸುಖಪಡುತ್ತಾ ಅವರಿಗೂ ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋ ಅಪ್ಸು ತಿಷ್ಠನ್ ಅದ್ಭ್ಯೋऽಂತರೋ, ಯಮಾಪೋ ನ ವಿದುಃ, ಯಸ್ಯಾಪಃ ಶರೀರಂ, ಯೋऽಪೋऽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ಜಲಾಭಿಮಾನಿ ವರುಣನಲ್ಲಿ ಇದ್ದು ವರುಣನಿಂದ ಭಿನ್ನನಾಗಿದ್ದಾನೋ ವರುಣನು ಯಾರನ್ನು ತಿಳಿದಿಲ್ಲವೋ, ವರುಣ ಯಾರಿಗೆ ಶರೀರದಂತಿರುವನೋ, ಯಾರು ವರುಣನ ಒಳಗಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋऽಗ್ನೌ ತಿಷ್ಠನ್ ಅಗ್ನೇರಂತರೋ, ಯಮಗ್ನಿರ್ನ ವೇದ, ಯಸ್ಯಾಗ್ನಿಃ ಶರೀರಂ ಯೋऽಗ್ನಿಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ಭೂತಾಗ್ನಿಯ ಅಭಿಮಾನಿಯಲ್ಲಿ ಇದ್ದು, ಆ ಅಗ್ನಿಯಿಂದ ಭಿನ್ನನಾಗಿದ್ದಾನೋ, ಅಗ್ನಿಯು ಯಾರನ್ನು ತಿಳಿದಿಲ್ಲವೋ, ಅಗ್ನಿಯು ಯಾರಿಗೆ ಶರೀರದಂತಿರುವನೋ, ಯಾರು ಅಗ್ನಿಯ ಒಳಗಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋऽಂತರಿಕ್ಷೇ ತಿಷ್ಠನ್ ಅಂತರಿಕ್ಷಾದಂತರೋ, ಯಮಂತರಿಕ್ಷಂ ನ ವೇದ, ಯಸ್ಯಾಂತರಿಕ್ಷಂ ಶರೀರಂ, ಯೋऽಂತರಿಕ್ಷಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ಅಂತರಿಕ್ಷನಾಮಕರಾದ ರುದ್ರ ಮತ್ತು ವಾಯು ಪತ್ನಿ ಶ್ರದ್ಧಾದೇವಿಯರಲ್ಲಿ ಇದ್ದು ಅವರಿಂದ ಭಿನ್ನನಾಗಿದ್ದಾನೋ, ರುದ್ರಶ್ರದ್ಧಾದೇವಿಯರು ಯಾರನ್ನು ತಿಳಿದಿಲ್ಲವೋ, ರುದ್ರ-ಶ್ರದ್ಧಾದೇವಿಯರು ಯಾರಿಗೆ ಶರೀರದಂತಿರುವರೋ ಯಾರು ರುದ್ರ-ಶ್ರದ್ಧಾದೇವಿಯರಲ್ಲಿದ್ದು

ಸುಖ ಉಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋ ವಾಯೌ ತಿಷ್ಠನ್ ವಾಯೋರಂತರೋ, ಯಂ ವಾಯುರ್ನ ವೇದ, ಯಸ್ಯ ವಾಯುಃ ಶರೀರಂ, ಯೋ ವಾಯುಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।

ಯಾರು ಮುಖ್ಯಪ್ರಾಣನಲ್ಲಿದ್ದು ಮುಖ್ಯಪ್ರಾಣನಿಂದ ಭಿನ್ನನೋ, ಯಾರನ್ನು ಮುಖ್ಯಪ್ರಾಣನು ತಿಳಿದಿಲ್ಲವೋ, ಮುಖ್ಯಪ್ರಾಣನು ಯಾರಿಗೆ ಶರೀರದಂತಿರುವನೋ, ಯಾರು ಮುಖ್ಯಪ್ರಾಣನಲ್ಲಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ಇನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋ ದಿವಿ ತಿಷ್ಠನ್ ದಿವೋಽಂತರೋ, ಯಂ ದ್ಯೌರ್ನ ವೇದ, ಯಸ್ಯ ದ್ಯೌಃ ಶರೀರಂ, ಯೋ ದಿವಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ದ್ಯುನಾಮಕರಾದ ಸರಸ್ವತಿ ಉಮೆಯರಲ್ಲಿದ್ದು ಸರಸ್ವತಿ ಉಮೆಯರಿಂದ ಭಿನ್ನನೋ ಯಾರನ್ನು ಸರಸ್ವತಿ ಉಮೆಯರು ತಿಳಿದಿಲ್ಲವೋ, ಸರಸ್ವತಿ-ಉಮೆಯರು ಯಾರಿಗೆ ಶರೀರದಂತಿರುವರೋ, ಯಾರು ಸರಸ್ವತಿ ಉಮೆಯರಲ್ಲಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯ ಆದಿತ್ಯೇ ತಿಷ್ಠನ್ ಆದಿತ್ಯಾದಂತರೋ, ಯಮಾದಿತ್ಯೋ ನ ವೇದ, ಯಸ್ಯ ಆದಿತ್ಯಃ ಶರೀರಂ, ಯ ಆದಿತ್ಯಮಂತರೋ ಯಮಯತಿ, ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ಸೂರ್ಯನಲ್ಲಿದ್ದು ಸೂರ್ಯನಿಂದ ಭಿನ್ನನೋ, ಸೂರ್ಯನು ಯಾರನ್ನು ತಿಳಿದಿಲ್ಲವೋ, ಸೂರ್ಯನು ಯಾರಿಗೆ ಶರೀರದಂತಿರುನೋ, ಯಾರು ಸೂರ್ಯನಲ್ಲಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ, ನಿತ್ಯನಾದ ಅಂತರ್ಯಾಮಿ.

'ಯೋ ದಿಕ್ಷು ತಿಷ್ಠನ್ ದಿಗ್ಭ್ಯೋಽಂತರೋ, ಯಂ ದಿಶೋ ನ ವಿದುಃ ಯಸ್ಯ ದಿಶಃ ಶರೀರಂ, ಯೋ ದಿಶೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ದಿಕ್ಕುಗಳ ಅಭಿಮಾನಿ ದೇವತೆಗಳಲ್ಲಿದ್ದು ಅವರಿಂದ ಭಿನ್ನನೋ, ಅವರು ಯಾರನ್ನು ತಿಳಿದಿಲ್ಲವೋ, ಅವರು ಯಾರಿಗೆ ಶರೀರದಂತಿರುವರೋ, ಯಾರು ಅವರುಗಳಲ್ಲಿದ್ದು

ಸುಖವನ್ನುಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ, ನಿತ್ಯನಾದ ಅಂತರ್ಯಾಮಿ.

'ಯಶ್ಚಂದ್ರತಾರಕೇ ತಿಷ್ಠನ್ ಚಂದ್ರತಾರಕಾದಂತರೋ, ಯಂ ಚಂದ್ರತಾರಕಂ ನ ವೇದ, ಯಸ್ಯ ಚಂದ್ರ ತಾರಕಂ ಶರೀರಂ, ಯಶ್ಚಂದ್ರತಾರಕಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ಚಂದ್ರನಾಮಕ ಕಾಮನಲ್ಲಿಯೂ, ತಾರಕನಾಮಕ ಇಂದ್ರನಲ್ಲಿಯೂ ಇದ್ದು ಇಂದ್ರ ಕಾಮರಿಂದ ಭಿನ್ನನೋ, ಇಂದ್ರಕಾಮರು ಯಾರನ್ನು ತಿಳಿದಿಲ್ಲವೋ ಇಂದ್ರಕಾಮರು ಯಾರಿಗೆ ಶರೀರದಂತಿರುವರೋ, ಯಾರು ಇಂದ್ರ ಕಾಮರಲ್ಲಿದ್ದು ಸುಖ ಉಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ, ನಿತ್ಯನಾದ ಅಂತರ್ಯಾಮಿ.

'ಯ ಆಕಾಶೇ ತಿಷ್ಠನ್ ಆಕಾಶಾದಂತರೋ, ಯಮಾಕಾಶೋ ನ ವೇದ, ಯಸ್ಯಾಕಾಶಃ ಶರೀರಂ, ಯ ಆಕಾಶಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ಆಕಾಶಾಭಿಮಾನಿ ಗಣಪತಿಯಲ್ಲಿದ್ದು ಗಣಪತಿಯಿಂದ ಭಿನ್ನನೋ, ಗಣಪತಿಯು ಯಾರನ್ನು ತಿಳಿದಿಲ್ಲವೋ, ಗಣಪತಿಯು ಯಾರಿಗೆ ಶರೀರದಂತಿರುವನೋ ಯಾರು ಗಣಪತಿಯಲ್ಲಿದ್ದು ಸುಖವನ್ನುಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ, ನಿತ್ಯನಾದ ಅಂತರ್ಯಾಮಿ.

'ಯಸ್ತಮಸಿ ತಿಷ್ಠನ್ ತಮಸೋಽಂತರೋ, ಯಂ ತಮೋ ನ ವೇದ, ಯಸ್ಯ ತಮಃ ಶರೀರಂ, ಯಸ್ತಮೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ತಮೋನಾಮಕಳಾದ ದುರ್ಗಾದೇವಿಯಲ್ಲಿದ್ದು, ದುರ್ಗಾದೇವಿಯಿಂದ ಭಿನ್ನನೋ, ದುರ್ಗಾದೇವಿಯು ಯಾರನ್ನು ತಿಳಿದಿಲ್ಲವೋ, ದುರ್ಗಾದೇವಿಯು ಯಾರಿಗೆ ಶರೀರದಂತಿರುವಳೋ, ಯಾರು ದುರ್ಗಾದೇವಿಯಲ್ಲಿದ್ದು ಸುಖವನ್ನುಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ, ನಿತ್ಯನಾದ ಅಂತರ್ಯಾಮಿ.

'ಯಸ್ತೇಜಸಿ ತಿಷ್ಠನ್ ತೇಜಸೋಽಂತರೋ, ಯಂ ತೇಜೋ ನ ವೇದ, ಯಸ್ಯ ತೇಜಃ ಶರೀರಂ, ಯಸ್ತೇಜೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ। ಇತ್ಯಧಿದೈವತಂ ॥'

ಯಾರು ತೇಜೋನಾಮಕಳಾದ ಶ್ರೀದೇವಿಯಲ್ಲಿದ್ದು, ಶ್ರೀದೇವಿಯಿಂದ ಭಿನ್ನನೋ, ಶ್ರೀದೇವಿಯು ಯಾರನ್ನು ತಿಳಿದಿಲ್ಲವೋ, ಶ್ರೀದೇವಿಯು ಯಾರಿಗೆ ಶರೀರದಂತಿರುವಳೋ, ಯಾರು ಶ್ರೀದೇವಿಯಲ್ಲಿದ್ದು ಸುಖವನ್ನುಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ, ನಿತ್ಯನಾದ ಅಂತರ್ಯಾಮಿ. ಇಲ್ಲಿಗೆ ದೇವತೆಗಳಲ್ಲಿ ಅಂತರ್ಯಾಮಿ ನಿರೂಪಣೆ ಮುಗಿಯಿತು.

ಈ ಬ್ರಾಹ್ಮಣದಲ್ಲಿ ಅಂತರ್ಯಾಮಿ ಜೀವನೇ ಏಕಾಗಿರಬಾರದು ? ಪರಮಾತ್ಮನಿಗೆ ಜಡಶರೀರವಿಲ್ಲ ತಾನೆ ? ಎಂದರೆ ಇಲ್ಲಿ ಹೇಳಿದ ಪೃಥಿವ್ಯಾದಿಗಳು ದೇವತೆಗಳು. ಏಕೆಂದರೆ ಅವುಗಳನ್ನು ಅಧಿದೈವ ಎಂದು ಉಪನಿಷತ್ತೇ ಹೇಳಿದೆ. 'ಯಂ ಪೃಥಿವೀ ನ ವೇದ' ಎಂದು ಮುಂತಾಗಿ, ಪೃಥಿವೀ ಮುಂತಾದುದು ಅಂತರ್ಯಾಮಿಯನ್ನು ತಿಳಿದಿಲ್ಲ ಎಂದು ಹೇಳಿದೆ. ಪೃಥಿವೀ ಮುಂತಾದುದು ಜಡಪದಾರ್ಥವಾಗಿರುತ್ತಿದ್ದರೆ ಜಡವಸ್ತು ಯಾವುದನ್ನೂ ಎಂದೂ ತಿಳಿಯುವ ಪ್ರಸಕ್ತಿ ಇಲ್ಲದಿರುವುದರಿಂದ ಅಂತರ್ಯಾಮಿಯನ್ನು ತಿಳಿದಿಲ್ಲ ಎಂದು ಹೇಳುವುದು ಅನುಚಿತವಾಗುತ್ತದೆ. ಆದ್ದರಿಂದ ಇಲ್ಲಿ ಪೃಥಿವಿ ಇತ್ಯಾದಿಗಳು ಜಡವಲ್ಲ. ದೇವತೆಗಳು. ದೇವತೆಗಳೂ ಜೀವರಿಗೆ ಯಾವ ರೀತಿಯಿಂದಲೂ ಶರೀರವಾಗಿರಲು ಶಕ್ಯವಿಲ್ಲ. ಪರಮಾತ್ಮನಿಗೆ ಮಾತ್ರ ಅವರು ಸರ್ವಾತ್ಮನಾ ಅಧೀನರಾದುದರಿಂದ ಶರೀರದಂತಿರುವರೆಂದೇ ಉಪನಿಷತ್ತು ಹೇಳುತ್ತಿದೆ. ಆದ್ದರಿಂದ ಅಂತರ್ಯಾಮಿ ಪರಮಾತ್ಮನೇ.

'ಅಥಾದಿಭೂತಂ । ಯಃ ಸರ್ವೇಷು ಭೂತೇಷು ತಿಷ್ಠನ್ ಸರ್ವೇಭ್ಯೋ ಭೂತೇಭ್ಯೋಽಂತರೋ, ಯಂ ಸರ್ವಾಣಿ ಭೂತಾನಿ ನ ವಿದುಃ ಯಸ್ಯ ಸರ್ವಾಣಿ ಭೂತಾನಿ ಶರೀರಂ, ಯಃ ಸರ್ವಾಣಿ ಭೂತಾನ್ಯಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ । ಇತ್ಯಧಿಭೂತಂ ॥'

ಇನ್ನು ಮುಂದೆ ಜೀವರಲ್ಲಿ ಅಂತರ್ಯಾಮಿ ನಿರೂಪಣೆ. ಯಾರು ಎಲ್ಲಾ ಜೀವರಲ್ಲಿದ್ದು ಜೀವರಿಂದ ಭಿನ್ನನೋ, ಎಲ್ಲಾ ಜೀವರು ಯಾರನ್ನು ತಿಳಿದಿಲ್ಲವೋ, ಜೀವರು ಯಾರಿಗೆ ಶರೀರದಂತಿರುವರೋ, ಯಾರು ಜೀವರಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ. ಇಲ್ಲಿಗೆ ಜೀವಾಂತರ್ಯಾಮಿ ನಿರೂಪಣೆ ಮುಗಿಯಿತು.

'ಅಥಾಧ್ಯಾತ್ಮಮ್ । ಯಃ ಪ್ರಾಣೇ ತಿಷ್ಠನ್ ಪ್ರಾಣಾದಂತರೋ, ಯಂ ಪ್ರಾಣೋ ನ ವೇದ, ಯಸ್ಯ ಪ್ರಾಣಃ ಶರೀರಂ, ಯಃ ಪ್ರಾಣಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।'

ಇನ್ನು ಮುಂದೆ ಶರೀರದಲ್ಲಿ ಅಂತರ್ಯಾಮಿ ನಿರೂಪಣೆ. ಯಾರು ಪ್ರಾಣನಾಮಕನಾದ ಘ್ರಾಣೇಂದ್ರಿಯಾಭಿಮಾನಿ ದೇವತೆಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋ ವಾಚಿ ತಿಷ್ಠನ್ ವಾಚೋಽಂತರೋ, ಯಂ ವಾಙ್ ನ ವೇದ, ಯಸ್ಯ ವಾಕ್ ಶರೀರಂ, ಯೋ ವಾಚಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।'

ಯಾರು ವಾಗಿಂದ್ರಿಯಾಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯಶ್ಚಕ್ಷುಷಿ ತಿಷ್ಠನ್ ಚಕ್ಷುಷೋಽಂತರೋ, ಯಂ ಚಕ್ಷುರ್ನವೇದ, ಯಸ್ಯ ಚಕ್ಷುಃ ಶರೀರಂ, ಯಶ್ಚಕ್ಷುರಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।'

ಯಾರು ಚಕ್ಷುರಿಂದ್ರಿಯಾಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯಃ ಶ್ರೋತ್ರೇ ತಿಷ್ಠನ್ ಶ್ರೋತ್ರಾದಂತರೋ, ಯಂ ಶ್ರೋತ್ರಂ ನ ವೇದ, ಯಸ್ಯ ಶ್ರೋತ್ರಂ ಶರೀರಂ, ಯಃ ಶ್ರೋತ್ರಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।'

ಯಾರು ಶ್ರೋತೇಂದ್ರಿಯಾಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯಃ ಮನಸಿ ತಿಷ್ಠನ್ ಮನಸೋಽಂತರೋ, ಯಂ ಮನೋ ನ ವೇದ, ಯಸ್ಯ ಮನಃ ಶರೀರಂ, ಯೋ ಮನೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।'

ಯಾರು ಮನೋಭಿಮಾನಿಯಲ್ಲಿದ್ದು ಮನಸ್ಸಿನ ಅಭಿಮಾನಿಯಿಂದ ಭಿನ್ನನೋ, ಮನಸ್ಸಿನ ಅಭಿಮಾನಿ ಯಾರನ್ನು ತಿಳಿದಿಲ್ಲವೋ, ಮನಸ್ಸಿನ ಅಭಿಮಾನಿ ಯಾರಿಗೆ ಶರೀರದಂತಿರುವನೋ, ಯಾರು ಮನಸ್ಸಿನ ಅಭಿಮಾನಿಯಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯಸ್ತ್ವಚಿ ತಿಷ್ಠನ್ ತ್ವಚೋಽಂತರೋ, ಯಂ ತ್ವಕ್ ನ ವೇದ, ಯಸ್ಯ ತ್ವಕ್ ಶರೀರಂ, ಯಸ್ತ್ವಚಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ತ್ವಗಿಂದ್ರಿಯಾಭಿಮಾನಿಯಲ್ಲಿದ್ದು ತ್ವಗಿಂದ್ರಿಯಾಭಿಮಾನಿಯಿಂದ ಭಿನ್ನನೋ, ತ್ವಗಿಂದ್ರಿಯಾಭಿಮಾನಿ ಯಾರನ್ನು ತಿಳಿದಿಲ್ಲವೋ, ತ್ವಗಿಂದ್ರಿಯಾಭಿಮಾನಿ ಯಾರಿಗೆ ಶರೀರದಂತಿರುವನೋ, ಯಾರು ತ್ವಗಿಂದ್ರಿಯಾಭಿಮಾನಿಯಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ, ಯಂ ವಿಜ್ಞಾನಂ ನ ವೇದ, ಯಸ್ಯ ವಿಜ್ಞಾನಂ ಶರೀರಂ, ಯಃ ವಿಜ್ಞಾನಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।'

ಯಾರು ಎಲ್ಲ ಜೀವರ ಅಭಿಮಾನಿಯಾದ ಚತುರ್ಮುಖನಲ್ಲಿದ್ದು ಚತುರ್ಮುಖನಿಂದ ಭಿನ್ನನೋ, ಚತುರ್ಮುಖನು ಯಾರನ್ನು ತಿಳಿಯುವುದಿಲ್ಲವೋ, ಚತುರ್ಮುಖನು ಯಾರಿಗೆ ಶರೀರದಂತಿರುವನೋ, ಯಾರು ಚತುರ್ಮುಖನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

'ಯೋ ರೇತಸಿ ತಿಷ್ಠನ್ ರೇತಸೋಽಂತರೋ, ಯಂ ರೇತೋ ನ ವೇದ, ಯಸ್ಯ ರೇತಃ ಶರೀರಂ, ಯಃ ರೇತೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ'

ಯಾರು ರೇತಸ್ಸಿನ ಅಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿಯುವುದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

ಅದೃಷ್ಟೋ ದ್ರಷ್ಟಾ। ಅಶ್ರುತಃ ಶ್ರೋತಾ। ಅಮತೋ ಮಂತಾ। ಅವಿಜ್ಞಾತೋ ವಿಜ್ಞಾತಾ। ನಾನ್ಯೋಽತೋಽಸ್ತಿ ದ್ರಷ್ಟಾ । ನಾನ್ಯೋಽತೋಽಸ್ತಿ ಶ್ರೋತಾ । ನಾನ್ಯೋಽತೋಽಸ್ತಿ

ಮಂತಾ । ನಾನ್ಯೋಽತೋಽಸ್ತಿ ವಿಜ್ಞಾತಾ । ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ । ಅತೋಽನ್ಯದಾರ್ತಮ್ । ತತೋ ಹೋದ್ದಾಲಕ ಆರುಣಿರುಪರರಾಮ ।

ಈ ಅಂತರ್ಯಾಮಿಯು ಪೂರ್ಣವಾಗಿ ನೋಡಲಾಗದವನು, ಪೂರ್ಣವಾಗಿ ನೋಡುವವನು. ಪೂರ್ಣವಾಗಿ ಕೇಳಲಾಗದವನು, ಪೂರ್ಣವಾಗಿ ಕೇಳುವವನು. ಪೂರ್ಣವಾಗಿ ಮನಸ್ಸಿನಿಂದ ತಿಳಿಯಲಾಗದವನು, ಪೂರ್ಣವಾಗಿ ಮನಸ್ಸಿನಿಂದ ತಿಳಿಯುವವನು. ಪೂರ್ಣವಾಗಿ ಬುದ್ಧಿಗೆ ನಿಲುಕದವನು, ಪೂರ್ಣವಾಗಿ ಬುದ್ಧಿಯಿಂದ ತಿಳಿಯುವವನು. ಇವನನ್ನು ಬಿಟ್ಟರೆ ಬೇರೆ ಯಾರೂ ಸ್ವತಂತ್ರವಾಗಿ ನೋಡುವವರಿಲ್ಲ. ಇವನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರವಾಗಿ ಕೇಳುವವರಿಲ್ಲ. ಇವನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರವಾಗಿ ಮನಸ್ಸಿನಿಂದ ತಿಳಿಯುವವರಿಲ್ಲ. ಇವನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರವಾಗಿ ಬುದ್ಧಿಯಿಂದ ತಿಳಿಯುವವರಿಲ್ಲ. ಇವನು ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ. ಇವನನ್ನು ಬಿಟ್ಟು ಬೇರೆಯವರೆಲ್ಲರೂ ದುಃಖಿಗಳು, ಹೀಗೆ ಹೇಳಿ ಆರುಣರ ಮಗ ಉದ್ದಾಲಕನು ವಿರಮಿಸಿದನು.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

### ಈ ಅಧಿಕರಣಕ್ಕೆ ಶಾಸ್ತ್ರಾದಿ ಸಂಗತಿ ಹೇಗೆ ?

**तत्वप्रकाशिका – अत्र पृथिव्यादिशरीरत्वलिङ्गसाहित्येन अन्यत्र-प्रसिद्धान्तर्यामित्वलिङ्गस्य विष्णौ समन्वयप्रतिपादनादस्ति शास्त्रादिसङ्गतिः । विषयवाक्योदाहरणपूर्वकं विषयं दर्शयति – य इति ।।**

ಈ ಅಂತರ್ಯಾಮ್ಯಧಿಕರಣದಲ್ಲಿ ಪೃಥಿವ್ಯಾದಿಶರೀರತ್ವ (ಪೃಥಿವೀ ಮೊದಲಾದವುಗಳೇ ಶರೀರವಾಗಿರುವಿಕೆ) ಎಂಬ ಲಿಂಗದ ಜೊತೆಗೆ ಅನ್ಯತ್ರಪ್ರಸಿದ್ಧವಾದ ಅಂತರ್ಯಾಮಿತ್ವ ಎಂಬ

ಲಿಂಗದ ಸಮನ್ವಯವನ್ನು ವಿಷ್ಣುವಿನಲ್ಲಿ ಪ್ರತಿಪಾದಿಸಲಾಗಿದೆ. ಆದ್ದರಿಂದಲೇ ಈ ಅಧಿಕರಣಕ್ಕೆ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

ಈ ಅಧಿಕರಣದ ವಿಷಯವಾಕ್ಯವನ್ನು ಉದಾಹರಿಸುವ ಮೂಲಕವಾಗಿ ವಿಷಯವನ್ನು ಪ್ರದರ್ಶಿಸುತ್ತಿದ್ದಾರೆ. ''ಯಃ ಪೃಥಿವ್ಯಾಂ'' ಇತ್ಯಾದಿ ಭಾಷ್ಯದ ಮಾತಿನಲ್ಲಿ.

ಈ ಅಧಿಕರಣದ ಶ್ರುತಿ ಸಂಗತಿ ಹೇಗೆ ?

**तत्वप्रकाशिका – श्रुत्यादिसङ्गतिं दर्शयति – तत्रेति ।। 'एतदमृतमभयम्' इत्यक्षिस्थपुरुषस्यामृतत्वमुक्तम् । तत् काण्वमाध्यन्दिनश्रुत्योरन्तर्यामिणः कस्यचिच्छ्रूयते 'एष त आत्माऽन्तर्याम्यमृतः' इति । स चान्तर्यामी यदि विष्णोरितरः स्यात्तदाऽमृतत्वं चान्यनिष्ठं नाक्षिस्थस्य विष्णुत्वसाधकं स्यादिति, अवश्यं निर्णेतव्य एव ।**

ಶ್ರುತಿ ಸಂಗತಿ ಹಾಗೂ ಅಧಿಕರಣಸಂಗತಿಗಳನ್ನು ''ತತ್ರ ಚ'' ಎಂಬ ಭಾಷ್ಯದಿಂದ ತೋರಿಸಿದ್ದಾರೆ.

ಹಿಂದಿನ ಅಧಿಕರಣದಲ್ಲಿ ಕಣ್ಣಿನಲ್ಲಿರುವವನು ಪರಮಾತ್ಮನೇ ಆಗಿದ್ದಾನೆಂದು ನಿರ್ಣಯಿಸಲಾಯಿತು. ಆದರೆ 'ಏತದಮೃತಮಭಯಮ್' ಎಂಬ ಛಾಂದೋಗ್ಯದ ಮಾತಿನಲ್ಲಿ ಕಣ್ಣಿನಲ್ಲಿರುವ ಪುರುಷನಲ್ಲಿ 'ಅಮೃತತ್ವ' ಎಂಬ ಧರ್ಮವು ಕೇಳಿಸುತ್ತಿದೆ. ಇದೇ ಧರ್ಮವನ್ನು ಕಾಣ್ವಶ್ರುತಿ ಹಾಗೂ ಮಾಧ್ಯಂದಿನ ಶ್ರುತಿಗಳು ಅಂತರ್ಯಾಮಿಯಾದ ಯಾರೋ ಒಬ್ಬನಲ್ಲಿ 'ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ' ಎಂಬುದಾಗಿ ಹೇಳುತ್ತಿವೆ. ಆದ್ದರಿಂದ ಇಂತಹ ಅಂತರ್ಯಾಮಿಯು ಒಂದು ವೇಳೆ ವಿಷ್ಣುವಿಗಿಂತ ಬೇರೆಯವನಾದರೆ ಅವನಲ್ಲಿ ಕೇಳಿಸಲ್ಪಟ್ಟ ಅಮೃತತ್ವವೂ ಸಹ ಬೇರೆಯವನಲ್ಲೇ ಇರಬೇಕು. ಈ ಎಲ್ಲ ಕಾರಣಗಳಿಂದ ಹಿಂದಿನ ಅಧಿಕರಣದಲ್ಲಿ ಸಾಧಿಸಲ್ಪಟ್ಟ ವಿಷ್ಣುವೇ ಅಕ್ಷಿಸ್ಥನಾಗಿದ್ದಾನೆಂಬ ಪ್ರಮೇಯವು ಸಿದ್ಧವಾಗುವುದಿಲ್ಲ. ಆದ್ದರಿಂದ ಅಮೃತತ್ವ ಧರ್ಮವು ಇರುವಂತಹ ಅಂತರ್ಯಾಮಿಯು ಯಾರೆಂದು ಅವಶ್ಯವಾಗಿ ನಿರ್ಣಯಿಸಬೇಕಾಗಿದೆ.

ವಿಶೇಷವಿಚಾರ - ಪ್ರಶ್ನೆ - "ತತ್ರ ಚ "ಏತದಮೃತಮ್" ಇತ್ಯುಕ್ತಮಮೃತತ್ವ-ಮುಚ್ಯತೇ" 'ಈ ಅಧಿಕರಣದ ವಿಷಯವಾಕ್ಯದಲ್ಲಿ 'ಅಮೃತಂ' ಎಂಬ ಪದದಿಂದ ಅಮೃತತ್ವವು ಹೇಳಲ್ಪಟ್ಟಿದೆ'. ಇತ್ಯಾದಿ ಭಾಷ್ಯ ಹಾಗೂ ಟೀಕೆಗಳಲ್ಲಿ ಹಿಂದಿನ ಅಧಿಕರಣದ ಶ್ರುತಿವಾಕ್ಯದಿಂದ ಸಂಗತಿಯು ತೋರುತ್ತದೆಯೇ ಹೊರತು ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹೇಳಿರುವುದು ಕಾಣಿಸುವುದಿಲ್ಲ. ಆದ್ದರಿಂದ 'ಶ್ರುತ್ಯಾದಿಸಂಗತಿಂ ದರ್ಶಯತಿ' 'ಶ್ರುತಿಸಂಗತಿ; ಅಧಿಕರಣಸಂಗತಿ ಮೊದಲಾದವುಗಳನ್ನು ತೋರಿಸುತ್ತಿದ್ದಾರೆ.' ಎಂಬ ಟೀಕೆಯು ಅಯುಕ್ತವಾಗುತ್ತದಲ್ಲವೆ?

ಸಮಾಧಾನ - ಶ್ರುತಿಸಂಗತಿಯಿಂದ ಅಧಿಕರಣಸಂಗತಿಯು(ವ್ಯಾಪ್ತ) ಅವಿನಾಭೂತ-ವಾದ್ದರಿಂದ ಶ್ರುತಿಸಂಗತಿಯನ್ನು ಹೇಳಿದರೆ ಅಧಿಕರಣ ಸಂಗತಿಯನ್ನೂ ಸಹ ಹೇಳಿದಂತಾಗುತ್ತದೆ ಎಂದು ಅಭಿಪ್ರಾಯ. ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡುವ ಮೂಲಕ ಈ ಅಧಿಕರಣದ ಸಂಗತಿಯನ್ನು ತಿಳಿಯಬೇಕು. ಈ ಕ್ರಮವು ಹಿಂದಿನ ಅಧಿಕರಣಗಳಲ್ಲಿ ಹೇಳಿದ ಬಗೆಯಲ್ಲೇ ತಿಳಿಯಬೇಕು. ಹೀಗೆ ಹೇಳಿದ್ದರಿಂದ; ಅಮೃತತ್ವವನ್ನೇ ಈ ಅಧಿಕರಣದಲ್ಲಿ ಆಕ್ಷೇಪಿಸುತ್ತಿದ್ದಾರೆ. ಆದ್ದರಿಂದ ವಿಷ್ಣುವಿಗೆ ಅಂತರ್ಯಾಮಿತ್ವವನ್ನು ಹಿಂದೆ ಆಕ್ಷೇಪಿಸಿದಂತೆ ಇಲ್ಲಿ ಆಕ್ಷೇಪಿಸುತ್ತಿಲ್ಲವೆಂದು ಸೂಚಿಸಿದಂತಾಯಿತು.

### ಅಂತರ್ಯಾಮ್ಯಧಿಕರಣದ ವಿಷಯಾದಿಗಳು

**ತತ್ವಪ್ರकाशिका – तदन्तर्यामित्वमत्र विषयः । किं विष्णोरन्यस्य वा? इति सन्देहः । अमृतत्वं पृथिव्यादिशरीरत्वं च सन्देहबीजमिति भावः । सयुक्तिकं पूर्वपक्षयति – स चेति ।।**

ಈ ಅಧಿಕರಣಕ್ಕೆ ಅಂತರ್ಯಾಮಿತ್ವವೇ ವಿಷಯ. ಅಂತರ್ಯಾಮಿತ್ವವು ವಿಷ್ಣುವಿನ ಧರ್ಮವೋ ಅಥವಾ ಬೇರೆಯವರದ್ದೋ ಎಂಬುದೇ ಸಂದೇಹ? ಅಮೃತತ್ವ ಹಾಗೂ ಪೃಥಿವ್ಯಾದಿ ಶರೀರತ್ವ ಎಂಬ ಧರ್ಮಗಳು ಸಂದೇಹಕ್ಕೆ ಕಾರಣ ಎಂದು ತಿಳಿಯಬೇಕು. ಯುಕ್ತಿಬದ್ಧವಾದ ಪೂರ್ವಪಕ್ಷವನ್ನು "ಸ ಚ" ಎಂಬ ಭಾಷ್ಯದ ವಾಕ್ಯವು ತೋರಿಸುತ್ತಿದೆ.

ವಿಶೇಷವಿಚಾರ - ಬೃಹದಾರಣ್ಯಕದ ಮೂರನೇ ಅಧ್ಯಾಯದಲ್ಲಿರುವ ವಿಷಯವಾಕ್ಯ ಹೀಗಿದೆ - "ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ

ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷತ ಆತ್ಮಾಂತರ್ಯಾಮ್ಯಮೃತಃ'' ಎಂದು. ಇಲ್ಲಿ ಅಪ್, ಅಗ್ನಿ, ಅಂತರಿಕ್ಷ, ವಾಯು, ಆದಿತ್ಯ, ದಿಕ್, ಚಂದ್ರ, ನಕ್ಷತ್ರ, ಆಕಾಶ, ತಮಸ್ಸು, ತೇಜಸ್ಸು ಮೊದಲಾದ ಆಧಿದೈವಿಕ ಪದಾರ್ಥಗಳಲ್ಲಿ ''ಯಸ್ಸರ್ವೇಷು ಭೂತೇಷು'' ಎಂಬಲ್ಲಿ ಹೇಳಲ್ಪಟ್ಟ ಆಧಿಭೌತಿಕಪದಾರ್ಥಗಳಲ್ಲಿ; ಪ್ರಾಣ, ವಾಕ್, ಚಕ್ಷುಷ್, ಶ್ರೋತ್ರ, ಮನಸ್ಸು, ತ್ವಕ್, ವಿಜ್ಞಾನ, ರೇತಸ್ಸು ಮೊದಲಾದ ಆಧ್ಯಾತ್ಮಿಕ ಪದಾರ್ಥಗಳಲ್ಲಿ ಇದ್ದಾನೆಂದು ಶ್ರುತನಾದ ಅಂತರ್ಯಾಮಿಯೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆಂದು ತಿಳಿಯಬೇಕು.

### ಅಂತರ್ಯಾಮಿಯು ಪ್ರಕೃತಿಯಾಗಬಹುದೇ ?

**तत्वप्रकाशिका – सोऽन्तर्यामी प्रकृतिर्भवेत् । ''यस्य पृथिवी शरीरं यस्याऽपः शरीरम्'' इत्यादिनाऽन्तर्यामिणः पृथिव्यादिशरीरत्वस्य श्रवणात् । तस्य च प्रकृतावुपपत्तेः शरीरशब्दस्य स्वरूपेऽपि प्रयोगात् । प्रकृतेश्च पृथिव्यादिसर्वात्मकत्वात् ।**

ಶ್ರುತಿಯಲ್ಲಿ ಕೇಳಿಸುತ್ತಿರುವ ಅಂತರ್ಯಾಮಿಯು ಪ್ರಕೃತಿಯೇ ಆಗಬೇಕು. ಏಕೆಂದರೆ 'ಯಸ್ಯ ಪೃಥಿವೀ ಶರೀರಂ ಯಸ್ಯಾಪಃ ಶರೀರಂ' ಪೃಥಿವಿಯು ಯಾರಿಗೆ ಶರೀರವಾಗಿದೆಯೋ, 'ನೀರು ಯಾರಿಗೆ ಶರೀರವಾಗಿದೆಯೋ' ಇತ್ಯಾದಿಯಾಗಿ ಅಂತರ್ಯಾಮಿಯು ಪೃಥಿವೀ ಮೊದಲಾದವುಗಳನ್ನೇ ಶರೀರವನ್ನಾಗಿ ಹೊಂದಿದ್ದಾನೆಂದು ಹೇಳಲಾಗಿದೆ. ಈ ಪೃಥಿವ್ಯಾದಿ ಶರೀರತ್ವವು ಪ್ರಕೃತಿಯಲ್ಲಿ ಉಪಪನ್ನವಾಗುತ್ತದೆ. ಶರೀರಶಬ್ದವು 'ದೇಹ' ಎಂಬ ಅರ್ಥದಲ್ಲಿ ಪ್ರಸಿದ್ಧವಿರುವಂತೆ 'ಸ್ವರೂಪ' ಎಂಬರ್ಥದಲ್ಲಿಯೂ ಪ್ರಯೋಗಿಸಬಹುದು. ಪ್ರಕೃತಿಯಾದರೂ ಸಹ ಪೃಥಿವಿಯೇ ಮೊದಲಾದ ಸಕಲ ಪದಾರ್ಥಗಳ ಸ್ವರೂಪವಾಗಿದೆ.

### ಪೃಥಿವಿಯು ತನಗೆ ತಾನೇ ಆಧಾರನಾಗಲು ಸಾಧ್ಯವಿಲ್ಲ

**तत्वप्रकाशिका – न च 'यः पृथिव्यां तिष्ठन्' इत्यादेरनुपपत्तिः ।**

ಪ್ರಶ್ನೆ - ಪ್ರಕೃತಿಯನ್ನು ಅಂತರ್ಯಾಮಿಯೆಂದು ಹೇಳುತ್ತಿದ್ದೀರಿ ಹಾಗಾದರೆ ಪೃಥಿವೀ ಮತ್ತು ಅಂತರ್ಯಾಮಿ ಎರಡೂ ಒಂದೇ ಆದ್ದರಿಂದ 'ಪೃಥಿವ್ಯಾಂ ತಿಷ್ಠನ್' 'ಪೃಥಿವಿಯಲ್ಲಿ

ನಿಂತು' ಎಂಬ ಮಾತು ಅನುಪಪನ್ನವಾಗುತ್ತದೆ. ಏಕೆಂದರೆ ತಾನೇ ತನಗೆ ಆಧಾರವಾಗಲು ಸಾಧ್ಯವಿಲ್ಲವಲ್ಲವೇ?

ಕಾರಣವು ಕಾರ್ಯದಲ್ಲಿರುತ್ತದೆ

**ತत्वप्रकाशिका – 'व्याप्तं कार्येषु कारणम्' इत्यादिना कारणस्य कार्यस्थत्वोक्तेः ।**

ಸಮಾಧಾನ - ಈ ಪ್ರಶ್ನೆಯು ಸರಿಯಲ್ಲ; ಏಕೆಂದರೆ ಲೋಕದಲ್ಲಿ 'ವ್ಯಾಪ್ತಂ ಕಾರ್ಯೇಷು ಕಾರಣಮ್' ಕಾರ್ಯದಲ್ಲಿ ಕಾರಣವು ವ್ಯಾಪ್ತವಾಗಿದೆ ಎಂಬ ಪ್ರಯೋಗವಿದೆ. ಆದರಂತೆ ಕಾರ್ಯ ಹಾಗೂ ಕಾರಣಗಳಿಗೆ ಐಕ್ಯವಿದ್ದರೂ ಸಹ ಆಧಾರಾಧೇಯಭಾವವನ್ನು ಹೇಗೆ ಕೂಡಿಸುತ್ತೇವೋ ಆದರಂತೆ ಪ್ರಕೃತಿಯು ಪೃಥಿವಿಯ ಸ್ವರೂಪವಾಗಿದ್ದರೂ 'ಪೃಥಿವ್ಯಾಂ ತಿಷ್ಠನ್' ಎಂಬ ಪ್ರಯೋಗವನ್ನು ಕೂಡಿಸಬಹುದು.

ಪೃಥಿವೀ ನಿಯಮನವೂ ಔಪಚಾರಿಕ

**तत्वप्रकाशिका – 'पृथिवीं यमयति' इत्येतदप्युपचारेण नेतव्यम् ।**

ಪ್ರಶ್ನೆ - ಪ್ರಕೃತಿಯನ್ನೇ ಅಂತರ್ಯಾಮಿಯೆಂದು ಹೇಳಿದರೆ 'ಪೃಥಿವೀಂ ಯಮಯತಿ' ಪೃಥಿವಿಯನ್ನು ನಿಯಮನ ಮಾಡುತ್ತದೆ ಎಂಬ ಮಾತನ್ನು ಹೇಗೆ ಕೂಡಿಸುವುದು.

ಉತ್ತರ - ಈ ವಾಕ್ಯವನ್ನು ಗೌಣವಾಗಿ ವ್ಯಾಖ್ಯಾನಿಸಬೇಕು. ಕಾರ್ಯವು ಕಾರಣದ ಅಧೀನವಾದ್ದರಿಂದ ಕಾರಣವು ಕಾರ್ಯಕ್ಕೆ ವಿಷಯವಾಗಿದೆ ಎಂದು ಇದರ ಅರ್ಥ.

ಜೀವನೂ ಅಂತರ್ಯಾಮಿಯಾಗಬಹುದು

**तत्वप्रकाशिका – पृथिव्यादिजीवस्यैव तदन्तर्यामित्वम् । पृथिव्यादि-शरीरत्वादेस्तस्मिन्नतिसुघटत्वादिति भावः ।**

ಅಥವಾ ಪೃಥಿವ್ಯಾದಿಗಳಲ್ಲಿ ಅಭಿಮಾನಿಯಾಗಿರುವ ಜೀವನೇ ಅಂತರ್ಯಾಮಿಯಾಗಿದ್ದಾನೆಂದು

ಹೇಳಬಹುದು. ಏಕೆಂದರೆ ಅಭಿಮಾನಿಯಾದ ಜೀವನಿಗೆ ಪೃಥಿವೀ ಮೊದಲಾದವು ಶರೀರಗಳಾಗಿವೆ. ಎಂಬುದನ್ನು ಅತ್ಯಂತ ಸ್ಪಷ್ಟವಾಗಿ ಉಪಪಾದಿಸಬಹುದೆಂದು ತಿಳಿಯಬೇಕು.

ಅಮೃತತ್ವ ಲಿಂಗ ವಿಷ್ಣುವಿನಲ್ಲಿಲ್ಲವೇ ?

**तत्वप्रकाशिका – ननु यथा प्रकृत्यादिलिङ्गेन तेषामन्तर्यामित्वं तथाऽमृतत्वलिङ्गेन विष्णोः किं न स्यादित्यत आह – न हीति ॥**

ಶಂಕೆ - ಯಾವ ರೀತಿಯಾಗಿ ಪೃಥಿವೀಶರೀರತ್ವ ಮೊದಲಾದ ಲಿಂಗಗಳಿಂದ ಪ್ರಕೃತಿ ಅಥವಾ ಜೀವರು ಅಂತರ್ಯಾಮಿಗಳಾಗಿದ್ದಾರೆಂದು ಹೇಳುತ್ತೀರೋ ಅದರಂತೆ ಅಮೃತತ್ವಲಿಂಗದಿಂದ ವಿಷ್ಣುವೇ ಅಂತರ್ಯಾಮಿಯಾಗಬಹುದಲ್ಲವೇ?

ಸಮಾಧಾನ - ಈ ಶಂಕೆಗೆ ''ನಹಿ'' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಅದು ಹೀಗೆ —

ಲಿಂಗವಿದ್ದರೂ ಸಹ ಶರೀರತ್ವ ಕೂಡಿಸಲು ಬರುವುದಿಲ್ಲ

**तत्वप्रकाशिका – विद्यमानेऽपि विष्णुलिङ्गे न तस्यान्तर्यामित्वम् । पृथिव्यादिशरीरत्वस्य कयाऽपि विधयाऽवकाशाभावात् ।**

ಅಮೃತತ್ವವೆಂಬ ವಿಷ್ಣುವಿನ ಲಿಂಗವು ಶ್ರುತಿಯಲ್ಲಿ ಕೇಳಿಸುತ್ತಿರಬಹುದು. ಆದರೂ ಸಹ ವಿಷ್ಣುವಿಗೆ ಅಂತರ್ಯಾಮಿತ್ವವು ಕೂಡುವುದಿಲ್ಲ. ಏಕೆಂದರೆ ಅದೇ ಸಂದರ್ಭದಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿ ಶರೀರತ್ವವು ವಿಷ್ಣುವಿನಲ್ಲಿ ಯಾವುದೇ ಪ್ರಕಾರದಿಂದಲೂ ಸಾವಕಾಶ ಮಾಡಲು ಸಾಧ್ಯವಿಲ್ಲ.

ಸಾವಕಾಶದಿಂದ ನಿರವಕಾಶಕ್ಕೆ ಬಾಧ

**तत्वप्रकाशिका – तस्य पृथिव्यादिभिन्नत्वचिच्छरीरत्वोररीकारेण पृथिव्यादिशरीरत्वानङ्गीकारात् । अमृतत्वस्य कथञ्चित्प्रकृत्यादावपि सावकाशत्वात् । सावकाशस्य च निरवकाशेन बाधोपपत्तेः ।**

ಏಕೆಂದರೆ ವಿಷ್ಣುವು ಪೃಥಿವ್ಯಾದಿ ಸಕಲಪದಾರ್ಥಗಳಿಗಿಂತ ಭಿನ್ನನಾಗಿದ್ದಾನೆ ಹಾಗೂ ಚಿನ್ಮಯಶರೀರನಾಗಿದ್ದಾನೆ. ಹೀಗೆ ಸಿದ್ಧಾಂತಿಗಳೇ ಒಪ್ಪಿರುವುದರಿಂದ ಪೃಥಿವೀ ಮೊದಲಾದವು-ಗಳನ್ನು ವಿಷ್ಣುವಿನ ಶರೀರವೆಂದು ಯಾವ ಪ್ರಕಾರದಿಂದಲೂ ಹೇಳಲಾಗದು. ಆದರೆ ವಿಷ್ಣುವಿನ ಧರ್ಮವೆನಿಸಿದ ಅಮೃತತ್ವವನ್ನು ಪ್ರಕೃತ್ಯಾದಿಗಳಲ್ಲಿ ಹೇಗಾದರೂ ಸಾವಕಾಶ ಮಾಡಬಹುದು. ಸಾವಕಾಶವಾದ ಧರ್ಮವು ನಿರವಕಾಶವಾದ ಯುಕ್ತಿಯಿಂದ ಬಾಧಿತ- ವಾಗುತ್ತದೆ.

### ಅಮೃತತ್ವವು ವಿಷ್ಣುತ್ವ ಸಾಧಕಧರ್ಮವಲ್ಲ ಎಂದು ಪೂರ್ವಪಕ್ಷ

**ತತ್ವಪ್ರಕಾಶಿಕಾ – अतोऽन्तर्यामी न विष्णुरपि तु प्रकृत्यादय एवेति नामृतत्वमक्षिस्थस्य विष्णुत्वसाधकमिति भावः ।**

ಆದ್ದರಿಂದ ಅಂತರ್ಯಾಮಿಯಾದವನು ವಿಷ್ಣುವಾಗಲು ಸಾಧ್ಯವಿಲ್ಲ. ಹೊರತಾಗಿ ಪ್ರಕೃತಿ ಅಥವಾ ಜೀವರೇ ಆಗುತ್ತಾರೆ. ಹೀಗಿರುವಾಗ ಅಮೃತತ್ವಧರ್ಮವು ಅಕ್ಷಿಸ್ಥನಾದವನು ವಿಷ್ಣುವೇ ಆಗಿದ್ದಾನೆಂಬುದಕ್ಕೆ ಸಾಧಕಪ್ರಮಾಣವಾಗುವುದಿಲ್ಲವೆಂದು ಪೂರ್ವಪಕ್ಷದ ಅಭಿಪ್ರಾಯ.

### ಅವಿದಿತತ್ವಾದಿಗಳು ವಿಷ್ಣುಧರ್ಮವೇ ಆಗಿವೆ

**ತತ್ವಪ್ರಕಾಶಿಕಾ – सिद्धान्तयत्सूत्रमवतार्य व्याचष्टे – अत इति ॥ अन्तर्यामी विष्णुरेव । अन्तर्यामिणः पृथिव्याद्यविदितत्वतदन्तरत्वाख्य-धर्मव्यपदेशात् । अविदितत्वादेश्च विष्णुधर्मत्वात् ।**

ಸಿದ್ಧಾಂತವನ್ನು ಸ್ಥಾಪಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. ''ಅತಃ'' ಇತ್ಯಾದಿಯಾಗಿ.

ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಪೃಥಿವಿ ಮೊದಲಾದವುಗಳಿಂದ ತಿಳಿಯದಿರುವಿಕೆ ಮತ್ತು ಅವುಗಳ ಅಂತರ್ಯಾಮಿಯಾಗಿರುವಿಕೆ ಮೊದಲಾದ ಧರ್ಮಗಳನ್ನು

ಶ್ರುತಿಯು ಹೇಳುತ್ತಿದೆ. ಈ ಅವಿದಿತತ್ವ ಮೊದಲಾದವುಗಳೆಲ್ಲವೂ ವಿಷ್ಣುವಿನ ಧರ್ಮವೇ ಆಗಿವೆ ಎಂಬ ವಿಚಾರವು ಸ್ಪಷ್ಟವಾಗಿದೆ.

ವಿಶೇಷವಿಚಾರ - ಅಧಿಕರಣದ ಸಿದ್ಧಾಂತ ಹೀಗಿದೆ - ಸಕಲರಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವವನು ಮಹಾವಿಷ್ಣುವೇ ಆಗಿದ್ದಾನೆ. ಯಾವ ಶ್ರುತಿಯು ಪೂರ್ವಪಕ್ಷವನ್ನು ಹೇಳುತ್ತಿದೆಯೋ ಅದೇ ಶ್ರುತಿಯಲ್ಲಿ ಕೇಳಿಸುತ್ತಿರುವ ಪೃಥಿವ್ಯಾದ್ಯವಿದಿತತ್ವವು ವಿಷ್ಣುವಿನಲ್ಲಿ ಸುಲಭವಾಗಿ ಬರುತ್ತದೆ. ಪೃಥಿವೀ ಶಬ್ದಕ್ಕೆ ಜಡವೆಂದು ಅರ್ಥವಲ್ಲ. ಹಾಗಾದಲ್ಲಿ ಅಪ್ರಸಕ್ತ ವಿಷಯವನ್ನು ನಿಷೇಧ ಮಾಡಿದಂತಾಗುತ್ತದೆ. ಆದ್ದರಿಂದ ಅಭಿಮಾನಿಚೇತನರೆಂಬರ್ಥವನ್ನು ಹೇಳಬೇಕು. ಅಂತಹ ಅಭಿಮಾನಿಚೇತನರಿಂದ ಸಂಪೂರ್ಣವಾಗಿ ತಿಳಿಯಲು ಅಸಮರ್ಥ-ನಾದವನು ಈಶ್ವರನೊಬ್ಬನೇ ಹೊರತು ಪ್ರಕೃತ್ಯಾದಿಗಳಲ್ಲ.

ಅಂತರತ್ವವೂ ಸಹ ವಿಷ್ಣುವಿನ ಧರ್ಮವೇ ಆಗಿದೆ -

ಪೃಥಿವ್ಯಾದ್ಯವಿದಿತತ್ವವು ಪರಮಾತ್ಮನಲ್ಲಿ ಬರುವಂತೆ ಅಂತರತ್ವವೂ ಸಹ ಬರುತ್ತದೆ. ಏಕೆಂದರೆ ಬಾಹ್ಯಪದಾರ್ಥಗಳ ಅಪೇಕ್ಷೆಯಿಲ್ಲದೇ ಯಾರು ವಿಹರಿಸುತ್ತಾರೋ ಅಂತಹವನು 'ಅಂತರಃ' ಎನಿಸುತ್ತಾನೆ. ಮತ್ತು ಅತ್ಯಂತ ಪ್ರಿಯನಾದ್ದರಿಂದಲೂ ಶ್ರೀಹರಿಯು ಅಂತರನೆಂದು ಹೇಳಲ್ಪಟ್ಟಿದ್ದಾನೆ.

ಪೂರ್ವಪಕ್ಷಕ್ಕೆ ಪ್ರಬಲ ಹೇತುವಾಗಿರುವ ಪೃಥಿವ್ಯಾದಿ ಶರೀರತ್ವವೂ ಸಹ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಅಗ್ನಿಯಲ್ಲಿ ಇಂದ್ರ ಶಬ್ದಪ್ರಯೋಗವನ್ನು ಯೌಗಿಕವಾಗಿ ಮತ್ತು ಗೌಣವಾಗಿ ಮಾಡುವಂತೆ ವಿಷ್ಣುವಿನಲ್ಲೂ ಯೌಗಿಕವಾಗಿ ಮತ್ತು ಗೌಣವಾಗಿ ಪೃಥಿವ್ಯಾದಿಶರೀರತ್ವವನ್ನು ಕೂಡಿಸಬೇಕು. ರೂಢ್ಯರ್ಥದಲ್ಲಿ ಬಾಧವಿರುವುದೇ ಇದಕ್ಕೆ ಕಾರಣ.

## ಪೃಥಿವ್ಯಾದಿಗಳು ಜಡವಲ್ಲ

**ತत्वप्रकाशिका – नच वाच्यं पृथिव्यादीनां जडत्वेन तदज्ञेयत्वं सर्वस्यापि सम्भवतीति । पृथिव्यादीनामधिदैवत्वेन जडत्वाभावादिति भावः ।**

ಶಂಕೆ - ಪೃಥಿವ್ಯಾದಿಗಳೆಲ್ಲವೂ ಜಡವಾದ್ದರಿಂದ ಇವುಗಳಿಂದ ತಿಳಿಯದಿರುವಿಕೆಯು ಸಕಲ ಪದಾರ್ಥಗಳಲ್ಲೂ ಪ್ರಾಪ್ತವಾಗುತ್ತದಲ್ಲವೇ?

ಸಮಾಧಾನ - ಇದು ತಪ್ಪು. ಪ್ರಕೃತ ಪೃಥಿವ್ಯಾದಿಗಳು ಅಧಿದೈವವಾದ್ದರಿಂದ ಪೃಥಿವ್ಯಾದಿಶಬ್ದಗಳಿಂದ ಅವುಗಳ ಅಂತರ್ಯಾಮಿಯಾದ ದೇವತೆಯೇ ಪ್ರಸಕ್ತನಾಗಿರುತ್ತಾನೆ. ಆದ್ದರಿಂದ ಪೃಥಿವ್ಯಾದಿಶಬ್ದಗಳು ಜಡಪರವಾಗಿವೆ ಎಂದು ಹೇಳಬಾರದು.

### ಚಕ್ಷುರಾದಿಗಳು ಮಾತ್ರವೇ ಜಡ

**तत्वप्रकाशिका – चक्षुरादीनां जडत्वेऽप्यत्रोक्तस्यैव तत्र कथनान्न विरोधः ।**

ವಸ್ತುತಃ ಚಕ್ಷುರಾದಿಶಬ್ದಗಳು ಜಡಪರವಾಗಿರಬಹುದು. ಆದರೆ 'ಯಃ ಚಕ್ಷುಷಿ ತಿಷ್ಠನ್' ಎಂಬಲ್ಲಿ ಹೇಳಿರುವುದನ್ನೇ 'ಯ ಏಷೋಽಂತರಕ್ಷಿಣಿ' ಎಂಬಲ್ಲಿಯೂ ಹೇಳಿರುವುದರಿಂದ ವಿರೋಧಕ್ಕೆ ಅವಕಾಶವಿಲ್ಲ.

### ಅವಿದಿತತ್ವಧರ್ಮವು ವಿಷ್ಣುಪರವಾಗಲು ಕಾರಣವೇನು ?

**तत्वप्रकाशिका – अविदितत्वादेः कुतो विष्णुधर्मत्वमित्यत आह – स हीति ।। नच पृथिव्यादिजीवाविदितत्वं प्रकृतेः पृथिव्यादिजीवस्य वोपपद्यते ।। १८ ।।**

ಇನ್ನು ಅವಿದಿತತ್ವಾದಿಗಳನ್ನು ವಿಷ್ಣು ಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ? ಎಂದು ಪ್ರಶ್ನಿಸಬಹುದು. ಇದಕ್ಕೆ ''ಸಹಿ'' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಪೃಥಿವ್ಯಾದಿಪದಾರ್ಥಗಳ ಅಭಿಮಾನಿಗಳಾದ ಜೀವರಿಂದ ಪ್ರಕೃತಿಯು ಅಥವಾ ಪೃಥಿವ್ಯಾದಿ ಜೀವರುಗಳು ಅಜ್ಞೇಯರಾಗಲು ಸಾಧ್ಯವಿಲ್ಲ. ಆದ್ದರಿಂದ ಇದೂ ಪರಮಾತ್ಮನ ಲಿಂಗವೇ ಆಗಿದೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

### ಶ್ರುತಿಯಲ್ಲಿ ಅಮೃತತ್ವ ಮತ್ತು ಅಭಯತ್ವ ಎಂಬ ಎರಡು ಧರ್ಮಗಳ ಪ್ರಸ್ತಾವವಿದೆ

**भावदीपः – अन्तर्याम्यधिदैवादिषु तद्धर्मव्यपदेशात् ।। १-२-१८ ।।**

इत्यन्तभाष्यं सङ्गतिपरत्वेन व्याकुर्वन् ''एतदमृतं इत्युक्तम्'' इति वाक्यं व्याचष्टे – **एतदिति** ।। उभयेऽपीति । सूत्रोक्त्यनुरोधात् ''तत्र च अमृतत्वमुच्यते'' इत्यंशार्थमाह – **तत्काण्वेति** ।।

''ಇತಿ'' ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಸಂಗತಿಪರವಾಗಿ ವ್ಯಾಖ್ಯಾನಿಸುತ್ತಾ ''ಏತದಮೃತಂ ಇತ್ಯುಕ್ತಂ'' ಎಂಬ ವಾಕ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ ''ಏತತ್'' ಇತ್ಯಾದಿ ಟೀಕಾ ಗ್ರಂಥದಿಂದ. ಶ್ರುತಿಯಲ್ಲಿರುವ ''ಏತತ್'' ಎಂದರೆ ಅಮೃತತ್ವ ಮತ್ತು ಅಭಯತ್ವ ಎಂಬ ಎರಡು ಲಿಂಗಗಳೆಂದರ್ಥ. ಸೂತ್ರವನ್ನು ಅನುಸರಿಸಿ ಭಾಷ್ಯದಲ್ಲಿ ಹೇಳಿರುವ ''ತತ್ರ ಚ ಅಮೃತತ್ವಮುಚ್ಯತೇ'' ಎಂಬ ವಾಕ್ಯಭಾಗದ ಅರ್ಥವನ್ನು '' ತತ್‌ಕಾಣ್ವ'' ಇತ್ಯಾದಿ ಮಾತಿನಿಂದ ಹೇಳುತ್ತಿದ್ದಾರೆ.

### ಎರಡು ಶಾಖೆಗಳಲ್ಲಿ ಬಂದ ಒಂದೇ ವಾಕ್ಯ ಯಾವುದು ?

**भावदीपः –** 'यः पृथिव्याम्' इत्यादिवाक्यस्य काण्वमाध्यन्दिनशाखयोरेकरूपत्वादिति भावः । 'उच्यते' पञ्चमेऽध्याये । अन्तर्यामिणः कस्यचिदित्यनेन तत्रेत्यस्यान्तर्यामिणीत्यर्थो दर्शितः ।

''ಯಃ ಪೃಥಿವ್ಯಾಂ'' ಇತ್ಯಾದಿ ವಾಕ್ಯವು ಕಾಣ್ವಶಾಖೆಯಲ್ಲಿ ಹಾಗೂ ಮಾಧ್ಯಂದಿನಶಾಖೆಯಲ್ಲಿ ಒಂದೇ ರೀತಿಯಾಗಿ ರಚಿಸಲ್ಪಟ್ಟಿದೆ ಎಂದು ಅಭಿಪ್ರಾಯ. ''ಉಚ್ಯತೇ'' ಎಂದರೆ ಐದನೆಯ ಅಧ್ಯಾಯದಲ್ಲಿ ''ಅಂತರ್ಯಾಮಿಣಃ ಕಸ್ಯಚಿತ್'' ಎಂಬುದರಿಂದ. ''ತತ್ರ'' ಎಂದರೆ ಅಂತರ್ಯಾಮಿಣಃ'' ಎಂಬ ಅರ್ಥವನ್ನು ತೋರಿಸಿದ್ದಾರೆ.

ಅಧೀಯತೇ = ಛಂದೋಗರು ಅಧ್ಯಯನ ಮಾಡುತ್ತಾರೆ. ಹೀಗೆ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ಸಿದ್ಧವಾಗುತ್ತದೆ.

### ಸೂತ್ರದಲ್ಲಿರುವ ಚಶಬ್ದವ್ಯಾಖ್ಯಾನ

**ब्रह्मसूत्रभाष्यम् – चशब्देन सकलवेदतन्त्रपुराणादिषु विष्णुपरत्वं पुरुषसूक्तस्य दर्शयति ।**

ಅನುವಾದ - 'ಪುರುಷಮಿದಮಪಿ ಚ' ಎಂಬ ಸೂತ್ರದಲ್ಲಿರುವ ಚ ಶಬ್ದದಿಂದ ಸಕಲವೇದ, ತಂತ್ರ, ಪುರಾಣಗಳಲ್ಲಿ ಪುರುಷಸೂಕ್ತವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂಬುದು ಪ್ರಸಿದ್ಧವಾಗಿದೆ ಎಂದು ಸೂಚಿಸಿದ್ದಾರೆ.

ಪ್ರತಿಪದಾರ್ಥ -- ಪುರುಷಸೂಕ್ತವು ವಿಷ್ಣುಪರವಾದಲ್ಲಿ ಅದರ ಸಮಾಖ್ಯಾದಿಂದ ವೈಶ್ವಾನರ ವಿದ್ಯೆಯು ವಿಷ್ಣುಪರವೆಂದು ನಿರ್ಣಯ-ವಾಗುತ್ತಿತ್ತು. ಆದರೆ ಪುರುಷಸೂಕ್ತವು ವಿಷ್ಣುಪರವೇ ಆಗಿದೆ ಎಂಬುದನ್ನು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. -

ಚ ಶಬ್ದೇನ = ಪುರುಷವಿಧಮಪಿ ಚ ಎಂಬ ಸೂತ್ರದಲ್ಲಿರುವ ಚ ಶಬ್ದದಿಂದ ಋಗಾದಿ ಸಕಲವೇದಗಳು, ತಂತ್ರ, ಪಂಚರಾತ್ರ ಮಹಾಭಾರತಗಳು, ಪುರಾಣದಿಷು = ಸಕಲಪುರಾಣಗಳು ಇವುಗಳಲ್ಲಿ, ಪುರುಷಸೂಕ್ತಸ್ಯ = ಪುರುಷಸೂಕ್ತಕ್ಕೆ, ವಿಷ್ಣುಪರತ್ವಂ = ಮುಖ್ಯವಾದ ವಿಷ್ಣುಪರತ್ವವನ್ನು, ದರ್ಶಯತಿ = ಸೂಚಿಸಿದ್ದಾರೆ.

### ಪುರುಷಸೂಕ್ತವು ವಿಷ್ಣುಪರವೆನ್ನಲು ಪುರಾಣದ ಆಧಾರ

**ब्रह्मसूत्रभाष्यम् – तथा च ब्राह्मे –**

**'यथैव पौरुषं सूक्तं नित्यं विष्णुपरायणम् ।**
**तथैव मे मनो नित्यं भूयाद् विष्णुपरायणम् ।।' इति ।**

ಅನುವಾದ - ಇದೇ ವಿಷಯದಲ್ಲಿ ಬ್ರಾಹ್ಮಪುರಾಣದ ಆಧಾರ ಹೀಗಿದೆ. ಪುರುಷಸೂಕ್ತವು ಕೇವಲ ವಿಷ್ಣುವನ್ನು ಹೇಗೆ ಪ್ರತಿಪಾದಿಸುತ್ತದೋ ಅದರಂತೆ ನನ್ನ ಮನಸ್ಸು ನಿರಂತರವಾಗಿ ವಿಷ್ಣುವಿನಲ್ಲೇ ಆಸಕ್ತವಾಗಲಿ.

ಪ್ರತಿಪದಾರ್ಥ -- ಪುರುಷಸೂಕ್ತವು ವಿಷ್ಣುಪರವೇ ಆಗಿದೆ ಎನ್ನಲು ಪುರಾಣದ ಆಧಾರವನ್ನು ನೀಡುತ್ತಿದ್ದಾರೆ. ತಥಾ ಚ = ಇದೇ ವಿಷಯದಲ್ಲಿ, ಬ್ರಾಹ್ಮೇ = ಬ್ರಹ್ಮ ಪುರಾಣವು ಹೀಗೆ ಹೇಳಿದೆ - ಯಥೈವ = ಯಾವ ರೀತಿಯಾಗಿ, ಪೌರುಷಂ = ಪುರುಷಸಂಬಧಿಯಾದ, ಸೂಕ್ತಮ = ಸೂಕ್ತವು, ನಿತ್ಯಮ್ = ಯಾವಾಗಲು, ವಿಷ್ಣುಪರಾಯಣಂ = ವಿಷ್ಣುವನ್ನೇ ಪ್ರತಿಪಾದಿಸುತ್ತದೋ, ತಥೈವಾ = ಹಾಗೆಯೇ, ಮೇ = ನನ್ನ, ಮನಃ = ಮನಸ್ಸು, ನಿತ್ಯಮ್ = ನಿರಂತರವಾಗಿ, ವಿಷ್ಣುಪರಾಯಣಮ್ = ವಿಷ್ಣುವಿನಲ್ಲೇ ಆಸಕ್ತವಾಗಿ, ಭೂಯಾತ್ = ಆಗಲಿ, ಇತಿ = ಎಂದು.

### ಪುರುಷಸೂಕ್ತವು ವಿಷ್ಣುಪರವೆನ್ನಲು ವೇದದ ಆಧಾರ

**ब्रह्मसूत्रभाष्यम् – चतुर्वेदशिखायां च –**

**'सहस्रशीर्षा पुरुषः सहस्राक्षः सहस्रपात्' इति । 'एष ह्येवाचिन्त्यः परः परमो हरिरादिरनादिरनन्तोऽनन्तशीर्षोऽनन्ताक्षोऽनन्तबाहुरनन्तगुणोऽनन्तरूपः' इति ।**

ಅನುವಾದ - 'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಎಂಬುದಾಗಿ ಪುರುಷಸೂಕ್ತದಲ್ಲಿ ಪ್ರತಿಪಾದ್ಯನಾದ ಆ ಚಿಂತ್ಯನಾದ ಲೋಕವಿಲಕ್ಷಣನೂ, ಸರ್ವೋತ್ತಮನೂ, ಅನಾದಿಯೂ, ಅನಂತನೂ ಆದ ಶ್ರೀಹರಿಯು ಅನಂತ ಮುಖವುಳ್ಳವನು, ಅನಂತವಾದ ಕಣ್ಣುಗಳುಳ್ಳವನು, ಅನಂತವಾದ ತೋಳುಗಳುಳ್ಳವನು, ಅಸಂಖ್ಯವಾದ ರೂಪಗಳೂ, ಗುಣಗಳೂ ಉಳ್ಳವನು. ಎಂಬುದಾಗಿ ಚತುರ್ವೇದಶಿಖೆಯು ಹೇಳಿದೆ.

ಪ್ರತಿಪದಾರ್ಥ -- ಪುರುಷಸೂಕ್ತವು ವಿಷ್ಣುವನ್ನೇ ಪ್ರತಿಪಾದಿಸುತ್ತದೆನ್ನಲು ಶ್ರುತಿಯನ್ನು ಪ್ರಮಾಣವಾಗಿ ಹೇಳುತ್ತಿದ್ದಾರೆ -

ಚತುರ್ವೇದ ಶಿಖಾಯಾಂ ಚ = ಚತುರ್ವೇದ ಶಿಖಾ ಎಂಬ ಗ್ರಂಥದಲ್ಲೂ ಹೀಗೆ ಹೇಳಲಾಗಿದೆ, ಸಹಸ್ರಶೀರ್ಷಾ ಪುರುಷಃ = ಅನಂತವಾದ ಶಿರಸ್ಸುಗಳುಳ್ಳ, ಪುರುಷ ಶ್ರೇಷ್ಠನಾದ ನಾರಾಯಣನು, ಸಹಸ್ರಾಕ್ಷಃ = ಅನಂತವಾದ ಕಣ್ಣುಗಳುಳ್ಳವನು, ಸಹಸ್ರಪಾತ್ = ಅನಂತವಾದ ಕಾಲುಗಳುಳ್ಳವನು, ಇತಿ = ಹೀಗೆ, ಏಷ ಹ್ಯೇವ = ಇಂತಹ ವ್ಯಕ್ತಿಯೇ, ಅಚಿಂತ್ಯಃ = ಅಪ್ರಮೇಯನು, ಪರಃ = ವಿಲಕ್ಷಣನೂ, ಪರಮಃ = ಉತ್ತಮನೂ, ಹರಿಃ = ಪಾಪ ನಾಶಕನು, ಆದಿಃ = ಜಗತ್ ಕಾರಣನು, ಅನಾದಿಯು, ಅನಂತಃ = ನಾಶವಿಲ್ಲದವನೂ, ಅನಂತಶೀರ್ಷಃ = ಅನಂತವಾದ ತಲೆಗಳುಳ್ಳವನೂ, ಅನಂತಾಕ್ಷಃ = ಅನಂತವಾದ ಕಣ್ಣುಗಳುಳ್ಳವನೂ, ಅನಂತಬಾಹುಃ = ಅನಂತವಾದ ಬಾಹು-ಗಳುಳ್ಳವನೂ, ಅನಂತಗುಣಃ = ಅನಂತವಾದ ಗುಣಗಳುಳ್ಳವನೂ, ಅನಂತರೂಪಃ = ಅನಂತವಾದ ರೂಪಗಳುಳ್ಳವನು, ಇತಿ = ಹೀಗೆ.

### ಪುರುಷಸೂಕ್ತವು ವಿಷ್ಣುಪರವೆನ್ನಲು ತಂತ್ರದ ಆಧಾರ

**ब्रह्मसूत्रभाष्यम् – बृहत्संहितायां च -**

**'यथा हि पौरुषं सूक्तं विष्णोरेवाभिधायकम् ।**
**न तथा सर्ववेदाश्च वेदाङ्गानि च नारद ।।' इत्यादि ।**

ಅನುವಾದ - ಬೃಹತ್ ಸಂಹಿತೆಯಲ್ಲೂ ಸಹ ಹೀಗೆ ಹೇಳಲಾಗಿದೆ ಎಲೈ ನಾರದರೆ ! ಪುರುಷಸೂಕ್ತವು ಹೇಗೆ ವಿಷ್ಣುವನ್ನೇ ಪ್ರತಿಪಾದಿಸುತ್ತದೋ ಅದರಂತೆ ವೇದ ವೇದಾಂಗಗಳೂ ಸಹ ಭಗವಂತನನ್ನು ಪ್ರತಿಪಾದಿಸುವುದಿಲ್ಲ.

ಪ್ರತಿಪದಾರ್ಥ -- ಬೃಹತ್ ಸಂಹಿತಾಯಾಂ ಚ = ಬೃಹತ್ ಸಂಹಿತೆಯಲ್ಲಿಯೂ ಸಹ, ಯಥಾ ಹಿ = ಹೀಗೆ, ಪೌರುಷಂ ಸೂಕ್ತಂ = ಪುರುಷಸೂಕ್ತವು, ವಿಷ್ಣೋರೇವಾ = ವಿಷ್ಣುವನ್ನೇ, ಅಭಿಧಾಯಕಮ್ = ಹೇಳುತ್ತದೋ, ತಥಾ = ಹಾಗೆ, ಸರ್ವೇ ವೇದಾಶ್ಚ = ಋಗಾದಿ ಸಕಲವೇದಗಳು, ವೇದಾಂಗಾನಿ = ಶಿಕ್ಷಾದಿ ಷಡಂಗಗಳೂ, ನ ತಥಾ = ಪುರುಷಸೂಕ್ತದಂತೆ ಸಷ್ಟವಾಗಿ ಭಗವಂತನನ್ನು ಪ್ರತಿಪಾದಿಸುವುದಿಲ್ಲ.

ನಾರದಾ = ಎಲೈ ನಾರದರೆ ಈ ವಿಷಯವನ್ನು ತಿಳಿಯಿರಿ, ಇತ್ಯಾದಿ = ಇವೇ ಮೊದಲಾದ ಬ್ರಹ್ಮದೇವರ ಮಾತುಗಳಿಂದ ಈ ವಿಷಯವನ್ನು ಸ್ಪಷ್ಟಪಡಿಸಿಕೊಳ್ಳಬೇಕು.

ಜನ್ಯಜನಕಗಳಿಗೆ ಪುರಾಣಗಳಲ್ಲಿ ಅಭೇದವ್ಯವಹಾರ

**ब्रह्मसूत्रभाष्यम् –**

**'यस्माद्यज्जायते चाङ्गाल्लोकवेदादिकं हरेः ।**
**तन्नामवाच्यमङ्गं तद् यथा ब्रह्मादिकं मुखम् ।।'**

**इति नारदीयवचनान्नाभेदोक्तिविरोधः ।। २६ ।।**

ಅನುವಾದ - ಸಕಲ ಪದಾರ್ಥಗಳೂ, ಲೋಕಗಳೂ,ಯಾವ ಶ್ರೀಹರಿಯ ಅಂಗದಿಂದ ಹುಟ್ಟಿ ಅವನನ್ನೇ ಆಶ್ರಯಿಸಿ, ಅವನಲ್ಲೇ ಲೀನವಾಗುತ್ತದೋ, ಅಂತಹ ಅಂಗಗಳನ್ನು , ಬ್ರಾಹ್ಮಣನೇ ವಿಷ್ಣುವಿನ ಮುಖ ಎಂಬಂತೆ ಆಯಾ ಲೋಕ ವೇದಗಳ ಹೆಸರಿನಿಂದಲೇ ಕರೆಯಬೇಕು. ಹೀಗೆ ನಾರದ ಪುರಾಣದ ವಚನವಿರುವುದರಿಂದ ವೈಶ್ವಾನರ ವಿದ್ಯೆಯಲ್ಲಿ ಪರಮಾತ್ಮನ ಶಿರಸ್ಸಿಗೂ ಸ್ವರ್ಗಲೋಕಕ್ಕೂ ಅಭೇದವನ್ನು ಹೇಳಿರುವುದಕ್ಕೆ ವಿರೋಧವು ಬರುವುದಿಲ್ಲ.

ಪ್ರತಿಪದಾರ್ಥ -- ಯಸ್ಮಾತ್ = ಯಾವ, ಹರೇಃ = ಶ್ರೀಹರಿಯ, ಅಂಗಾತು = ಅವಯವದಿಂದ, ಲೋಕವೇದಾದಿಕಮ್ = ಲೋಕ ಹಾಗೂ ವೇದಗಳು, ಜಾಯತೇ = ಹುಟ್ಟುತ್ತವೋ, ತತಃ = ಅವುಗಳು, ತನ್ನಾಮ ವಾಚ್ಯಮ್ = ಅವೇ ಹೆಸರುಗಳಿಂದ ಕರೆಸಿಕೊಳ್ಳುತ್ತವೆ, ಅಂಗಂಚ = ಅವನ ಅವಯವವು, ತನ್ನಾಮವಾಚ್ಯಮ್ = ಆ ವಸ್ತು ಶಬ್ದ ವಾಚ್ಯವೇ ಆಗುತ್ತದೆ, ಯಥಾ = ಹೇಗೆಂದರೆ, ಬ್ರಹ್ಮಾದಿಕಮ್ = ಬ್ರಾಹ್ಮಣಾದಿವರ್ಣಗಳು, ಮುಖಮ್ = ಮುಖವೆಂದು, ಕರೆಯುತ್ತಾರೋ, ಇತಿ = ಹೀಗೆ, ನಾರದೀಯ ವಿರೋಧಮ್ = ಪರಮಾತ್ಮನ ಅವಯವಗಳಿಂದ ಅಭಿನ್ನವೆಂಬ ವ್ಯವಹಾರವು ವಿರುದ್ಧ-ವಾಗುವುದಿಲ್ಲ.

## ಸತ್ತರ್ಕದೀಪಾವಳಿ

'ಶಬ್ದಾದಿಭ್ಯಃ' ಎಂಬ ಸೂತ್ರಕ್ಕೆ ಸಂಗತಿ

**सत्तर्कदीपावळिः – शब्दादिभ्योऽन्तःप्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते ।। १-२-२६ ।।**

**उक्तार्थमाक्षिप्य समर्थयत्सूत्रं पठित्वा व्याचष्टे – शब्देत्यादिना ।।**

ಹಿಂದೆ ಹೇಳಿದ ಪ್ರಮೇಯವನ್ನು ಆಕ್ಷೇಪಿಸಿ ಉತ್ತರಿಸುವುದಕ್ಕಾಗಿ ಸೂತ್ರವನ್ನು ಪಠನ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ ''ಶಬ್ದಾದಿಭ್ಯಃ'' ಇತ್ಯಾದಿಯಾಗಿ.

'ಶಬ್ದಾದಿಭ್ಯ' ಎಂಬ ಸೂತ್ರಾರ್ಥ

**सत्तर्कदीपावळिः – अस्यार्थः – 'आत्मानं विश्वानरम्' इत्यात्मशब्देन विशेषितोऽप्ययं वैश्वानरविद्याप्रतिपाद्यो न विष्णुः, 'अयमग्निर्वैश्वानरः' 'वैश्वानरमृत आजातमग्निम्' इत्यादिनाग्निशब्देन विशेष्यमाणत्वात् ।**

ಇದರ ಅರ್ಥ ಹೀಗಿದೆ -- 'ಆತ್ಮಾನಂ ವೈಶ್ವಾನರಂ' ಎಂಬಲ್ಲಿ ಆತ್ಮಶಬ್ದವನ್ನು ವಿಶೇಷಣವನ್ನಾಗಿ ಹೇಳಿದ ಮಾತ್ರದಿಂದ ವೈಶ್ವಾನರಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ಅಥವಾ ವೈಶ್ವಾನರವಿದ್ಯೆಯಿಂದ ನಿರ್ಣಯಿಸಲಾಗದು. ಏಕೆಂದರೆ 'ಅಯಮಗ್ನಿರ್ವೈಶ್ವಾನರಃ' 'ವೈಶ್ವಾನರಮೃತ ಆಜಾತಮಗ್ನಿಮ್' ಇತ್ಯಾದಿಯಾಗಿ ಅಗ್ನಿಶಬ್ದವನ್ನು ವೈಶ್ವಾನರನಲ್ಲಿ ವಿಶೇಷಣವನ್ನಾಗಿ ಹೇಳಲಾಗಿದೆ.

ಲಿಂಗದ ಆಧಾರದಿಂದ ಅಗ್ನಿಯು ವೈಶ್ವಾನರನೆಂದು ಆಕ್ಷೇಪ

**सत्तर्कदीपावळिः – लिङ्गवशादप्यग्निरेवात्र वैश्वानरः । तथाहि 'वैश्वानरे तद्धुतं भवति' इति हविराधारत्वमात्मनो वैश्वानरस्येत्यारभ्य हृदयं गार्हपत्ये इत्युच्यमानमप्यग्निलिङ्गम् 'अयमग्निर्वैश्वानरो येनेदमन्नं पच्यते तद् यद्भुक्तं**

**प्रथममागच्छेत् तद्धोमीयं प्रथमामाहुतिं जुहुयात्तां जुहुयात् प्राणाय स्वाहा' इत्यादि शरीरान्तःस्थिताग्निधानान्येते युज्यन्ते ।**

ಲಿಂಗದ ಆಧಾರದಿಂದಲೂ ಸಹ ಅಗ್ನಿಯೇ ಇಲ್ಲಿ ವೈಶ್ವಾನರನಾಗಿದ್ದಾನೆ. ಅದು ಹೀಗೆ -- 'ವೈಶ್ವಾನರೇ ತದ್ಧುತಂ ಭವತಿ' ಎಂಬುದಾಗಿ ಹವಿರಾಧಾರತ್ವ ಎಂಬ ಲಿಂಗವು, ಹಾಗೂ 'ಆತ್ಮನಃ ವೈಶ್ವಾನರಸ್ಯ' ಎಂದು ಪ್ರಾರಂಭವಾಗಿ 'ಹೃದಯಂ ಗಾರ್ಹಪತ್ಯೇ' ಎಂದು ಹೇಳಿರುವುದರಿಂದ ಗಾರ್ಹಪತ್ಯತ್ವವೆಂಬ ಲಿಂಗವು ಹಾಗೂ 'ಅಯಮಗ್ನಿರ್ವೈಶ್ವಾನರೋ ಯೇನೇದಮನ್ನಂ ಪಚ್ಯತೇ ತದ್ ಯದ್ಭುಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಂ ಪ್ರಥಮಮಾಹುತಿಂ ಜುಹುಯಾತ್ ತಾಂ ಜುಹುಯಾತ್ ಪ್ರಾಣಾಯ ಸ್ವಾಹಾ' ಎಂಬುದಾಗಿ ಶರೀರಾಂತಃಸ್ಥಿತನಾದ ಅಗ್ನಿಗೆ ಆಹುತಿದಾನ, ಹೀಗೆ ಶರೀರಾಂತಃಸ್ಥಿತತ್ವ ಮೊದಲಾದ ಲಿಂಗಗಳೆಲ್ಲವೂ ಅಗ್ನಿಯಲ್ಲಿಯೇ ಯುಕ್ತವಾಗುತ್ತವೆ.

### ಪಾಚಕತ್ವಧರ್ಮದಿಂದ ವಿಷ್ಣುವಿನ ಉಪಾಸನೆ

**सत्तर्कदीपावळिः – 'अथ हेममात्मानम्' इत्यादिमहोपनिषद्वाक्ये अग्न्यादिनामभिः पाचकत्वादिधर्मैर्विष्णूपास्तेरुपदिष्टत्वेनात्र वह्न्यादिप्रापकशब्द लिङ्गाभावात् । अरमत्यन्नमित्यर्थः ।**

'ಅಥ ಹೇಮಮಾತ್ಮಾನಮ್' ಇತ್ಯಾದಿಯಾದ ಮಹೋಪನಿಷದ್‌ವಾಕ್ಯದಲ್ಲಿ ಅಗ್ನಿ ಮೊದಲಾದ ನಾಮಾತ್ಮಕಶಬ್ದಗಳಿಂದ ಮತ್ತು ಪಾಚಕತ್ವವೇ ಮೊದಲಾದ ಧರ್ಮಗಳಿಂದ ವಿಷ್ಣುವನ್ನು ಉಪಾಸನೆ ಮಾಡಬೇಕೆಂದು ಉಪದೇಶಿಸಲಾಗಿದೆ. ಆದ್ದರಿಂದ ವಹ್ನ್ಯಾದಿಪ್ರಾಪಕವಾದ ಯಾವುದೇ ಶಬ್ದಗಳಾಗಲೀ ಲಿಂಗಗಳಾಗಲೀ ಇರುವುದಿಲ್ಲವೆಂದು ತಿಳಿಯಬೇಕು. 'ಅರಮ್' ಎಂಬುದಕ್ಕೆ ಅನ್ನ ಎಂದರ್ಥ.

### ವೈಶ್ವಾನರನು ವಿಷ್ಣುವೆನ್ನಲು ಬ್ರಹ್ಮಶಬ್ದ ಹಾಗೂ ಪುರುಷಸೂಕ್ತಗಳ ಆಧಾರ

**सत्तर्कदीपावळिः – 'को न आत्मा किं ब्रह्म' इत्युपक्रम्य निरूप्यमाणत्वादयं वैश्वानरो विष्णुरेव नाग्निः । अनात्तत्वादिवाक्येन**

**आत्मब्रह्मशब्दयोः विष्णवन्यत्रासम्भावितत्वस्य कथनात् पुरुषसूक्तसंवादादप्यत्र वैश्वानरशब्देन विष्णुरेवोच्यते ।**

'ಕೋ ನ ಆತ್ಮಾ ಕಿಂ ಬ್ರಹ್ಮ' ಎಂದು ಪ್ರಾರಂಭವಾಗಿ ನಿರೂಪಣೆ ಮಾಡುತ್ತಿರುವುದರಿಂದ ಈ ವೈಶ್ವಾನರನು ವಿಷ್ಣುವೇ ಆಗಿದ್ದಾನೆ ಹೊರತು ಅಗ್ನಿಯಲ್ಲ. 'ಅನಾತ್ಮತ್ವಾತ್' ಇತ್ಯಾದಿ ವಾಕ್ಯದಿಂದ ಆತ್ಮಾ ಹಾಗೂ ಬ್ರಹ್ಮಶಬ್ದಗಳು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಉಪಪನ್ನವಾಗುವುದಿಲ್ಲ ಎಂದು ಹೇಳಲಾಗಿದೆ. ಅಷ್ಟೇ ಅಲ್ಲದೆ ಪುರುಷಸೂಕ್ತದ ಸಂವಾದವಿರುವುದರಿಂದಲೂ ವೈಶ್ವಾನರಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

### ಪುರುಷಸೂಕ್ತ ಪ್ರತಿಪಾದ್ಯನೇ ಇಲ್ಲಿ ವಿವಕ್ಷಿತ

**सत्तर्कदीपावळिः – तथाहि 'चन्द्रमा मनसो जातः चक्षोस्सूर्यो अजायत' इत्यादि पुरुषसूक्तवाक्येन यः सहस्रशीर्षा पुरुष उक्तः स एवात्र प्रत्यभिज्ञायते आत्मनो वैश्वानरस्य 'मूर्धैव सुतेजाः चक्षुः विश्वरूपः' इत्यादिना ।**

'ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋ ಅಜಾಯತ' ಇತ್ಯಾದಿಯಾದ ಪುರುಷಸೂಕ್ತದ ವಾಕ್ಯದಿಂದ ಯಾವ ಸಾವಿರಾರು ತಲೆಗಳುಳ್ಳ ಪುರುಷನು ಪ್ರತಿಪಾದ್ಯನಾಗಿದ್ದಾನೋ ಅವನೇ ಇಲ್ಲಿಯೂ ಸಹ ಪ್ರತಿಪಾದ್ಯನಾಗಿದ್ದಾನೆ. ಆತ್ಮಶಬ್ದದಿಂದ ಮತ್ತು ವೈಶ್ವಾನರಶಬ್ದದಿಂದ 'ಮೂರ್ಧೈವ ಸುತೇಜಾಃ ಚಕ್ಷುಃ ವಿಶ್ವರೂಪಃ' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆ.

### 'ಯಥೈವ ಪೌರುಷಂ ಸೂಕ್ತಮ್' ಎಂಬ ಪುರಾಣದ ವ್ಯಾಖ್ಯಾನ

**सत्तर्कदीपावळिः – पुरुषसूक्तस्य विष्णवेकपरत्वं सकलवेदेतिहासादिषु अविगानसिद्धं तथाप्युक्तम् । 'यथैव पौरुषम्' इत्यादिभिः पुराणवाक्यैः**

ಪುರುಷಸೂಕ್ತವು ಕೇವಲ ವಿಷ್ಣುಪರವಾಗಿದೆ ಎಂದು ಸಕಲವೇದ ಇತಿಹಾಸಾದಿಗಳಲ್ಲಿ ವಿವಾದವಿಲ್ಲದೇ ಸಿದ್ಧವಾಗಿದೆಯೆಂದು 'ಯಥೈವ ಪೌರುಷಂ ಸೂಕ್ತಮ್' ಇತ್ಯಾದಿ ಪುರಾಣವಾಕ್ಯಗಳಿಂದ ಹೇಳಿರುತ್ತಾರೆ.

## ದ್ಯುಲೋಕಾದಿಗಳಿಗೂ ಭಗವಂತನ ಅವಯವಗಳಿಗೂ ಅಭೇದವಿಲ್ಲ

**सत्तर्कदीपावळिः – पुरुषावयवेभ्यो भेदेन निर्दिष्टानां द्युलोकादीनां वैश्वानरमूर्धादिभिरभेदेन व्यपदेशस्य गतिरुच्यते यस्मादित्यनेन ।**

ಪುರುಷನ ಅವಯವಗಳಿಂದ ದ್ಯುಲೋಕಾದಿಗಳಿಗೆ ಭೇದವು ನಿರ್ದಿಷ್ಟವಾಗಿದೆ. ಆದರೂ ವೈಶ್ವಾನರನ ತಲೆ (ಮೂರ್ಧಾ) ಮೊದಲಾದ ಅವಯವಗಳಿಂದ ಅಭೇದವು ಹೇಳಲ್ಪಟ್ಟಿದೆ. ಹೀಗೆ ಅಭೇದವನ್ನು ಹೇಳಲು ಏನು ಕಾರಣವೆಂಬುದನ್ನು "ಯಸ್ಮಾತ್ ಎಂಬ ಭಾಷ್ಯದಿಂದ ಸಮರ್ಥಿಸುತ್ತಿದ್ದಾರೆ.

## ಅವಯವಗಳಿಗೇಕೆ ಲೋಕಗಳ ಹೆಸರು ?

**सत्तर्कदीपावळिः – यस्माद् यस्माद् विष्णवङ्गाद् यद् यल्लोकादिकं जायते तत्तन्नाम्ना तज्जनकमङ्गमुच्यते । अतो 'मूर्धैव सुतेजाः' इत्यादिव्यपदेशो घटते।**

ಯಾವ ಯಾವ ವಿಷ್ಣುವಿನ ಅವಯವಗಳಿಂದ ಯಾವ ಯಾವ ಲೋಕಾದಿಗಳು ಹುಟ್ಟುತ್ತವೋ ಆ ಭಗವಂತನ ಅವಯವಗಳಿಗೆ ಆಯಾಯಾ ಲೋಕಗಳ ಹೆಸರುಗಳು ಬಂದಿರುತ್ತವೆಂದು ತಿಳಿಯಬೇಕು. ಆದ್ದರಿಂದಲೇ 'ಮೂರ್ಧೈವ ಸುತೇಜಾಃ' ಇತ್ಯಾದಿಯಾಗಿ ಮಾತುಗಳು ಉಪಪನ್ನವಾಗತ್ತವೆ.

## 'ಬ್ರಾಹ್ಮಣೋऽಸ್ಯ ಮುಖಮಾಸೀತ್' ಎಂಬ ಅಭೇದವ್ಯವಹಾರದ ಉದಾಹರಣೆ

**सत्तर्कदीपावळिः – यथा 'ब्राह्मणोऽस्य मुखमासीद् बाहू राजन्यः कृतः' इत्यादौ ब्राह्मणादिजनकेषु मुखादिषु ब्राह्मणादिपदव्यपदेशः । नह्यत्र पुरुषोत्तममुखादिभिरभेदो ब्राह्मणादीनामुच्यते । 'पद्भ्यां शूद्रो अजायत' इत्यादिवाक्यशेषविरोधात् । अर्थान्तरशब्दानां भगवदवयवेषु वृत्तिः विद्वद्रूढ्या योगवृत्त्या वा अवगन्तव्येत्यर्थः ।।**

ಉದಾಹರಣೆ -- 'ಬ್ರಾಹ್ಮಣೋऽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ' ಇತ್ಯಾದಿ ಸ್ಥಳಗಳಲ್ಲಿ ಬ್ರಾಹ್ಮಣರಿಗೆ ಜನಕವಾದ ಪುರುಷನ ಮುಖಾದಿ ಅವಯವಗಳಲ್ಲಿ ಬ್ರಾಹ್ಮಣ

ಮೊದಲಾದ ಪದಗಳ ವ್ಯಪದೇಶವು ಇರುತ್ತದೆ. ಇಲ್ಲಿ ಪುರುಷನ ಮುಖದಿಂದ ಬ್ರಾಹ್ಮಣರಿಗೆ ಅಭೇದವನ್ನು ತಿಳಿಯಬಾರದು. ಏಕೆಂದರೆ "ಪದ್ಭ್ಯಾಂ ಶೂದ್ರೋ ಅಜಾಯತ" ಇತ್ಯಾದಿ ವಾಕ್ಯಶೇಷದ ವಿರೋಧವು ಬರುತ್ತದೆ. ಅಂದರೆ ಶೂದ್ರರಿಗೂ ಸಹ ಅಭೇದವನ್ನು ಹೇಳಬೇಕಾಗುತ್ತದೆ. ಬ್ರಾಹ್ಮಣರಿಂದ ಅಭಿನ್ನನಾದವನು ಶೂದ್ರನಿಂದ ಅಭಿನ್ನನಾಗಲು ಹೇಗೆ ಸಾಧ್ಯ? ಬೇರೆ ಶಬ್ದಗಳನ್ನು ಭಗವಂತನ ಅವಯವಗಳಲ್ಲಿ ವಿದ್ವದ್ರೂಢಿಯಿಂದ ಅಥವಾ ಯೋಗವೃತ್ತಿಯಿಂದ ಕೂಡಿಸಬೇಕು.

## ತತ್ವಪ್ರದೀಪ

### ವೈಶ್ವಾನರನ ಬಗ್ಗೆ ಬೃಹದಾರಣ್ಯಕ ಏನು ಹೇಳುತ್ತದೆ ?

**तत्वप्रदीपः – "शब्दादिभ्योऽन्तःप्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते" ।। 'अयमग्निर्वैश्वानरो योऽयमन्तः पुरुषे' इति वाजसनेयके । वैश्वानरस्याग्नित्वे श्रुतिः प्रमाणम् ।**

'ಅಯಮಗ್ನಿರ್ವೈಶ್ವಾನರೋ ಯೋಽಯಮಂತಃ ಪುರುಷೇ' 'ಸಕಲ ಪುರುಷರ ಅಂತರ್ಯಾಮಿಯಾದ ಅಗ್ನಿಯು 'ವೈಶ್ವಾನರ' ಎನಿಸಿದ್ದಾನೆ' ಎಂಬುದಾಗಿ ಬೃಹದಾರಣ್ಯಕವಾಕ್ಯವು ಹೇಳುತ್ತಿದೆ. ಇದರಿಂದ ಅಗ್ನಿಯೇ 'ವೈಶ್ವಾನರ' ಎನಿಸಿದ್ದಾನೆ ಎಂಬ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗಿದೆ ಎಂದು ತಿಳಿಯುತ್ತದೆ.

ವಿಶೇಷವಿಚಾರ - ಬೃಹದಾರಣ್ಯಕೋಪನಿಷತ್ತಿನಲ್ಲಿ ಬರುವ ವೈಶ್ವಾನರ ಪ್ರಕರಣ ಹೀಗಿದೆ - ಅಯಮಗ್ನಿರ್ವೈಶ್ವಾನರೋ ಯೋಽಯಮಂತಃ ಪುರುಷೋ । ಯೇನೇದಮನ್ನಂ ಪಚ್ಯತೇ, ಯದಿದಮದ್ಯತೇ । ತಸ್ಯೈಷ ಘೋಷೋ ಭವತಿ ಯಮೇತತ್ ಕರ್ಣಾವಪಿಧಾಯ ಶೃಣೋತಿ । ಸ ಯದಾ ಉತ್ಕ್ರಮಿಷ್ಯನ್ ಭವತಿ ನೈನಂ ಘೋಷಂ ಶೃಣೋತಿ । - ಇತಿ ಏಕಾದಶಂ ಬ್ರಾಹ್ಮಣಮ್ ॥

ಜೀವನ ಶರೀರದಲ್ಲಿ ಜಾಠರಾಗ್ನಿಯಲ್ಲಿರುವ ಅಗ್ನಿನಾಮಕ ಪರಮಾತ್ಮನಿಗೆ ವೈಶ್ವಾನರ ಎಂದು ಹೆಸರು. ಈ ವೈಶ್ವಾನರನೇ ಪ್ರಾಣಿಗಳು ತಿನ್ನುವ ಆಹಾರವನ್ನು ಜೀರ್ಣವಾಗಿಸುತ್ತಾನೆ. ಕಿವಿಯನ್ನು ಮುಚ್ಚಿಕೊಂಡಾಗ ಕೇಳುವ ಶಬ್ದ ವಾಯುದೇವನು ಮಾಡುವ ಘೋಷ. ಇದು ಈ ವೈಶ್ವಾನರನ ಸ್ತುತಿರೂಪವಾಗಿದೆ. ಈ ವೈಶ್ವಾನರನು ಜೀವನ ಶರೀರದಿಂದ ಹೊರ ಹೋಗುವ ಕಾಲ ಸನ್ನಿಹಿತವಾದಾಗ ಈ ಘೋಷ ಕೇಳಿಸುವುದಿಲ್ಲ. ಇದು ಮರಣಸೂಚಕವಾಗಿರುತ್ತದೆ.

ಅಗ್ನಿನಾಮಾ ತು ಭಗವಾನೌದರ್ಯಾಗ್ನೌ ಪ್ರತಿಷ್ಠಿತಃ ।
ವಿಶ್ವೈರ್ಗುಣೈಃ ಸಮೇತತ್ವಾದನಂತತ್ವಾಚ್ಚ ಸ ಪ್ರಭುಃ ।
ವೈಶ್ವಾನರ ಇತಿ ಪ್ರೋಕ್ತಃ ಸೋಽಗ್ನಿರಂಗ ಪ್ರಣೇತೃತಃ ।
ತಸ್ಯ ವಿಷ್ಣೋಃ ಸ್ತುತಿರಿಯಂ ಕ್ರಿಯತೇ ವಾಯುನಾ ಸದಾ ।
ಕರ್ಣೌ ಪಿಧಾಯ ಯಾ ನಿತ್ಯಂ ಶ್ರೋತುಂ ಶಕ್ಯಾಽಖಿಲೈಃ ಸದಾ ।
- ಇತಿ ತಂತ್ರಮಾಲಾಯಾಂ ।

ಅಗ್ನಿ ಎಂಬ ಹೆಸರಿನ ಭಗವಂತನು ಜಾಠರಾಗ್ನಿಯಲ್ಲಿದ್ದಾನೆ. ಆ ಪ್ರಭು ವೈಶ್ವ ಎಂದರೆ ಸಕಲಗುಣಗಳಿಂದ ಕೂಡಿರುವುದರಿಂದ ಮತ್ತು ಅದರ ಅಂದರೆ ನಾಶರಹಿತನಾದ್ದರಿಂದ ವೈಶ್ವಾನರ ಎಂದು ಪ್ರಸಿದ್ಧನಾಗಿದ್ದಾನೆ. ಶರೀರದ ಎಲ್ಲ ಅಂಗಗಳನ್ನೂ ಆಯಾ ಕಾರ್ಯಗಳಲ್ಲಿ ನಡೆಸುವುದರಿಂದ ಅವನಿಗೆ ಅಗ್ನಿ ಎಂದು ಹೆಸರು. ಈ ವಿಷ್ಣುವಿನ ಸ್ತುತಿಯನ್ನು ವಾಯುದೇವರು ಸದಾ ಮಾಡುತ್ತಾರೆ. ಎಲ್ಲರೂ ಕಿವಿಮುಚ್ಚಿಕೊಂಡಾಗ ಈ ಸ್ತೋತ್ರವನ್ನು ಕೇಳಬಹುದು.

## 'ಮೂರ್ಧಾನಂ ದಿವಃ' ಎಂಬ ಶ್ರುತ್ಯರ್ಥ

**तत्वप्रदीपः – 'मूर्धानं दिवो अरतिं पृथिव्या वैश्वानरम्' इत्यादेरयमर्थः। 'दिवो मूर्धानम्' मूर्धन्वन्तं विष्णोरङ्गाङ्गभेदात् । 'पृथिव्या' अरतिमन्तं, अरं ततिर्येन; सोऽरतिः पाद इत्यर्थः । विश्वनरस्थम् ।**

'ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರಮ್' ಇತ್ಯಾದಿ ಶ್ರುತಿಗೆ ಹೀಗರ್ಥ - 'ದಿವೋ ಮೂರ್ಧಾನಮ್' ಎಂಬುದಾಗಿ ಶ್ರುತಿಯು ಸ್ವರ್ಗಲೋಕಕ್ಕೆ ಕಾರಣವಾದದ್ದು ವಿಷ್ಣುವಿನ ಶಿರೋಭಾಗ ಎಂದು ಹೇಳಿದೆ. ಇಲ್ಲಿರುವ 'ಮೂರ್ಧಾನಮ್' ಎಂಬ ಪದಕ್ಕೆ 'ಮೂರ್ಧನ್ವಂತಂ' ಶಿರೋಭಾಗವುಳ್ಳವನು ಎಂದರ್ಥ. ವಿಷ್ಣುವಿನ ಅಂಗ ಹಾಗೂ ಅಂಗಿಗಳಿಗೆ ಅಭೇದವಿರುವುದರಿಂದ 'ಮೂರ್ಧಾನಮ್' ಎಂದು ಪ್ರಯೋಗಿಸಲಾಗಿದೆ.

ಪೃಥಿವ್ಯಾ = ಪೃಥಿವಿ ಲೋಕಕ್ಕೆ, ಅರತಿಂ = ಪಾದಗಳುಳ್ಳ ಎಂದರ್ಥ. ಇಲ್ಲಿಯೂ ಕೂಡ ಅರತಿ ಶಬ್ದಕ್ಕೆ ಅರತಿಮಂತಂ' ಅಂಗಾಂಗಗಳ ಅಭೇದವಿವಕ್ಷೆಯಿಂದ ಅರ್ಥವನ್ನು ತಿಳಿಯಬೇಕು. 'ಅರತಿಂ' ಎಂಬ ಪದಕ್ಕೆ 'ಅರಂ ತರತಿ ಯೇನ ಅರತಿಃ' ಎಂಬ ನಿಷ್ಪತ್ತಿಯಂತೆ ಪಾದಗಳು ಎಂದರ್ಥ. ಯಾವುದರಿಂದ ಚೆನ್ನಾಗಿ ವ್ಯಾಪಿಸಲ್ಪಟ್ಟಿದೆಯೋ ಅದು ಎಂದರೆ 'ಪಾದಗಳು' ಎಂದರ್ಥ. ಸಕಲರಲ್ಲಿಯೂ ವಿಷ್ಣು ನೆಲೆಸಿದ್ದಾನೆ ಎಂಬುದು ಅಭಿಪ್ರಾಯ.

### ವೈಶ್ವಾನರನಿಗೆ ಆಹುತಿ ನೀಡುವರು

**तत्वप्रदीपः – ऋते वेदे आ समन्ताद्व्यक्तमङ्गनेतारं (०मगनेतारं – पा) सम्यग्राजन्तं सर्वानतिशय्य स्थितं पातारं जनानामास्य 'आ' समन्ताद्-व्यञ्जयाञ्चक्रुरग्न्यादिदेवाः ।**

ಅಥವಾ 'ಅರತಿ' ಶಬ್ದಕ್ಕೆ ಮತ್ತೊಂದು ಅರ್ಥ ಹೀಗಿದೆ - 'ಋತೇ' = ವೇದದಲ್ಲಿ, ಆ = ಚೆನ್ನಾಗಿ, ತಿ = ಅಭಿವ್ಯಕ್ತನಾದ, ಸಂಮ್ರಾಜಂ = ಚೆನ್ನಾಗಿ ಪ್ರಕಾಶಿಸುವ, ಎಲ್ಲರನ್ನು ದಾಟಿ ನೆಲೆಸಿರುವ ಸಕಲರನ್ನು ರಕ್ಷಣೆ ಮಾಡುವ ವೈಶ್ವಾನರನನ್ನು ದೇವತೆಗಳು ತಮ್ಮ ಮುಖವನ್ನಾಗಿ ಮಾಡಿಕೊಂಡರು. (ವೇದದಲ್ಲಿ ಚೆನ್ನಾಗಿ ಅಭಿವ್ಯಕ್ತನಾದ, ಚೆನ್ನಾಗಿ ಪ್ರಕಾಶಿಸುವ ಎಲ್ಲರನ್ನೂ ದಾಟಿ ನೆಲಸಿರುವ ಸಕಲರನ್ನು ರಕ್ಷಣೆ ಮಾಡುವ ವಿಷ್ಣುವನ್ನು ಅಗ್ನ್ಯಾದಿ ದೇವತೆಗಳು ಮನುಷ್ಯರ ಮುಖದಲ್ಲಿ ಹೋಮಿಸಿದರು.)

ವಿಶೇಷವಿಚಾರ - ಋಗ್ವೇದದ ಪೂರ್ಣ ಮಂತ್ರ ಹೀಗಿದೆ -

ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ
ವೈಶ್ವಾರನಮೃತಃ ಅಜಾತಮಗ್ನಿಂ ॥
ಕವಿಂ ಸಂರಾಜಮತಿಥಿಂ ಜನಾನಾಂ ।
ಆಸನ್ನಾಪಾತ್ರಂ ಜನಯಂತ ದೇವಾಃ ॥

ದಿವಃ = ಸ್ವರ್ಗಲೋಕಕ್ಕೆ ಕಾರಣವಾದ, ಮೂರ್ಧಾನಂ = ಶಿರೋಭಾಗವುಳ್ಳ, ಪೃಥಿವ್ಯಾಃ = ಪೃಥಿವಿ ಲೋಕಕ್ಕೆ ಕಾರಣವಾದ, ಅರತಿಂ = ಪಾದಗಳುಳ್ಳ, ಋತೇ = ವೇದದಲ್ಲಿ, ಆ = ಚೆನ್ನಾಗಿ, ಜಾತಂ = ಅಭಿವ್ಯಕ್ತನಾದ, ಅಗ್ನಿಂ = ಪ್ರತಿಯೊಂದು ಅಂಗಗಳಿಗೆ ಪ್ರವರ್ತಕನಾದ, ಸಂರಾಜಂ = ಚೆನ್ನಾಗಿ ಪ್ರಕಾಶಿಸುವ, ಕವಿಂ = ಜ್ಞಾನಿಯಾದ, ಅತಿಥಿಂ = ಎಲ್ಲವನ್ನೂ ದಾಟಿ ನಿಂತಿರುವ,

ಪಾತ್ರಂ = ರಕ್ಷಕನಾದ, ವೈಶಾನರಂ = ವೈಶ್ವಾನರನನ್ನು, ಜನಾನಾಂ = ಪ್ರಜೆಗಳ, ಆಸನ್ = ಮುಖದಲ್ಲಿ, ಆ = ಚೆನ್ನಾಗಿ, ದೇವಾಃ = ದೇವತೆಗಳು, ಜನಯಂತ = ಮಾಡಿಕೊಂಡರು.

### ಸೂತ್ರದ ಆದಿಪದದಿಂದ ಹೇಳಲ್ಪಟ್ಟ ಅಗ್ನಿಯ ಗಮಕಗಳು

**तत्वप्रदीपः – ''वैश्वानरे तद्धुतं भवति' इत्यादि च श्रुत्यन्तरे हुतस्थानत्वमग्निलिङ्गम् । 'हृदयं गार्हपत्यः' इत्यादौ हृदयस्थो गार्हपत्यपदवाच्य इत्याद्यवगन्तव्यम् । 'येनेदमन्नं पच्यते यदिदमद्यते' इति वाजसनेयके । पाचकत्वेनान्तःप्रतिष्ठानं प्रधानलिङ्गत्वेनाभिमतत्वात् पृथगुक्तम् ।**

'ವೈಶ್ವಾನರೇ ತದ್ಧುತಂ ಭವತಿ' 'ವೈಶ್ವಾನರನಲ್ಲಿ ಅದನ್ನು ಹೋಮಿಸಿದಂತಾಗುತ್ತದೆ' ಇತ್ಯಾದಿಯಾಗಿ ಮತ್ತೊಂದು ಶ್ರುತಿಯಲ್ಲಿ ಹುತಸ್ಥಾನತ್ವವನ್ನು ಅಗ್ನಿಲಿಂಗವೆಂದು ಹೇಳಲಾಗಿದೆ. 'ಹೃದಯಂ ಗಾರ್ಹಪತ್ಯಃ' ಇತ್ಯಾದಿ ಶ್ರುತಿಯಲ್ಲಿ ಹೃದಯದಲ್ಲಿರುವವನು ಗಾರ್ಹಪತ್ಯಪದ-ವಾಚ್ಯನಾದವನೆಂದು ತಿಳಿಯಬೇಕು. 'ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ' ಎಂಬುದು ಬೃಹದಾರಣ್ಯಕದಲ್ಲಿರುವ ವಾಕ್ಯವಾಗಿದೆ. ಪಾಚಕತ್ವಧರ್ಮಮೂಲಕವಾಗಿ ಅಂತಃಪ್ರತಿಷ್ಠಾನತ್ವವು ಪ್ರಧಾನಲಿಂಗವಾಗಿದೆ. ಆದ್ದರಿಂದ ಸೂತ್ರದಲ್ಲಿ ಇದನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದಾರೆ.

ವಿವರಣೆ - ಅಥ ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾ ಅಂಗಾರಾನಪೋಹ್ಯ ಭಸ್ಮನಿ ಜುಹುಯಾತ್ ತಾದೃಕ್ ತತ್ ಸ್ಯಾತ್ ॥ ಅಥ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ।

ಉಣ್ಣುವ ಯಾವ ವ್ಯಕ್ತಿಯು ಇಲ್ಲಿ ನಿರೂಪಿಸಿರುವಂತೆ ವೈಶ್ವಾನರಸ್ವರೂಪ, ಪ್ರಾಣಾಹುತಿಯಿಂದ ತೃಪ್ತರಾಗುವ ದೇವತೆಗಳು ಇವೇ ಮೊದಲಾದವರನ್ನರಿಯದೆ ಪ್ರಾಣಾಗ್ನಿ-ಹೋತ್ರವನ್ನು ನಡೆಸುತ್ತಾನೋ ಅಂತಹ ವ್ಯಕ್ತಿಯು ಅರ್ಪಿಸುವ ಪ್ರಾಣಾಹುತಿಯು ಜ್ವಲಿಸುವ ಅಗ್ನಿಯನ್ನು ಬಿಟ್ಟು ಕೇವಲ ಬೂದಿಯಲ್ಲಿ ಹೋಮ ಮಾಡಿದಂತೆ ವ್ಯರ್ಥವೆನಿಸುವುದು.

ವೈಶ್ವಾನರ ಸ್ವರೂಪಾದಿಗಳನ್ನು ಚೆನ್ನಾಗಿ ತಿಳಿದುಕೊಂಡು ಯಾರು ಪ್ರಾಣಾಗ್ನಿಹೋತ್ರವನ್ನು ಮಾಡುತ್ತಾನೋ ಅವನಿಗೆ ಎಲ್ಲಾ ಲೋಕಗಳಲ್ಲಿರುವ, ಎಲ್ಲಾ ಪ್ರಾಣಿಗಳ ಅಂತರ್ಗತರಾದ ಆತ್ಮರಲ್ಲಿ ಹೋಮ ಮಾಡಿದ ಫಲ ದೊರಕುತ್ತದೆ.

ತದ್ಯಥೈಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತ ಏವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ॥ ತಸ್ಮಾದು ಹೈವಂವಿತ್ ಯದ್ಯಪಿ ಚಂಡಾಲಾಯೋಚ್ಛಿಷ್ಟಂ ಪ್ರಯಚ್ಛೇತ್ ಆತ್ಮನಿ ಹೈವಾಸ್ಯ ತತ್ ವೈಶ್ವಾನರೇ ಹುತಂ ಸ್ಯಾದಿತಿ ॥

ಯಾರು ಹಿಂದೆ ಹೇಳಿರುವಂತೆ ವೈಶ್ವಾನರಸ್ವರೂಪಾದಿಗಳನ್ನರಿತುಕೊಂಡು, ಪ್ರಾಣಾಗ್ನಿಹೋತ್ರವನ್ನು ಮಾಡುತ್ತಾನೋ ಅವನ ಪಾಪವೆಲ್ಲಾ ಬೆಂಕಿಯಲ್ಲಿ ಹಾಕಲ್ಪಟ್ಟ ಹುಲ್ಲು ಮತ್ತು ಹತ್ತಿ ಸುಟ್ಟು ಬೂದಿಯಾಗುವಂತೆ ನಿಶ್ಶೇಷವಾಗಿ ನಾಶವಾಗುವುದು.

ವೈಶ್ವಾನರನ ಜ್ಞಾನವು ಸಕಲಪಾಪಕ್ಷಯಕ್ಕೆ ಕಾರಣವಾದುದರಿಂದಲೇ, ಯಾವ ಚಂಡಾಲನ ಸ್ಪರ್ಶಣೆಯು ಪಾಪಕ್ಕೆ ಕಾರಣವೋ ಅಂತಹ ಚಂಡಾಲನಿಗೆ ವೈಶ್ವಾನರೋಪಾಸಕನು ತನ್ನ ಉಚ್ಛಿಷ್ಟವನ್ನು ಕೊಟ್ಟರೂ ಅವನಿಗೆ ಅದರಿಂದ ಪಾಪಲೇಪವಾಗುವುದಿಲ್ಲ. ಇಷ್ಟೇ ಅಲ್ಲ, ಅದರಿಂದ ಚಂಡಾಲನ ಅಂತರ್ಯಾಮಿಯಾದ ವೈಶ್ವಾನರನಲ್ಲಿ ಹೋಮಿಸಿದಂತಾಗಿ ಮಹಾಪುಣ್ಯವೇ ಲಭಿಸುವುದು.

ತದೇಷ ಶ್ಲೋಕಃ -

ಯಥೇಹ ಕ್ಷುಧಿತಾ ಬಾಲಾಃ ಮಾತರಂ ಪರ್ಯುಪಾಸತೇ ।
ಏವಂ ಸರ್ವಾಣಿ ಭೂತಾನ್ಯಗ್ನಿಹೋತ್ರಮುಪಾಸತೇ ಇತಿ ಅಗ್ನಿಹೋತ್ರಮುಪಾಸತ ಇತಿ ।

ವೈಶ್ವಾನರೋಪಾಸನೆಯು ಸರ್ವಾಭೀಷ್ಟಪ್ರದಾಯಕ ಎಂಬ ವಿಷಯದಲ್ಲಿ ಈ ಶ್ಲೋಕ ಸಮ್ಮತಿಸುತ್ತಿದೆ -

ಹಸಿದ ಮಕ್ಕಳು ಹಸಿವೆಯನ್ನು ತಣಿಸಿಕೊಳ್ಳಲು ಹೇಗೆ ತಾಯಿಯ ಮೊರೆ ಹೊಕ್ಕುವರೋ ಹಾಗೆಯೇ, ತಮ್ಮ ತಮ್ಮ ಅಭೀಷ್ಟವನ್ನು ಸಾಧಿಸಲು ಬಯಸುವ ಎಲ್ಲರೂ ಪ್ರಾಣಾಗ್ನಿಹೋತ್ರದಿಂದ ವೈಶ್ವಾನರನ ಉಪಾಸನೆಗೈಯುತ್ತಾರೆ.

ತಾನ್ ಹೋವಾಚ 'ಏತೇ ವೈ ಖಲು ಯೂಯಂ ಪೃಥಗಿವೇಮಾತ್ಮಾನಂ ವೈಶ್ವಾನರಂ ವಿದ್ವಾಂಸೋಽಯನ್ನಮತ್ಥ । ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ'॥

ನೀವೆಲ್ಲರೂ ವೈಶ್ವಾನರನಾಮಕ ಪರಮಾತ್ಮನ ಬೇರೆ ಬೇರೆ ಅವಯವಗಳನ್ನು ಮಾತ್ರ ತಿಳಿದು ಅದರ ಫಲವಾಗಿ ಯಥೇಷ್ಟ ಅನ್ನವನ್ನು ತಿನ್ನುತ್ತಿರುವಿರಿ. ಯಾರು ಪ್ರಾದೇಶದಷ್ಟಿರುವ ಹೃದಯಕಮಲದಲ್ಲಿ ಪ್ರಾದೇಶಪರಿಮಾಣದಿಂದ ಇದ್ದು, ಪ್ರಾದೇಶಮಾತ್ರನೆಂದೆನಿಸಿ ಕೊಂಡಿರುವ, ಸರ್ವತ್ರವ್ಯಾಪ್ತನಾದ ವೈಶ್ವಾನರನನ್ನು ಮುಂದೆ ಹೇಳಿರುವಂತೆ ಸುತೇಜ ಎಂದು ಮುಂತಾದ ಎಲ್ಲ ಅವಯವಗಳಿಂದ ಕೂಡಿ ಆರಾಧಿಸುವನೋ, ಅವನು ದೇವತಾ ಪುರುಷನಾಗಿದ್ದರೆ ಎಲ್ಲ ಲೋಕಗಳಲ್ಲಿ, ಎಲ್ಲ ಜಡ ಹಾಗೂ ಚೇತನರಲ್ಲಿ ಸನ್ನಿಹಿತನಾಗಿ ಎಲ್ಲ ಅನ್ನವನ್ನೂ ತಿನ್ನುವನು.

ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ । ಚಕ್ಷುರ್ವಿಶ್ವರೂಪಃ । ಪ್ರಾಣಃ ಪೃಥಗ್ವರ್ತ್ಮಾ । ಸಂದೋಹೋ ಬಹುಲಃ । ವಸ್ತಿರೇವ ರಯಿಃ । ಪೃಥಿವ್ಯೇವ ಪಾದೌ । ಉರ ಏವ ವೇದಿಃ । ಲೋಮಾನಿ ಬರ್ಹಿಃ । ಹೃದಯಂ ಗಾರ್ಹಪತ್ಯಃ । ಮನೋಽನ್ವಾಹಾರ್ಯಪಚನಃ । ಆಸ್ಯಮಾಹವನೀಯಃ ॥

ವೈಶ್ವಾನರನ ಶಿರಸ್ಸು ಸುತೇಜ, ಕಣ್ಣು ವಿಶ್ವರೂಪ, ಪ್ರಾಣವಾಯುವು ಪೃಥಗ್ವರ್ತ್ಮಾ, ಮಧ್ಯದೇಹವು ಬಹುಲ, ಕಟಿಪ್ರದೇಶವು ರಯಿ, ಪಾದಗಳು ಪೃಥಿವೀ ಎದೆಯು ಯಜ್ಞವೇದಿಯ ಅಭಿಮಾನಿದೇವತೆಗೆ ಯಜ್ಞಕುಂಡಕ್ಕೆ ಆಶ್ರಯವಾಗಿದ್ದು ಯಜ್ಞವೇದಿಕೆಯಲ್ಲಿರುತ್ತದೆ. ಹಾಗೆಯೇ ರೋಮಗಳು ಬರ್ಹಿಯಲ್ಲಿಯೂ, ಹೃದಯವು ಗಾರ್ಹಪತ್ಯಾಗ್ನಿಯಲ್ಲಿಯೂ, ಮನಸ್ಸು ಅನ್ವಾಹಾರ್ಯಪಚನದಲ್ಲಿಯೂ, ಮುಖವು ಆಹವನೀಯಾಗ್ನಿಯಲ್ಲಿಯೂ ಇರುತ್ತದೆ.

ವಿಶೇಷವಿಚಾರ - ಹಿಂದಿನ 'ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ' ಎಂಬ ಸೂತ್ರದಲ್ಲಿ ಗೀತೆಯ ಸಮಾಖ್ಯಾನದಿಂದ ವೈಶ್ವಾನರ ಶಬ್ದಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಲಾಯಿತು. ಆದರೆ ಇದು ಅಯುಕ್ತವಾಗಿದೆ. ಆದರೆ 'ಅಹಂ ವೈಶ್ವಾನರೋ ಭೂತ್ವಾ' ಎಂಬ ವಾಕ್ಯವು ಪ್ರಕೃತ ಛಾಂದೋಗ್ಯದ 'ವೈಶ್ವಾನರಮುಪಾಸ್ತೇ' ಎಂಬ ಮಾತಿಗೆ ಸಂವಾದವೇ ಅಲ್ಲ. ಆದ್ದರಿಂದ ಗೀತೆಯ ಆಧಾರದಿಂದ ಛಾಂದೋಗ್ಯದಿಂದ ವೈಶ್ವಾನರ ಶಬ್ದಪ್ರತಿಪಾದ್ಯನಾದವನು ವಿಷ್ಣುವೆಂದು ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಆತ್ಮಶಬ್ದದ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಲಾಯಿತು. ಇದೂ ಕೂಡ ಅಯುಕ್ತ. ಏಕೆಂದರೆ ಆತ್ಮಶಬ್ದಕ್ಕೆ ಒಳಗಿರುವವನು ಎಂದಷ್ಟೇ ಅರ್ಥ. ಅಗ್ನಿಯೂ ಕೂಡ ಅಂತರ್ಯಾಮಿಯಾಗಿರುವುದರಿಂದ ಆತ್ಮಶಬ್ದವು ಅಗ್ನಿಯಲ್ಲಿ ಸಾವಕಾಶವಾಗಿದೆ. ಮತ್ತು 'ಅಯಮಗ್ನಿರ್ವೈಶ್ವಾನರಃ ಇವೇ ಮೊದಲಾದ ಶ್ರುತಿಗಳೆಲ್ಲವೂ ಅಗ್ನಿಯನ್ನೇ ವೈಶ್ವಾನರ

ಎಂದು ಕರೆಯುತ್ತಿವೆ. ಅಂತಃಪ್ರತಿಷ್ಠಾನತ್ವ ಗಾರ್ಹಪತ್ಯತ್ವ ಮೊದಲಾದ ಲಿಂಗಗಳೂ ಕೂಡ ಅಗ್ನಿಯಲ್ಲೇ ಪ್ರಸಿದ್ಧವಾಗಿವೆ. ಹೀಗೆ ಅನೇಕ ಶ್ರುತಿಗಳು, ಅನೇಕ ಲಿಂಗಗಳು ಅಗ್ನಿಯಲ್ಲೇ ಇರುವುದರಿಂದ ವೈಶ್ವಾನರ ಶಬ್ದಪ್ರತಿಪಾದ್ಯನಾದವನು ಅಗ್ನಿಯಾಗುತ್ತಾನೆ. ವಿಷ್ಣುವಿನಲ್ಲಿ ಇರುವ ಆತ್ಮ ಶಬ್ದ ಹಾಗೂ ಭಗವದ್ಗೀತೆಯ ಸಂವಾದ ಇವೆರಡೂ ಕೂಡ ಸಾವಕಾಶವಾಗಿವೆ. ಆದ್ದರಿಂದ ವೈಶ್ವಾನರ ಶಬ್ದ ಪ್ರತಿಪಾದ್ಯನಾದವನು ಮಹಾವಿಷ್ಣು ಆಗುವುದಿಲ್ಲ, ಅಗ್ನಿಯೇ ಆಗುತ್ತಾನೆ ಎಂಬುದಾಗಿ 'ಶಬ್ದಾದಿಭ್ಯೋ ಅಂತಃಪ್ರತಿಷ್ಠಾನಾತ್' ಎಂಬ ಸೂತ್ರಭಾಗದಿಂದ ಪೂರ್ವಪಕ್ಷವನ್ನು ಮಾಡಿರುತ್ತಾರೆ.

## ಸಕಲವೂ ಮಹಾವಿಷ್ಣುವಿನದ್ದೇ

**तत्वप्रदीपः – सर्वकर्मा 'न ऋते त्वत्क्रियते' इत्यादेः । वज्रधरत्वादीनि सर्वाणि लिङ्गानि चास्यैवेति सर्वलिङ्ग एषः । तदिच्छयैव सर्वमिति सर्वकामः । गुणा ज्ञानानन्दादयः । धर्माः सर्वज्ञत्वादयः । भेदसंयोगविभागादिधर्मास्तदधीना इति वा 'सर्वधर्मा' । सर्वत्ररूपमस्येति सर्वरूपः । सर्वमस्य रूपं प्रतिमेति वा (सर्वरूपः - पा) । विश्वं पूर्णम्, आरादन्तिके, अरं सम्यक् ॥**

ಸರ್ವನಾಮಾ, ಸರ್ವಕರ್ಮಾ ಎಂಬ ಮಹೋಪನಿಷತ್ತಿನ ಶ್ರುತಿವಾಕ್ಯಕ್ಕೆ ಹೀಗರ್ಥ - 'ನ ಋತೇ ತ್ವತ್ಕ್ರಿಯತೇ' 'ನಿನ್ನ ಹೊರತಾಗಿ ಯಾವ ಕ್ರಿಯೆಗಳೂ ಕೂಡ ನಡೆಯುವುದಿಲ್ಲ' ಎಂಬ ಆಧಾರದಿಂದ ಸಕಲ ಕರ್ಮಗಳೂ ಕೂಡ ಮಹಾವಿಷ್ಣುವಿನದ್ದೇ ಆಗಿವೆ.

'ಸರ್ವಲಿಂಗಃ' - ವಜ್ರಧರತ್ವ ಮೊದಲಾದ ಸಕಲಲಿಂಗಗಳು ಮಹಾವಿಷ್ಣುವಿನಲ್ಲಿಯೇ ಇರುತ್ತವೆ.

'ಸರ್ವಕಾಮಃ' - ವಿಷ್ಣುವಿನ ಇಚ್ಛೆಯಿಂದಲೇ ಎಲ್ಲವೂ ನಡೆಯುವುದರಿಂದ ಅವನು ಸರ್ವಕಾಮನೆಂದು ಕರೆಸಿಕೊಳ್ಳುತ್ತಾನೆ.

'ಸರ್ವಗುಣಃ' - ಜ್ಞಾನ, ಆನಂದ ಮೊದಲಾದ ಗುಣಗಳುಳ್ಳವನು ಮಹಾವಿಷ್ಣು ಆಗಿದ್ದಾನೆ.

'ಸರ್ವಧರ್ಮಃ' - ಸರ್ವಜ್ಞತ್ವ, ಸರ್ವಕರ್ತೃತ್ವ ಮೊದಲಾದ ಧರ್ಮಗಳುಳ್ಳವನು. ಭೇದ, ಸಂಯೋಗ, ವಿಭಾಗ ಮೊದಲಾದ ಧರ್ಮಗಳು ಸರ್ವಜ್ಞತ್ವಾದಿಗಳಂತೆ ಮಹಾವಿಷ್ಣುವಿನಲ್ಲಿ

ಇರುವುದಿಲ್ಲ. ಆದರೆ ಈ ಭೇದಾದಿಗುಣಗಳಿಗೆ ಮಹಾವಿಷ್ಣುವು ಸ್ವತಂತ್ರನಾಗಿರುವುದರಿಂದ ಅವನ ಅಧೀನವಾದ ಕಾರಣ, ಭೇದ, ಸಂಯೋಗ, ವಿಭಾಗ ಮೊದಲಾದ ಧರ್ಮಗಳುಳ್ಳವನು ಮಹಾವಿಷ್ಣುವೇ ಆಗಿದ್ದಾನೆಂದು ಹೇಳಬಹುದು.

'ಸರ್ವರೂಪಃ' - ಎಲ್ಲೆಡೆ ತುಂಬಿರುವನಾದ್ದರಿಂದ ಸರ್ವರೂಪನೆನಿಸಿದ್ದಾನೆ. ಅಥವಾ ಸಕಲ ಪದಾರ್ಥಗಳು ಇವನ ಪ್ರತಿಮೆಯಾಗಿರುವುದರಿಂದಲೂ ಇವನು ಸರ್ವರೂಪ ಎನಿಸಿದ್ದಾನೆ.

'ವಿಶ್ವಂ' - ಪೂರ್ಣನಾದವನು, ಆರಾತ್ = ಹೃದಯದಲ್ಲಿಯೇ, ಅರಮ್ = ಚೆನ್ನಾಗಿ ಉಪಾಸನೆಗೆ ಅರ್ಹನು.

ಉದ್ದಾಲಕರಿಗೆ ಅಶ್ವಪತಿರಾಜನಿಂದ ವೈಶ್ವಾನರನ ಉಪದೇಶ

**तत्वप्रदीपः – अनात्तत्वादनात्मान इत्यादिना 'असम्भवात्' इति सूत्रावयवं व्याचष्टे । को न आत्मा किं ब्रह्मेति मीमांसमानैर्महाशालैर्महामुनिभिरुद्दालकोद्दिष्टैस्तद्युक्तैः परिपृष्टो राजाऽश्वपतिर्वैश्वानरम् उपदिदेश ।**

'ಅನಾತ್ತತ್ವಾತ್ ಅನಾತ್ಮನಃ' ಇತ್ಯಾದಿ ಭಾಷ್ಯದ ಮಾತಿನಂತೆ 'ಅಸಂಭವಾತ್' ಇತ್ಯಾದಿ ಸೂತ್ರದ ಅವಯವವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂಬುದಾಗಿ ಮಹಾಮುನಿಗಳಾದ ಉದ್ದಾಲಕರು ಜಿಜ್ಞಾಸೆ ಮಾಡುತ್ತಿರುವಾಗ ರಾಜನಾದ ಅಶ್ವಪತಿಯು ವೈಶ್ವಾನರನನ್ನು ಉಪದೇಶ ಮಾಡಿದನು.

ವಿಶೇಷವಿಚಾರ- ಯಾವಯಾವದೇವತೆಗಳಲ್ಲಿ ಯಾವಗುಣ, ಧರ್ಮ, ರೂಪಗಳೆಲ್ಲವೂ ಇವೆಯೋ, ಅವೆಲ್ಲವೂ ಪರಮಾತ್ಮನಲ್ಲಿಯೇ ಪರಮಮುಖ್ಯವೃತ್ತಿಯಲ್ಲಿರುತ್ತವೆ. ಆದ್ದರಿಂದ ಅಗ್ನಿಪರವಾದ ಶ್ರುತಿಯ ವಿರೋಧಕ್ಕೆ ಅವಕಾಶವಿಲ್ಲ. ಹಾಗಾದರೆ ಅಗ್ನಿಯಲ್ಲೇಕೆ ಅಷ್ಟೊಂದು ಲಿಂಗಗಳನ್ನು ಹೇಳಿದ್ದಾರೆಂದರೆ ಆ ಲಿಂಗಗಳೂ ಕೂಡ ವಿಷ್ಣುವಿನ ಅಧೀನವಾದ್ದರಿಂದ ಮತ್ತು ಆ ಲಿಂಗಗಳಿಂದ ಕೂಡಿರುವ ವಿಷ್ಣುವನ್ನೇ ಉಪಾಸನೆ ಮಾಡಬೇಕೆಂಬ ಉದ್ದೇಶದಿಂದ ಶ್ರುತಿಯಲ್ಲಿ ಲಿಂಗಗಳನ್ನು ಹೇಳಿರುತ್ತಾರೆ.

'ಅಥ ಹೇಮಮಾತ್ಮಾನಂ' ಎಂಬ ಶ್ರುತಿಗೆ ಹೀಗರ್ಥ - ಅಥ = ಅನಂತರ, ಹೇಮಂ = ಬಂಗಾರದ ವರ್ಣದಲ್ಲಿರುವ, ಇಮಂ = ಈ, ಆತ್ಮಾನಂ = ಸಕಲ ಸ್ವಾಮಿಯಾದ,

ಅಣೋರಣೀಯಾಸಂ = ಸೂಕ್ಷ್ಮವಸ್ತುಗಳಿಗಿಂತಲೂ ಸೂಕ್ಷ್ಮನಾದ, ಪರತಃಪರಮ್ = ಶ್ರೇಷ್ಠರಿಗೂ ಶ್ರೇಷ್ಠನಾದ, ವಿಶ್ವಂ = ಪೂರ್ಣನಾದ, ಹರಿಂ = ವಿಷ್ಣುವನ್ನು, ಇತಿ = ಹೀಗೆ, ಉಪಾಸೀತ = ಧ್ಯಾನ ಮಾಡಬೇಕು. ಸರ್ವಕರ್ಮಾ = 'ನ ಋತೇತ್ವತ್ಕ್ರಿಯತೇ' ಎಂಬ ಶ್ರುತಿಯಂತೆ ಎಲ್ಲಾ ಕ್ರಿಯೆಗಳನ್ನು ತಾನೇ ನಡೆಸುವವನು. ಸರ್ವನಾಮಾ = ರುದ್ರ, ಇಂದ್ರ ಮೊದಲಾದ ಸಕಲ ನಾಮಗಳುಳ್ಳವನು. ಸರ್ವಲಿಂಗಃ = ವಜ್ರಧರತ್ವ ಮೊದಲಾದ ಸಕಲಧರ್ಮಗಳುಳ್ಳವನು. ಸರ್ವಕಾಮಃ = ತನ್ನ ಇಚ್ಛೆಯಿಂದಲೇ ಸಕಲ ಕ್ರಿಯೆಗಳನ್ನು ನಡೆಸುವವನು, ಸರ್ವರೂಪಃ = ಎಲ್ಲೆಡೆ ತುಂಬಿರುವವನು ಹಾಗೂ ಎಲ್ಲಾ ವಸ್ತುಗಳನ್ನು ಪ್ರತೀಕವಾಗಳುಳ್ಳವನು. ಸಃ = ಅಂಥ, ಏತಂ = ಈ ವಿಷ್ಣುವನ್ನು, ಯಃ = ಅರ್ಹನಾದ ವ್ಯಕ್ತಿಯು, ವಿಶ್ವಂ = ವ್ಯಾಪ್ತನಾದ, ಆತ್ಮಾನಂ = ಆತ್ಮನೆನಿಸಿದ, ಏತಂ = ಈ, ಹರಿಂ = ಶ್ರೀಹರಿಯನ್ನು, ಅರಂ = ಚೆನ್ನಾಗಿ, ಆರಾತ್ = ತನ್ನ ಹೃದಯದಲ್ಲಿಯೇ, ಉಪಾಸ್ತೇ = ಧ್ಯಾನ ಮಾಡುತ್ತಾನೋ, ತಸ್ಯ = ಅಂಥ ಸಾಧಕನಿಗೆ, ಸರ್ವೇಷು ಲೋಕೇಷು = ಎಲ್ಲಾ ಲೋಕಗಳಲ್ಲಿ ಪ್ರವೇಶವು, ಸರ್ವೇಷು ಭೂತೇಷು = ಎಲ್ಲಾ ಭೂತಗಳಲ್ಲಿ ಪ್ರೀತಿಯನ್ನು ಗಳಿಸುತ್ತಾನೆ, ಸರ್ವೇಷು ದೇವೇಷು = ಸಕಲ ದೇವತೆಗಳ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಸರ್ವೇಷು ವೇದೇಷು = ಸಕಲ ವೇದಗಳ ಮುಖ್ಯಾರ್ಥವನ್ನು ಬಲ್ಲವನಾಗುತ್ತಾನೆ. ಹೀಗೆ ಕಾಮಚಾರೋ ಭವತಿ = ಸ್ವೇಚ್ಛಾವೃತ್ತಿಯನ್ನು ಪಡೆಯುತ್ತಾನೆ.

### ಆತ್ಮ ಹಾಗೂ ಬ್ರಹ್ಮ ಯಾರೋ, ಅವನೇ ವೈಶ್ವಾನರ

**तत्वप्रदीपः – नच विष्णोरन्येषामात्मत्वं ब्रह्मत्वं च सम्भवति । अनात्तत्वादित्यादिवचनात् । तस्माद्विष्णोरेव वैश्वानरः ।**

ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಆತ್ಮತ್ವವಾಗಲೀ, ಬ್ರಹ್ಮತ್ವವಾಗಲೀ ಇರಲು ಸಾಧ್ಯವೇ ಇಲ್ಲ. 'ಅನಾತ್ತತ್ವಾತ್' ಇತ್ಯಾದಿ ಪ್ರಮಾಣಶ್ಲೋಕವೇ ಈ ವಿಷಯದಲ್ಲಿ ಆಧಾರವಾಗಿದೆ. ಆದ್ದರಿಂದ ಮಹಾವಿಷ್ಣುವೇ 'ವೈಶ್ವಾನರ' ಎಂದು ಕರೆಸಿಕೊಳ್ಳುತ್ತಾನೆ.

ವಿಶೇಷವಿಚಾರ - 'ವ್ಯಪದೇಶಾತ್' ಎಂಬ ಹೇತುವಿನಿಂದ ಸೂತ್ರಕಾರರು ಅಗ್ನಿಶಬ್ದ ಮೊದಲಾದ ನಾಮಗಳೆಲ್ಲವೂ ವಿಷ್ಣುಪರವಾಗಿವೆ ಎಂದು ಪಾಚಕತ್ವ ಮೊದಲಾದ ಧರ್ಮಗಳೂ ಕೂಡ ವಿಷ್ಣುಪರವಾಗಿವೆ ಎಂದು ಸಮರ್ಥಿಸಿದರು. ಮತ್ತು ಪೂರ್ವಪಕ್ಷದಲ್ಲಿ ಹೇಳಿದ ಶ್ರುತಿ-ಲಿಂಗಗಳೆಲ್ಲವೂ ಸಾವಕಾಶವಾಗಿವೆ ಎಂಬುದನ್ನೂ ಕೂಡ ಪ್ರತಿಪಾದನೆ ಮಾಡಿದರು. ಪ್ರಕೃತ 'ಅಸಂಭವಾತ್' ಎಂಬುದರಿಂದ ಅಗ್ನಿಯು ವೈಶ್ವಾನರನಾದಲ್ಲಿ ಬಾಧಕವನ್ನು ಹೇಳುತ್ತಿದ್ದಾರೆ. ಈ 'ಅಸಂಭವಾತ್' ಎಂಬುದಕ್ಕೆ ಎರಡು ಅಭಿಪ್ರಾಯವನ್ನು

ಭಾಷ್ಯದಲ್ಲಿ ವಿವರಿಸಿದ್ದಾರೆ.

೧. ವೈಶ್ವಾನರನು ವಿಷ್ಣು ಎಂದು ನಿರ್ಧಾರ ಮಾಡಲು ಆತ್ಮಶಬ್ದವು ಆಧಾರವಾಗಿದೆ. ಈ ಆತ್ಮಶಬ್ದವು ಅಗ್ನಿಯಲ್ಲಿ ಅತ್ಯಂತ ಅಸಂಭಾವಿತವಾಗಿರುವುದರಿಂದ ಅಗ್ನಿಯು ವೈಶ್ವಾನರ-ನಾಗುವುದಿಲ್ಲ.

೨. ಈ ಪ್ರಕರಣದ ಪ್ರಾರಂಭದಲ್ಲಿ ಆತ್ಮ ಹಾಗೂ ಬ್ರಹ್ಮರ ಬಗ್ಗೆ ಪ್ರಶ್ನೆ ಇದೆ. ಅದರ ಬಗ್ಗೆ ಉತ್ತರವೂ ಕೂಡ ಇರುತ್ತದೆ. ಈ ಕಾರಣದಿಂದ ಸಮಗ್ರ ಪ್ರಕರಣವು ವಿಷ್ಣುಪರವಾಗುತ್ತದೆ ಎಂದು ತಿಳಿಯುತ್ತದೆ. ಆದ್ದರಿಂದ ಅಗ್ನಿಯು ವೈಶ್ವಾನರನೆಂದು ಎಂದು ತಿಳಿಯುವುದು ಅತ್ಯಂತ ಅಸಂಭಾವಿತವಾಗಿದೆ.

ಬೇರೆಯವರು ಸ್ವತಂತ್ರರಲ್ಲದ ಕಾರಣ ಆತ್ಮರಾಗಲು ಸಾಧ್ಯವಿಲ್ಲ. ಗುಣಗಳಲ್ಲಿ ಅಲ್ಪರಾದುದರಿಂದ ಬ್ರಹ್ಮರೂ ಕೂಡ ಆಗಲು ಸಾಧ್ಯವಿಲ್ಲ. ಆದ್ದರಿಂದ ಆತ್ಮ ಹಾಗೂ ಬ್ರಹ್ಮ ಎರಡೂ ಶಬ್ದಗಳು ಮಹಾವಿಷ್ಣುವಿನಲ್ಲಿ ನಿರವಕಾಶವಾಗಿವೆ ಎಂಬುದನ್ನು 'ಅನಾತ್ಮತ್ವಾತ್' ಎಂಬ ಪ್ರಮಾಣವಾಕ್ಯವು ನಿರ್ಧರಿಸುತ್ತಿದೆ.

### 'ತಸ್ಯ ಹ ವಾ' ಇತ್ಯಾದಿ ಶ್ರುತ್ಯರ್ಥ

**तत्वप्रदीपः – 'तस्य ह वा एतस्य आत्मनो वैश्वानरस्य मूर्धैव सुतेजाश्चक्षुर्विश्वरूपः प्राणः पृथग्वर्त्मा सन्दोहो(सन्देहो –पा) बहुलो वस्तिरेव रैः पृथिव्येव पादौ' इत्यादेरर्थस्तु –**

**क्रीडात्मकत्वाद् द्याख्यं च सुतेजाश्चातितेजसा(सः-पा) ।**
**स्वर्गाधारं शिरो विष्णोः सर्वरूपातिदर्शनात् ।।**

'ತಸ್ಯ ಹ ವಾ ಏತಸ್ಯ ಆತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ ಸಂದೋಹೋ ಬಹುಲೋ ವಸ್ತಿರೇವ ರೈಃ ಪೃಥಿವ್ಯೇವ ಪಾದೌ' 'ಆ ವೈಶ್ವಾನರನ ಶಿರಸ್ಸು ಸುತೇಜ, ಕಣ್ಣು ವಿಶ್ವರೂಪ, ಪ್ರಾಣವಾಯು ಪೃಥಗ್ವರ್ತ್ಮ, ಮಧ್ಯದೇಹವು ಬಹುಲ, ಕಟಿಪ್ರದೇಶವು, ಪಾದಗಳು ಪೃಥಿವಿ, ಎದೆಯು ಯಜ್ಞವೇದಿಯ ಅಭಿಮಾನಿದೇವತೆಗೆ ಯಜ್ಞಕುಂಡಕ್ಕೆ ಆಶ್ರಯವಾಗಿದ್ದು, ಯಜ್ಞವೇದಿಕೆಯಲ್ಲಿರುತ್ತದೆ.' ಇತ್ಯಾದಿ ಶ್ರುತಿಯ ಅರ್ಥ ಹೀಗಿದೆ -

'ಕ್ರೀಡಾತ್ಮಕತ್ವಾದ್ ದ್ಯಾಖ್ಯಂ ಚ ಸುತೇಜಾಶ್ಚಾತಿತೇಜಸಾ ।
ಸ್ವರ್ಗಾಧಾರಂ ಶಿರೋ ವಿಷ್ಣೋಃ ಸರ್ವರೂಪಾತಿದರ್ಶನಾತ್ ॥'

ಪರಮಾತ್ಮನ ಶಿರಸ್ಸು ಕ್ರೀಡಾಸ್ವರೂಪಿಯಾದುದರಿಂದಲೂ, ಸ್ವರ್ಗಕ್ಕೆ ಆಧಾರವಾಗಿರುವುದರಿಂದಲೂ ದಿವ್ ಎಂಬ ಹೆಸರುಳ್ಳದ್ದು, ಅತಿಶಯವಾದ ತೇಜಸ್ಸಿರುವ ಕಾರಣ ಇದಕ್ಕೆ 'ಸುತೇಜ' ಎಂಬ ಹೆಸರೂ ಇದೆ.

ವಿಶೇಷವಿಚಾರ - 'ಔಪಮನ್ಯೋ ಕಂ ತ್ವಮಾತ್ಮಾನಮುಪಾಸ್ಸ' ಇತಿ । 'ದಿವಮೇವ ಭಗವೋ ರಾಜನ್' ಇತಿ ಹೋವಾಚ । ಏಷ ವೈ ಸುತೇಜಾ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ। ತಸ್ಮಾತ್ ತವ ಸುತಂ ಪ್ರಸುತಮಾಸುತಂ ಕುಲೇ ದೃಶ್ಯತೇ। ಅತ್ಸ್ಯನ್ನಂ। ಪಶ್ಯಸಿ ಪ್ರಿಯಮ್ । ಅತ್ತ್ಯನ್ನಂ, ಪಶ್ಯತಿ ಪ್ರಿಯಂ, ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ, ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ। ಮೂರ್ಧಾ ತ್ವೇಷ ಆತ್ಮನ' ಇತಿ ಹೋವಾಚ। ಮೂರ್ಧಾ ತೇ ವ್ಯಪತಿಷ್ಯತ್ ಯನ್ಮಾಂ ನಾಗಮಿಷ್ಯ' ಇತಿ।

'ಉಪಮನ್ಯುವಿನ ಮಗನಾದ ಪ್ರಾಚೀನಶಾಲನೇ ! ನೀನು ವೈಶ್ವಾನರನಾಮಕ ಪರಮಾತ್ಮನನ್ನು ಯಾವ ಹೆಸರಿನಿಂದ ಉಪಾಸನೆ ಮಾಡುತ್ತಿರುವಿ ?' ಎಂದು ರಾಜನು ಕೇಳಿದನು. ಆಗ ಪ್ರಾಚೀನಶಾಲನು 'ಪೂಜ್ಯನಾದ ರಾಜನೇ ! ಕ್ರೀಡಾರೂಪಿಯಾದುದರಿಂದ ದಿವ್ ಎಂದು ಕರೆಯಲ್ಪಡುವವನು ಮತ್ತು ಸ್ವರ್ಗಲೋಕಕ್ಕೆ ಆಧಾರನು ಎಂದು ವೈಶ್ವಾನರನನ್ನು ನಾನು ಉಪಾಸಿಸುತ್ತಿರುವೆನು' ಎಂದುತ್ತರಿಸಿದನು. ಆಗ ರಾಜನೆಂದನು 'ನೀನು ಉಪಾಸನೆ ಮಾಡುತ್ತಿರುವ ಈ ವೈಶ್ವಾನರನಾಮಕ ಪರಮಾತ್ಮನು ಸ್ವರ್ಗಲೋಕಾಧಾರನಾಗಿದ್ದನು ಅತಿ ತೇಜಸ್ವಿ ಆಗಿರುವುದರಿಂದ 'ಸುತೇಜ' ಎನಿಸಿದ್ದಾನೆ. ಆದ್ದರಿಂದಲೇ ನಿನ್ನ ಮನೆತನದಲ್ಲಿ ಸ್ವರ್ಗಸಾಧನವಾದ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯ ಸವನಗಳು ನಿರಂತರ ಕಂಡು ಬರುತ್ತವೆ ಮತ್ತು ನಿನ್ನ ಕುಲದಲ್ಲಿ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳುಗಳ ಸಮೃದ್ಧಿಯು ಕಾಣಿಸಿಕೊಳ್ಳುವುದು. 'ನೀನೂ ಒಳ್ಳೆಯ ಜೀರ್ಣಶಕ್ತಿವುಳ್ಳವನಾಗಿ ಯಥೇಷ್ಟ ಅನ್ನವನ್ನು ಉಣ್ಣುವಿ, ಪ್ರಿಯವಾದುದನ್ನೇ ನೋಡುವಿ, ನಿನ್ನಂತೆ ಯಾರು ಈ ವೈಶ್ವಾನರನನ್ನು ಉಪಾಸಿಸುವನೋ ಅವನೂ ಯಥೇಷ್ಟಅನ್ನವನ್ನುಣ್ಣುತ್ತಾನೆ. ಪ್ರಿಯವಾದುದನ್ನೇ ನೋಡುತ್ತಾನೆ. ಅವನ ಕುಲದಲ್ಲಿ ಬ್ರಹ್ಮವರ್ಚಸ್ಸು ವೃದ್ಧಿಸುತ್ತದೆ. ನೀನು ಉಪಾಸಿಸುತ್ತಿರುವ ದ್ಯುಲೋಕದಲ್ಲಿದ್ದು ದ್ಯುನಾಮಕವೂ, ಸುತೇಜನಾಮಕವೂ ಆದ ಭಗವದ್ರೂಪವು ವೈಶ್ವಾನರನ ಶಿರಸ್ಸು ಮಾತ್ರ, ಸರ್ವಾವಯವವಲ್ಲ. ಇದನ್ನು ಅರಿಯಲು ನೀನು ನನ್ನಲ್ಲಿಗೆ ಬರದೇ ಇರುತ್ತಿದ್ದರೆ, ವೈಶ್ವಾನರನ ಶಿರಸ್ಸನ್ನು ಅರಿಯದಿದ್ದ ಅಪರಾಧದಿಂದ ನಿನ್ನ ಶಿರಸ್ಸು ಕೆಳಗೆ ಬೀಳುತ್ತಿತ್ತು ಎಂದು.

ಭಾಷ್ಯದಲ್ಲಿ 'ಇತ್ಯಾದಿನಾ ಯಃ ಪುರುಷಾಖ್ಯಃ' ಎಂದು ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ ಪುರುಷಸೂಕ್ತದಲ್ಲಿರುವ 'ತಥಾ ಲೋಕಾನ್ ಆಕಲ್ಪಯತ್' ಎಂಬ ಶ್ರುತಿಯ ತನಕ ವಾಕ್ಯಗಳನ್ನು ವಿವಕ್ಷಿಸಬೇಕು.

ಪುರುಷಸೂಕ್ತದಲ್ಲಿ ವಿಷ್ಣುವು ಹೇಗೆ ಪ್ರತಿಪಾದ್ಯನಾಗಿದ್ದಾನೋ, ಅದೇ ಕ್ರಮದಲ್ಲಿ ವೈಶ್ವಾನರ ವಿದ್ಯೆಯೂ ಕೂಡ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತಿದೆ. ಅದು ಹೀಗೆ -

'ಮುಖಾದಿಂದ್ರಶ್ಚಾಗ್ನಿಶ್ಚ' ಎಂಬ ಪುರುಷಸೂಕ್ತವು ಮುಖಸ್ಥಾನದಲ್ಲಿರುವ ಶಿರಸ್ಸಿನಿಂದ ಅಗ್ನಿಯು ಹುಟ್ಟಿದನೆಂದು ಹೇಳುತ್ತಿದೆ. ಇದೇ ವಿಷಯವನ್ನು ವೈಶ್ವಾನರ ಪ್ರಕರಣವು 'ಮೂರ್ಧೈವ ಸುತೇಜಾಃ' ಎಂಬುದಾಗಿ ಶಿರಸ್ಸಿನಿಂದ ಅಗ್ನಿಯು ಜನನವನ್ನು ಪ್ರತಿಪಾದನೆ ಮಾಡುತ್ತಿದೆ. ಮತ್ತು 'ಸುತೇಜಾಃ' ಶಬ್ದದಿಂದ ಪ್ರಕಾಶರೂಪದಿಂದ ಅಗ್ನಿಯ ಜೊತೆ ದ್ಯುಲೋಕವನ್ನೂ ಕೂಡ ವಿವಕ್ಷಿಸಬೇಕು. ಆಗ 'ಶೀರ್ಷ್ಣೋರ್ದ್ಯೌಸ್ಸಮವರ್ತತ' ಎಂಬುದಾಗಿ ಪುರುಷಸೂಕ್ತವು ದ್ಯುಲೋಕವು ಶಿರಸ್ಸಿನಿಂದ ಹುಟ್ಟಿತು ಎಂದು ಹೇಳುತ್ತಿದೆ. ಇದನ್ನೇ 'ಮೂರ್ಧೈವ ಸುತೇಜಾಃ' ಎಂಬ ವಾಕ್ಯವು ಹೇಳುತ್ತಿದೆ. 'ಚಕ್ಷುರ್ವಿಶ್ವರೂಪಃ' ಎಂಬುದಾಗಿ ವೈಶ್ವಾನರ ಪ್ರಕರಣವು ಸೂರ್ಯನ ಜನನಕ್ಕೆ ಚಕ್ಷುರಿಂದ್ರಿಯವು ಕಾರಣವೆಂದು ಹೇಳುತ್ತಿದೆ. 'ವಿಶ್ವರೂಪ' ಶಬ್ದಕ್ಕೆ 'ಭಗವಂತನ ಕಣ್ಣು' ಎಂದರ್ಥ. ಅಥವಾ 'ವಿಶ್ವಂ ರೂಪಯತಿ' ಎಂಬ ನಿಷ್ಪತ್ತಿಯನ್ನು ಮಾಡಿದಾಗ ಸೂರ್ಯ ಎಂಬರ್ಥವು ತಿಳಿಯುತ್ತದೆ. ಸೂರ್ಯನು ಭಗವಂತನ ಕಣ್ಣಿನಿಂದ ಹುಟ್ಟಿದನಾದ್ದರಿಂದ ವಿಶ್ವರೂಪ ಎಂಬ ಹೆಸರು ಕಣ್ಣಿಗೆ ಬಂದಿತು. ಇದು 'ಚಕ್ಷೋಃ ಸೂರ್ಯೋ ಅಜಾಯತ' ಎಂಬ ಪುರುಷಸೂಕ್ತದ ಅರ್ಥವನ್ನೇ ಹೇಳುತ್ತಿದೆ.

'ಪ್ರಾಣಃ ಪೃಥಗ್ವರ್ತ್ಮಾ' ಎಂಬುದಾಗಿ ವೈಶ್ವಾನರ ಶ್ರುತಿಯು ಸರ್ವೇಂದ್ರಿಯಾಭಿಮಾನಿ ದೇವತೆಗಳಿಗಿಂತ ವೈಲಕ್ಷಣ್ಯವಾದ ದಾರಿಯುಳ್ಳವನು ಮುಖ್ಯಪ್ರಾಣನೆಂದು ಹೇಳುತ್ತಿದೆ. ನಿದ್ರಾಕಾಲದಲ್ಲಿ ಬೇರೆ ಇಂದ್ರಿಯಾಭಿಮಾನಿದೇವತೆಗಳು ನಿಷ್ಕ್ರಿಯವಾಗಿದ್ದರೂ ವಾಯುದೇವನು ಪ್ರಾಣವಾಯುವಿನ ಮೂಲಕ ಸಕ್ರಿಯನಾಗಿರುವುದರಿಂದ 'ಪೃಥಗ್ವರ್ತ್ಮಾ' ಎಂದು ಕರೆಸಿಕೊಳ್ಳುವನು. 'ಪ್ರಾಣದ್ವಾಯುರಜಾಯತ' ಪುರುಷಸೂಕ್ತವೂ ಕೂಡ ಇದನ್ನೇ ಪ್ರತಿಪಾದನೆ ಮಾಡುತ್ತಿದೆ.

ಹೀಗೆ ವೈಶ್ವಾನರ ಪ್ರಕರಣವು ಪುರುಷಸೂಕ್ತದಲ್ಲಿರುವ ವಿಷಯವನ್ನೇ ಪ್ರತಿಪಾದನೆ ಮಾಡುತ್ತಿರುವುದರಿಂದ, ಪುರುಷಸೂಕ್ತ ಪ್ರತಿಪಾದ್ಯನಾದ ನಾರಾಯಣನೇ ವೈಶ್ವಾನರ ಪ್ರಕರಣದಿಂದಲೂ ಕೂಡ ಪ್ರತಿಪಾದ್ಯನಾಗುತ್ತಾನೆ.

ಭಾಷ್ಯದಲ್ಲಿ ಶ್ರೀಮದಾಚಾರ್ಯರು 'ತದ್ವಿಧಮಪಿ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ತದ್ವಿಧಮೇವ' ಎಂದು ಹೇಳುತ್ತಾರೆ. ಅಪಿ ಶಬ್ದಕ್ಕೆ ಅವಧಾರಣಾರ್ಥವನ್ನು ತಿಳಿಯಬೇಕೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಥವಾ 'ಅಪಿ' ಶಬ್ದಕ್ಕೆ ಸಮುಚ್ಚಾಯಕ ಎಂಬರ್ಥವನ್ನು ವಿವಕ್ಷಿಸಿದರೂ ಹಿಂದೆ ಹೇಳಿದ 'ಅಸಂಭವಾತ್' ಮತ್ತು 'ಅಂತಪ್ರತಿಷ್ಠಾನಾತ್' ಮೊದಲಾದ ಹೇತುಗಳನ್ನು ಸಮುಚ್ಚಯ ಮಾಡಬೇಕು.

ಸೂತ್ರದಲ್ಲಿರುವ 'ಚ' ಶಬ್ದಕ್ಕೆ ಶ್ರೀಮದಾಚಾರ್ಯರು 'ಸಕಲವೇದತಂತ್ರಪುರಾಣಾದಿಷು ವಿಷ್ಣುಪರತ್ವಮ್ ಪುರುಷಸೂಕ್ತಸ್ಯ ದರ್ಶಯತಿ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಸಕಲವೇದ ಎಂದು ಹೇಳಿರುವುದರಿಂದ ಎಲ್ಲಾ ಬಗೆಯ ವೇದಗಳನ್ನು ವಿವಕ್ಷಿಸಬೇಕು. ಸಕಲತಂತ್ರ ಎಂಬುದರಿಂದ ಪಂಚರಾತ್ರಸಂಹಿತೆ, ಬೃಹತ್‌ಸಂಹಿತೆ ಮೊದಲಾದ ತಾತ್ವಿಕಾರ್ಥವನ್ನು ನೀಡುವ ಮೊದಲಾದ ತಾಮಸ ಪರವಾದ ತಂತ್ರಗಳನ್ನು ಹಾಗೂ ಸಕಲಪುರಾಣಾನಾಂ ಎಂಬ ಪದದಿಂದ ಸಾತ್ವಿಕಪುರಾಣವಷ್ಟೇ ಅಲ್ಲದೇ ರಾಜಸಪುರಾಣ ಹಾಗೂ ತಾಮಸಪುರಾಣಗಳನ್ನೂ ಕೂಡ ಸಂಗ್ರಹಿಸಬೇಕೆಂದು ತಿಳಿಸಿರುತ್ತಾರೆ. ಈ ಎಲ್ಲದರಲ್ಲಿಯೂ ಪುರುಷಸೂಕ್ತವು ವಿಷ್ಣುಪರವೆಂದೇ ಸಮರ್ಥಿಸಲಾಗಿದೆ.

ವೇದವನ್ನು ಬಿಟ್ಟು, ಪುರಾಣವನ್ನು ಮೊದಲು ಉಲ್ಲೇಖ ಮಾಡಿರುವುದರಿಂದ ಪುರಾಣಗಳ ಆಧಾರದಿಂದ ವೇದಗಳನ್ನು ವ್ಯಾಖ್ಯಾನಮಾಡಬೇಕೆಂಬ ಪ್ರಮೇಯವನ್ನೂ ಕೂಡ ಶ್ರೀಮದಾಚಾರ್ಯರು ತಿಳಿಸಿರುತ್ತಾರೆ. ಬ್ರಾಹ್ಮಪುರಾಣವು ರಾಜಸ ಅರ್ಥವನ್ನು ಅಥವಾ ತಾಮಸ ಅರ್ಥವನ್ನು ಹೆಚ್ಚಾಗಿ ಹೇಳುವುದರಿಂದ ಅದನ್ನೇ ಶ್ರೀಮದಾಚಾರ್ಯರು ಇಲ್ಲಿ ಉಲ್ಲೇಖ ಮಾಡಿರುತ್ತಾರೆ.

ಪ್ರಚಲಿತ ಪಾಠದಲ್ಲಿ 'ಅಂತಃ' ಎಂಬ ಶಬ್ದವು ಕೇಳಿಸುತ್ತಿಲ್ಲ. 'ಆದಿಃ' 'ಅನಾದಿಃ' ಎಂದು ಹೇಳಿದಂತೆ, 'ಅನಂತ', 'ಅಂತಃ' ಎಂಬೆರಡು ಪದಗಳನ್ನೂ ಕೂಡ ಸ್ಪಷ್ಟವಾಗಿ ತಿಳಿಯಬೇಕು.

## ವೈಶ್ವಾನರನ ಕಣ್ಣಿನ ಉಪಾಸನೆ

**तत्वप्रदीपः –**

**चक्षुस्तु विश्वरूपाख्यमादानादायुषामपि ।**
**आदित्याख्यं च सूर्यस्याप्याश्रयं सर्वदा स्मृतम् ।।**

ಅನುವಾದ -

...................... ಸರ್ವರೂಪಾತಿ ದರ್ಶನಾತ್ ।
ಚಕ್ಷುಸ್ತು ವಿಶ್ವರೂಪಾಖ್ಯಮಾದಾನಾತ್ ಆಯುಷಾಮಪಿ ।
ಆದಿತ್ಯಾಖ್ಯಂ ಚ ಸೂರ್ಯಸ್ಯಾಪ್ಯಾಶ್ರಯಂ ಸರ್ವದಾ ಸ್ಮೃತಮ್ ॥

ಪರಮಾತ್ಮನ ಕಣ್ಣು ಎಲ್ಲಾ ವಸ್ತುಗಳನ್ನೂ ವಿಶೇಷವಾಗಿ ನೋಡುತ್ತಿರುವುದರಿಂದಾಗಿ ವಿಶ್ವರೂಪ ಎಂದು ಹೆಸರುಳ್ಳದ್ದು. ಜನರ ಆಯುಷ್ಯವನ್ನು ತೆಗೆದುಕೊಳ್ಳುವುದರಿಂದಾಗಿ ಹಾಗೂ ಸೂರ್ಯನಿಗೆ ಆಶ್ರಯವಾಗಿರುವುದರಿಂದಾಗಿಯೂ ಆದಿತ್ಯನೆಂದೂ ಅದು ಕರೆಯಲ್ಪಡುತ್ತದೆ

ವಿಶೇಷವಿಚಾರ - ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ 'ಪ್ರಾಚೀನ ಯೋಗ್ಯ ! 'ಕಂ ತ್ವಮಾತ್ಮಾನಂ ಉಪಾಸ್ಸ' ಇತಿ । 'ಆದಿತ್ಯಮೇವ ಭಗವೋ ರಾಜನ್' ಇತಿ ಹೋವಾಚ । 'ಏಷ ವೈ ವಿಶ್ವರೂಪ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ । ತಸ್ಮಾತ್ ತವ ಬಹು ವಿಶ್ವರೂಪಂ ಕುಲೇ ದೃಶ್ಯತೇ । ಪ್ರವೃತ್ತೋಽಶ್ವತರೀರಥೋ ದಾಸೀ ನಿಷ್ಕಃ। ಅತ್ಸ್ಯನ್ನಂ। ಪಶ್ಯಸಿ ಪ್ರಿಯಂ। ಅತ್ಯನ್ನಂ, ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ, ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ । ಚಕ್ಷುಷ್ಟ್ವೇತದಾತ್ಮನ ಇತಿ ಹೋವಾ । 'ಅಂಧೋಭವಿಷ್ಯೋ ನನ್ಮಾಂ ನಾಗಮಿಷ್ಯ' ಇತಿ ॥

ರಾಜನು ಅನಂತರ ಪುಲುಷನ ಮಗನಾದ ಸತ್ಯಯಜ್ಞನನ್ನು 'ಅನಾದಿಯೋಗ್ಯತೆಯುಳ್ಳ ನೀನು ವೈಶ್ವಾನರನಾಮಕ ಪರಮಾತ್ಮನನ್ನು ಯಾವ ಹೆಸರಿನಿಂದ ಉಪಾಸನೆ ಗೈಯುತ್ತಿರುವಿ ?' ಎಂದು ಪ್ರಶ್ನಿಸಿದನು.

'ಪೂಜ್ಯನಾದ ರಾಜನೇ ! ಆದಿತ್ಯನಲ್ಲಿದ್ದು ಜನರ ಆಯುಷ್ಯವನ್ನು ತೆಗೆದುಕೊಳ್ಳುವ ಕಾರಣ ಆದಿತ್ಯ ಎಂಬ ಹೆಸರುಳ್ಳವನೆಂದು ವೈಶ್ವಾನರನನ್ನು ನಾನು ಆರಾಧಿಸುತ್ತಿರುವೆನು' ಎಂದು ಸತ್ಯಯಜ್ಞನು ಉತ್ತರಿಸಿದನು. ಆಗ ರಾಜನು 'ನೀನು ಆರಾಧಿಸುತ್ತಿರುವ ಆದಿತ್ಯನಾಮಕವಾದ ಈ ವೈಶ್ವಾನರನ ರೂಪವು ಎಲ್ಲವನ್ನೂ ನೋಡುತ್ತಿರುವುದರಿಂದಾಗಿ ವಿಶ್ವರೂಪ ಎಂಬ ಹೆಸರುಳ್ಳದ್ದು ಆಗಿದೆ. ಹೀಗೆ ವಿಶ್ವರೂಪನೆಂದು ಹೆಸರು ಇರುವ ವೈಶ್ವಾನರನ ಸ್ವರೂಪವನ್ನು ಉಪಾಸಿಸುತ್ತಿರುವ ಕಾರಣ ನಿನ್ನ ಮನೆಯಲ್ಲಿ ನಾನಾವಸ್ತುಗಳ ಅತಿ ದೊಡ್ಡ ಸಂಗ್ರಹವು ಕಂಡುಬರುತ್ತಿದೆ. 'ನಿನ್ನ ಮನೆಯಲ್ಲಿ ಅಶ್ವತರೀ ಎಂಬ ವಿಶಿಷ್ಟಜಾತಿಯ ಕುದುರೆಯಿಂದ ಯುಕ್ತವಾದ ರಥವು ಪ್ರಾಪ್ತವಾಗಿದೆ. ದಾಸೀ ಸಮೂಹ ಹಾಗೂ ಬಹಳ ಸಂಪತ್ತು ಒದಗಿ ಬಂದಿದೆ. ಯಥೇಷ್ಟ ಅನ್ನವನ್ನು ನೀನು ಭಕ್ಷಿಸುತ್ತಿರುವಿ, ಪ್ರಿಯವಾದುದನ್ನೇ ನೋಡುತ್ತಿರುವಿ.

ವೈಶ್ವಾನರನನ್ನು ಇದೇ ರೀತಿಯಾಗಿ ವಿಶ್ವರೂಪನೆಂದು ಯಾರು ಪೂಜಿಸುವನೋ ಅವನೂ ಯಥೇಷ್ಟ ಅನ್ನವನ್ನು ಭಕ್ಷಿಸುವನು. ಪ್ರಿಯವಾದುದನ್ನೇ ನೋಡುವನು. ಅವನ ಕುಲದಲ್ಲಿ ಬ್ರಹ್ಮವರ್ಚಸ್ಸು ಸಿದ್ಧಿಸುವುದು. ಆದರೆ ನೀನು ಆರಾಧಿಸುತ್ತಿರುವ ಈ ರೂಪವು ವೈಶ್ವಾನರನಾಮಕ ಪರಮಾತ್ಮನ ಕಣ್ಣುಮಾತ್ರವಾಗಿದೆ. ಇದನ್ನು ತಿಳಿಯಲು ನೀನು ನನ್ನ ಬಳಿಗೆ ಬರದಿರುತ್ತಿದ್ದರೆ, ವೈಶ್ವಾನರನ ಕಣ್ಣನ್ನು ಅರಿಯದಿದ್ದ ಅಪರಾಧದಿಂದ ನೀನು ಕುರುಡನಾಗುತ್ತಿದ್ದಿ' ಎಂದನು.

### ವೈಶ್ವಾನರನ ಪ್ರಾಣವಾಯುವಿನ ಉಪಾಸನೆ

**तत्वप्रदीपः –**

**वाय्वादिप्राणशक्यं न यत्तत्कर्ता हरेर्यतः ।**
**प्राणस्तेन पृथग्वर्त्मा वायुर्ज्ञानायुरूपतः ॥**

ಅನುವಾದ -

ವಾಯ್ವಾದಿಪ್ರಾಣಶಕ್ಯಂ ನ ಯತ್ ತತ್ಕರ್ತಾ ಹರೇರ್ಯತಃ ।
ಪ್ರಾಣಸ್ತೇನ ಪೃಥಗ್ವರ್ತ್ಮಾ ವಾಯುರ್ಜ್ಞಾನಾಯುರೂಪತಃ ।

ವಾಯು ಮೊದಲಾದ ಪ್ರಾಣರಿಂದ ಯಾವುದು ಅಸಾಧ್ಯವೋ ಅಂತಹ ಕಾರ್ಯವನ್ನು ಸಾಧಿಸುವುದರಿಂದ ಹರಿಯ ಪ್ರಾಣವು ಪೃಥಗ್ವರ್ತ್ಮಾ ಎಂಬ ಹೆಸರುಳ್ಳದ್ದಾಗಿದೆ. ಜ್ಞಾನರೂಪಿಯಾಗಿದ್ದು ಆಯುಸ್ಸನ್ನು ಅನುಗ್ರಹಿಸುವುದರಿಂದ ಹಾಗೂ ವಾಯುವಿಗೆ ಆಶ್ರಯವಾಗಿರುವುದರಿಂದ ಅದಕ್ಕೆ ವಾಯು ಎಂಬ ಹೆಸರೂ ಇದೆ.

ವಿಶೇಷವಿಚಾರ - ಅಥ ಹೋವಾಚೇಂದ್ರದ್ಯುಮ್ನಂ ಭಾಲ್ಲವೇಯಂ 'ವೈಯಾಘ್ರ ಪದ್ಯ ಕಂ ತ್ವಮಾತ್ಮಾನಮುಪಾಸ್ಸೆ' ಇತಿ । 'ವಾಯುದೇವ ಭಗವೋ ರಾಜನ್' ಇತಿ ಹೋವಾಚ। 'ಏಷ ವೈ ಪೃಥಗ್ವರ್ತ್ಮಾತ್ಮಾ ವೈಶ್ವಾನರೋ ಯಂ ತ್ವಮಾತ್ಮನಮುಪಾಸ್ಸೇ । ತಸ್ಮಾತ್ ತ್ವಾ ಪೃಥಗ್ವಲಯ ಆಯಂತಿ ಪೃಥಗ್ ರಥಶ್ರೇಣಯೋಽನುಯಂತಿ । ಅತ್ಸ್ಯನ್ನಂ । ಪಶ್ಯಸಿ ಪ್ರಿಯಮ್ । ಅತ್ಯನ್ನಂ, ಪಶ್ಯತಿ ಪ್ರಿಯಂ, ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ, ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ । ಪ್ರಾಣಸ್ತ್ವೇಷ ಆತ್ಮನ' ಇತಿ ಹೋವಾಚ । 'ಪ್ರಾಣಸ್ತ ಉದಕ್ರಮಿಷ್ಯತ್ ಯನ್ಮಾಂ ನಾಗಮಿಷ್ಯ' ಇತಿ ॥

ಭಲ್ಲವಿ ಎಂಬುವನ ಮಗನಾದ ಇಂದ್ರದ್ಯುಮ್ನನನ್ನು ರಾಜನು 'ವ್ಯಾಘ್ರಪಾದನ ಗೋತ್ರದವನೇ, ನೀನು ಸ್ವಾಮಿಯಾದ ವೈಶ್ವಾನರನನ್ನು ಯಾವ ಹೆಸರಿನಿಂದ ಆರಾಧಿಸುತ್ತಿರುವಿ?' ಎಂದು ಕೇಳಿದನು. ಇದಕ್ಕೆ ಉತ್ತರವಾಗಿ ಇಂದ್ರದ್ಯುಮ್ನನು 'ಪೂಜ್ಯನಾದ ರಾಜನೇ ! ವಾಯುವಿಗೆ ಆಶ್ರಯನಾಗಿದ್ದು, ಜ್ಞಾನರೂಪಿಯೂ, ಆಯುಸ್ಸನ್ನು ಅನುಗ್ರಹಿಸುವವನೂ ಆಗಿರುವುದರಿಂದ ವಾಯು ಎಂಬ ಹೆಸರುಳ್ಳವನೆಂದು ವೈಶ್ವಾನರನನ್ನು ನಾನು ಉಪಾಸಿಸುತ್ತಿರುವೆನು' ಎಂದನು. ಆಗ ರಾಜನು 'ನೀನು ಆರಾಧಿಸುತ್ತಿರುವ ರೂಪವು ಪ್ರಾಣಾದಿಗಳಿಂದ ಸಾಧಿಸಲು ಅಶಕ್ಯವಾದ ಕಾರ್ಯವನ್ನು ನಿರ್ವಹಿಸುವುದರಿಂದ ಪೃಥಗ್ವರ್ತ್ಮಾ ಎಂಬ ಹೆಸರುಳ್ಳದ್ದೂ ಆಗಿದೆ. ಹೀಗೆ ನೀನು ಪೃಥಗ್ವರ್ತ್ಮ ಎಂಬ ಹೆಸರುಳ್ಳ ವೈಶ್ವಾನರ ರೂಪವನ್ನು ಆರಾಧಿಸುತ್ತಿರುವ ಕಾರಣ ನಿನಗೆ ವಿಲಕ್ಷಣವಾದ ಪೂಜಾ ಸಾಧನ ಸಾಮಗ್ರಿಗಳು ಲಭಿಸುತ್ತಿವೆ. ವಿಲಕ್ಷಣಗಳಾದ ರಥಗಳ ಶ್ರೇಣಿಯೇ ನಿನ್ನನ್ನು ಅನುಸರಿಸುತ್ತಿದೆ. ಇಂತಹ ಸೌಭಾಗ್ಯಶಾಲಿ ನೀನಾಗಿರುವಿ. 'ಯಥೇಷ್ಟ ಅನ್ನವನ್ನು ನೀನು ಸೇವಿಸುತ್ತಿರುವಿ. ಪ್ರಿಯವಾದುದನ್ನೇ ನೋಡುತ್ತಿರುವಿ. ನಿನ್ನಂತೆ ಯಾರು ಈ ರೂಪವನ್ನು ಆರಾಧಿಸುವನೋ ಅವನೂ ಯಥೇಷ್ಟ ಅನ್ನವನ್ನು ಉಣ್ಣುತ್ತಾನೆ. ಪ್ರಿಯವಾದುದನ್ನೇ ನೋಡುತ್ತಾನೆ. ಅವನ ವಂಶದಲ್ಲಿ ಬ್ರಹ್ಮವರ್ಚಸ್ಸು ಫಲಿಸುವುದು. ಆದರೆ ನೀನು ಆರಾಧಿಸುತ್ತಿರುವ ಈ ರೂಪವು ವೈಶ್ವಾನರನಾಮಕ ಪರಮಾತ್ಮನ ಪ್ರಾಣವಾಯು ಮಾತ್ರವಾಗಿದೆ. ಇದನ್ನು ಅರಿಯಲು ನೀನು ನನ್ನಲ್ಲಿಗೆ ಬರದೇ ಇರುತ್ತಿದ್ದರೆ, ವೈಶ್ವಾನರನ ಪ್ರಾಣವಾಯುವಿನ ಪರಿಜ್ಞಾನವಿಲ್ಲದೆ ಉಪಾಸನೆಗೈಯುತ್ತಿರುವ ಕಾರಣದಿಂದ, ನಿನ್ನ ಪ್ರಾಣವು ನಿನ್ನಿಂದ ದೂರವಾಗುತ್ತಿತ್ತು ಎಂದು ಹೇಳಿದನು.

### ವೈಶ್ವಾನರ ಮಧ್ಯದೇಹದ ಉಪಾಸನೆ

**तत्वप्रदीपः –**

**वायोरप्याश्रयो नित्यं बहुत्वाद् बहुलः स्मृतः ।**
**आकाशनामा चाऽदीप्ते(त्वाऽदीप्ते – पा) र्मध्यदेहो रमापतेः ॥**

ಅನುವಾದ -

ವಾಯೋರಪ್ಯಾಶ್ರಯೋ ನಿತ್ಯಂ ಬಹುತ್ವಾತ್ ಬಹುಲಃ ಸ್ಮೃತಃ ।
ಆಕಾಶನಾಮಾ ಚಾದೀಪ್ತೇರ್ಮಧ್ಯದೇಹೋ ರಮಾಪತೇಃ ।

ರಮಾಪತಿಯಾದ ಪರಮಾತ್ಮನ ಮಧ್ಯದೇಹವು ಅತಿ ವಿಸ್ತಾರವಾಗಿರುವ ಕಾರಣ ಬಹುಲ ಎಂದೂ ಚೆನ್ನಾಗಿ ಪ್ರಕಾಶಿಸುವ ಕಾರಣ ಆಕಾಶ ಎಂದೂ ಪ್ರಸಿದ್ಧವಾಗಿದೆ ॥

ವಿಶೇಷ ವಿಚಾರ - ಅಥ ಹೋವಾಚ ಜನಂ ಶಾರ್ಕರಾಕ್ಷ್ಯಂ 'ಶಾರ್ಕರಾಕ್ಷ್ಯ, ಕಂ ತ್ವಮಾತ್ಮಾನಮುಪಾಸ್ಸ' ಇತಿ । 'ಆಕಾಶಮೇವ ಭಗವೋ ರಾಜನ್' ಇತಿ ಹೋವಾಚ । 'ಏಷ ವೈ ಬಹುಲ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ। ತಸ್ಮಾತ್ ತ್ವಂ ಬಹುಲೋಽಸಿ ಪ್ರಜಯಾ ಚ ಧನೇನ ಚ । ಅತ್ಸ್ಯನ್ನಂ । ಪಶ್ಯಸಿ ಪ್ರಿಯಮ್ । ಅತ್ತ್ಯನ್ನಂ, ಪಶ್ಯತಿ ಪ್ರಿಯಂ, ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ, ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ । ಸಂದೋಹಸ್ತ್ವೇಷ ಆತ್ಮನ' ಇತಿ ಹೋವಾಚ । 'ಸಂದೋಹಸ್ತೇ ವ್ಯಶೀರ್ಯತ್ ಯನ್ಮಾಂ ನಾಗಮಿಷ್ಯ' ಇತಿ ॥

ಆ ಮೇಲೆ ರಾಜನು ಶರ್ಕರಾಕ್ಷನ ಮಗನಾದ ಜನ ಎಂಬುವನನ್ನು 'ಶಾರ್ಕರಾಕ್ಷ್ಯನೇ, ನೀನು ವೈಶ್ವಾನರನನ್ನು ಯಾವ ಹೆಸರಿನಿಂದ ಆರಾಧಿಸುತ್ತಿರುವಿ ?' ಎಂದು ಪ್ರಶ್ನಿಸಿದನು. ಆಗ ಜನನು 'ಪೂಜ್ಯನಾದ ರಾಜನೇ ! ಆಕಾಶಕ್ಕೆ ಆಶ್ರಯನಾಗಿದ್ದು, ಸರ್ವತ್ರ ಚೆನ್ನಾಗಿ ಪ್ರಕಾಶಿಸುತ್ತಿರುವುದರಿಂದ, ಆಕಾಶ ಎಂಬ ಹೆಸರುಳ್ಳವನೆಂದು ವೈಶ್ವಾನರನನ್ನು ನಾನು ಆರಾಧಿಸುತ್ತಿರುವೆನು' ಎಂದುತ್ತರಿಸಿದನು. ಆಗ ರಾಜನು 'ನಿನ್ನಿಂದ ಆರಾಧಿಸಲ್ಪಡುತ್ತಿರುವ ಆಕಾಶನಾಮಕವಾದ ಈ ವೈಶ್ವಾನರ ರೂಪವು ಅತಿವಿಸ್ತಾರವಾಗಿರುವುದರಿಂದ ಬಹುಲ ಎಂಬ ಹೆಸರುಳ್ಳದ್ದೂ ಆಗಿದೆ. ಹೀಗೆ ಪರಮಾತ್ಮನ ಬಹುಲನಾಮಕ ರೂಪವನ್ನು ಆರಾಧಿಸುತ್ತಿರುವ ಕಾರಣ ನೀನು ಸಂತತಿ ಹಾಗೂ ಸಂಪತ್ತು ಇವುಗಳಿಂದ ಸಮೃದ್ಧನಾಗಿರುವಿ. ಯಥೇಷ್ಟ ಅನ್ನವನ್ನು ಭಕ್ಷಿಸುತ್ತಿರುವಿ. ಪ್ರಿಯವಾದುದನ್ನೇ ನೋಡುತ್ತಿರುವಿ. ಯಾರು ನಿನ್ನಂತೆ ವೈಶ್ವಾನರರೂಪವನ್ನು ಪೂಜಿಸುವನೋ ಅವನೂ ಕೂಡ ಯಥೇಷ್ಟ ಅನ್ನವನ್ನು ಭಕ್ಷಿಸುವನು. ಪ್ರಿಯವಾದುದನ್ನೇ ನೋಡುವನು. ಅವನ ಕುಲದಲ್ಲಿ ಬ್ರಹ್ಮವರ್ಚಸ್ಸು ಫಲಿಸುವುದು. ಆದರೆ ನೀನು ಆರಾಧಿಸುತ್ತಿರುವ ರೂಪವು ವೈಶ್ವಾನರನಾಮಕ ಪರಮಾತ್ಮನ ಮಧ್ಯದೇಹವಷ್ಟೇ ಆಗಿದೆ. ಇದನ್ನರಿಯಲು ನೀನು ನನ್ನಲ್ಲಿಗೆ ಬರದೇ ಇರುತ್ತಿದ್ದರೆ, ವೈಶ್ವಾನರನ ಮಧ್ಯದೇಹವನ್ನರಿಯದೆ ಉಪಾಸನೆಗೈದುದರ ಅಪರಾಧದಿಂದ ನಿನ್ನ ಮಧ್ಯದೇಹವು ಚೂರು ಚೂರಾಗುತ್ತಿತ್ತು' ಎಂದನು.

## ವೈಶ್ವಾನರನ ಕಟಿಪ್ರದೇಶದ ಉಪಾಸನೆ

**तत्वप्रदीपः –**

**व्याप्तत्वादाप इत्युक्तो रै रतिकरत्वतः ।**
**वस्तिराकाशवाय्वोश्च तावाधारौ प्रकीर्तितौ ।।**

ಅನುವಾದ -

ವಾಪ್ತತ್ವಾತ್ ಆಪ ಇತ್ಯುಕ್ತೋ ರಯೀ ರತಿಕರತ್ವತಃ ।
ವಸ್ತಿರಾಕಾಶವಾಯ್ವೋಶ್ಚ ತಾವಾಧಾರೌ ಪ್ರಕೀರ್ತಿತೌ ॥

ಪರಮಾತ್ಮನ ಕಟಿಪ್ರದೇಶವು ವ್ಯಾಪ್ತವಾಗಿರುವುದರಿಂದಾಗಿ 'ಅಪ್' ಎಂದು ಪ್ರಸಿದ್ಧವಾಗಿದೆ. ಸಂತೋಷಜನಕವಾದುದರಿಂದ ಅದಕ್ಕೆ 'ರಯಿ' ಎಂಬ ಹೆಸರೂ ಇದೆ. ಪರಮಾತ್ಮನ ಮಧ್ಯದೇಹವು ಆಕಾಶವೆನಿಸಲು, ಆಕಾಶಕ್ಕೆ ಅದು ಆಶ್ರಯವಾಗಿರುವುದೂ ಕಾರಣವಾಗಿದೆ. ಹಾಗೆಯೇ ಕಟಿ ಪ್ರದೇಶವು ಅಪ್ ಎನಿಸಲು ಅದು ನೀರಿಗೆ ಆಶ್ರಯವಾಗಿರುವುದೂ ಕಾರಣವಾಗಿದೆ.

ವಿಶೇಷವಿಚಾರ - ಅಥ ಹೋವಾಚ ಬುಡಿಲಮಾಶ್ವತರಾಶ್ವಿಂ 'ವೈಯಾಘ್ರಪದ್ಯ, ಕಂ ತ್ವಮಾತ್ಮಾನಮುಪಾಸ್ಸ' ಇತಿ । 'ಅಪ ಏವ ಭಗವೋ ರಾಜನ್' ಇತಿ ಹೋವಾಚ । 'ಏಷ ವೈ ರಯಿರಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ । ತಸ್ಮಾತ್ ತ್ವಂ ರಯಿಮಾನ್ ಪುಷ್ಟಿ ಮಾನಸಿ । ಅತ್ಸ್ಯನ್ನಂ । ಪಶ್ಯಸಿ ಪ್ರಿಯಮ್ । ಅತ್ತ್ಯನ್ನಂ, ಪಶ್ಯತಿ ಪ್ರಿಯಂ, ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ, ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ । ವಸ್ತಿಸ್ತ್ವೇಷ ಆತ್ಮನ' ಇತಿ ಹೋವಾಚ । 'ವಸ್ತಿಸ್ತೇವ್ಯಭೇತ್ಸ್ಯತ್ ಯನ್ಮಾಂ ನಾಗಮಿಷ್ಯ' ಇತಿ ॥

ಅನಂತರ ರಾಜನು ಅಶ್ವತರಾಶ್ವನ ಮಗನಾದ ಬುಡಿಲನನ್ನು 'ವ್ಯಾಘ್ರಪಾದನ ಗೋತ್ರದವನೇ, ವೈಶ್ವಾನರ ನಾಮಕನಾದ ಪರಮಾತ್ಮನನ್ನು ಯಾವ ಹೆಸರಿನಿಂದ ನೀನು ಪೂಜಿಸುತ್ತಿರುವೆ ?' ಎಂದು ಕೇಳಿದನು. ಆಗ ಬುಡಿಲು 'ಪೂಜ್ಯನಾದ ರಾಜನೆ ! ನೀರಿನಲ್ಲಿರುವುದರಿಂದಾಗಿಯೂ, ಎಲ್ಲ ಕಡೆ ವ್ಯಾಪಿಸಿರುವುದರಿಂದಾಗಿಯೂ, ಅಪ್ ಎಂದು ಕರೆಸಿಕೊಳ್ಳುತ್ತಿರುವವನೆಂದು ವೈಶ್ವಾನರನನ್ನು ನಾನು ಪೂಜಸುತ್ತಿರುವೆನು' ಎಂದುತ್ತರಿಸಿದನು.

ಆಗ ರಾಜನು 'ನೀನು ಪೂಜಿಸುತ್ತಿರುವ ಈ ರೂಪವು ಸಂತೋಷವನ್ನುಂಟುಮಾಡುವ ಕಾರಣ 'ರಯಿ' ಎಂಬ ಹೆಸರುಳ್ಳದ್ದೂ ಆಗಿದೆ. ಹೀಗೆ 'ರಯಿ' ಎಂದು ಕರೆಸಿಕೊಳ್ಳುತ್ತಿರುವ ಪರಮಾತ್ಮನ ರೂಪವನ್ನು ಪೂಜಿಸುತ್ತಿರುವುದರಿಂದ ನೀನು ಸಂಪತ್ತುಳ್ಳವನೂ, ದಷ್ಟಪುಷ್ಟನೂ ಆಗಿರುವಿ. ಯಥೇಷ್ಟ ಅನ್ನವನ್ನು ಸೇವಿಸುತ್ತಿರುವಿ. ಪ್ರಿಯವಾದುದನ್ನೇ ನೋಡುತ್ತಿರುವಿ. ನಿನ್ನಂತೆ ಯಾರು ಅಪ್ ಹಾಗೂ ರಯಿ ಎಂಬ ಹೆಸರಿರುವ ವೈಶ್ವಾನರನ ಸ್ವರೂಪವನ್ನು ಪೂಜಿಸುವನೋ ಅವನೂ ಯಥೇಷ್ಟ ಅನ್ನವನ್ನು ಸೇವಿಸುವನು, ಪ್ರಿಯವಾದುದನ್ನೇ ನೋಡುವನು. ಅವನ ಕುಲದಲ್ಲಿ ಬ್ರಹ್ಮವರ್ಚಸ್ಸು ಫಲಿಸುವುದು. ಆದರೆ ನೀನು ಉಪಾಸಿಸುತ್ತಿರುವ ರೂಪವ್ವೆ ವೈಶ್ವಾನರನಾಮಕ ಪರಮಾತ್ಮನ ಕಟಿ ಪ್ರದೇಶವಷ್ಟೇ ಆಗಿದೆ. ಇದನ್ನರಿಯಲು ನೀನು ನನ್ನಲ್ಲಿಗೆ ಬರದೇ ಇರುತ್ತಿದ್ದರೆ, ವೈಶ್ವಾನರನಾಮಕ ಪರಮಾತ್ಮನ ಕಟಪ್ರದೇಶನ್ನರಿಯದೆ ಉಪಾಸನೆ ಗೈದುದರ ತಪ್ಪಿಗಾಗಿ ನಿನ್ನ ಕಟಪ್ರದೇಶವು ಮುರಿದು ಹೋಗುತ್ತಿತ್ತು' ಎಂದನು.

### ವೈಶ್ವಾನರನ ಪಾದಗಳ ಉಪಾಸನೆ

**तत्वप्रदीपः –**

**प्रथनात् पृथिवीनामा प्रतिष्ठा च प्रतिष्ठितेः ।**
**पादौ भगवतो विष्णोः पृथिव्याश्रय एव च ॥**

**इत्याद्यायां वैश्वानरविद्यायां विभिद्य निवेद्यते ।**

ಪ್ರಥನಾತ್ ಪೃಥಿವೀನಾಮಾ ಪ್ರತಿಷ್ಠಾ ಚ ಪ್ರತಿಷ್ಠಿತೇಃ ।
ಪಾದೌ ಭಗವತೋ ವಿಷ್ಣೋಃ ಪೃಥಿವ್ಯಾಶ್ರಯ ಏವ ಚ ॥

ಪರಿಪೂರ್ಣ ಅನಂತಗುಣಗಳಿರುವುದರಿಂದಾಗಿಯೂ, ಪೃಥಿವಿಗೆ ಆಶ್ರಯವಾಗಿರುವುದರಿಂದಾಗಿಯೂ ಪರಮಾತ್ಮನ ಪಾದಗಳು ಪೃಥಿವೀ ಎಂದು ಕರೆಸಿಕೊಳ್ಳುತ್ತಿವೆ. ಎಲ್ಲರ ಸುಸ್ಥಿತಿಗೆ ಕಾರಣವಾಗಿರುವುದರಿಂದಾಗಿ ಪ್ರತಿಷ್ಠಾ ಎಂದೂ ಅವುಗಳಿಗೆ ಹೆಸರಿದೆ.

ವಿಶೇಷವಿಚಾರ - ಅಥ ಹೋವಾಚೋದ್ದಾಲಕಮಾರುಣಂ 'ಗೌತಮ ! ಕಂ ತ್ವಮಾತ್ಮಾನಮುಪಾಸ್ಸ' ಇತಿ । 'ಪೃಥಿವೀಮೇವ ಭಗವೋ ರಾಜನ್' ಇತಿ ಹೋವಾಚ । 'ಏಷ ವೈ ಪ್ರತಿಷ್ಠಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ । ತಸ್ಮಾತ್ ತ್ವಂ ಪ್ರತಿಷ್ಠಿತೋಽಸಿ

ಪ್ರಜಯಾ ಚ ಪಶುಭಿಶ್ಚ । ಅತ್ಸ್ಯನ್ನಮ್ । ಪಶ್ಯಸಿ ಪ್ರಿಯಮ್ । ಅತ್ತ್ಯನ್ನಂ, ಪಶ್ಯತಿ ಪ್ರಿಯಂ, ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ, ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ । ಪಾದೌ ಶ್ವೇತಾವಾತ್ಮನ' ಇತಿ ಹೋವಾಚ । 'ಪಾದೌ ತೇ ವ್ಯಮ್ಲಾಸ್ಯೇತಾಂ ಯನ್ಮಾಂ ನಾಗಮಿಷ್ಯ' ಇತಿ ॥

ಆಮೇಲೆ ರಾಜನು ಅರುಣನ ಮಗನಾದ ಉದ್ದಾಲಕನನ್ನು 'ಗೌತಮನೇ ! ವೈಶ್ವಾನರ ನಾಮಕ ಪರಮಾತ್ಮನನ್ನು ನೀನು ಯಾವ ಹೆಸರಿನಿಂದ ಆರಾಧಿಸುತ್ತಿರುವಿ ?' ಎಂದು ಪ್ರಶ್ನಿಸಿದನು. ಆಗ ಉದ್ದಾಲಕನು 'ಪೂಜ್ಯನಾದ ರಾಜನೇ ! ಪೃಥಿವಿಗೆ ಆಧಾರನಾಗಿದ್ದು ಪರಿಪೂರ್ಣವಾದ ಅನಂತಗುಣಗಳಿರುವುದರಿಂದ ಪೃಥಿವೀ ಎಂದು ಕರೆಸಿಕೊಳ್ಳುತ್ತಿರುವವನೆಂದು ವೈಶ್ವಾನರನನ್ನು ನಾನು ಆರಾಧಿಸುತ್ತಿರುವೆನು' ಎಂದುತ್ತರಿಸಿದನು. ಆಗ ರಾಜನು 'ನೀನು ಆರಾಧಿಸುತ್ತಿರುವ ಪೃಥಿವೀನಾಮಕವಾದ ವೈಶ್ವಾನರ ರೂಪವು ಎಲ್ಲರ ಸ್ಥಿತಿಗೂ ಕಾರಣವಾಗಿರುವುದರಿಂದ ಪ್ರತಿಷ್ಠಾ ಎಂಬ ಹೆಸರುಳ್ಳದ್ದೂ ಆಗಿದೆ. ಹೀಗೆ ಪ್ರತಿಷ್ಠಾನಾಮಕವಾದ ರೂಪವನ್ನು ಆರಾಧಿ-ಸುತ್ತಿರುವುದರಿಂದ ನೀನು ಸಂತತಿ ಹಾಗೂ ಪಶುಗಳಿಂದ ಸುಸ್ಥಿತನಾಗಿರುವಿ. ಯಥೇಷ್ಟ ಅನ್ನವನ್ನು ಭಕ್ಷಿಸುತ್ತಿರುವಿ, ಪ್ರಿಯವಾದುದನ್ನೇ ನೋಡುತ್ತಿರುವಿ. ನಿನ್ನಂತೆ ಯಾರು ಪ್ರತಿಷ್ಠಾನಾಮಕ ವೈಶ್ವಾನರ ರೂಪವನ್ನು ಆರಾಧಿಸುತ್ತಾನೋ ಅವನೂ ಯಥೇಷ್ಟ ಅನ್ನವನ್ನು ಭಕ್ಷಿಸುವನು, ಪ್ರಿಯವಾದುದನ್ನೇ ನೋಡುವನು. ಅವನ ಕುಲವು ಬ್ರಹ್ಮವರ್ಚಸ್ಸುಳ್ಳದ್ದಾಗುತ್ತದೆ. ಆದರೆ ನೀನು ಆರಾಧಿಸುತ್ತಿರುವ ಈ ರೂಪವು ವೈಶ್ವಾನರ ನಾಮಕ ಪರಮಾತ್ಮನ ಪಾದಗಳಷ್ಟೇ ಆಗಿದೆ. ಇದನ್ನರಿಯಲು ನೀನು ನನ್ನಲ್ಲಿಗೆ ಬರದೇ ಇರುತ್ತಿದ್ದರೆ, ವೈಶ್ವಾನರನ ಪಾದಗಳನ್ನು ತಿಳಿಯದೆ ಇದ್ದ ಅಪರಾಧದಿಂದ ನಿನ್ನ ಪಾದಗಳು ಮುರಿದು ಹೋಗುತ್ತಿದ್ದವು' ಎಂದನು.

### 'ಯಸ್ಮಾದಂಗಾತ್' ಇತ್ಯಾದಿ ಭಾಷ್ಯವ್ಯಾಖ್ಯಾನ

**तत्वप्रदीपः – यस्मादङ्गाद्यजायते यदाश्रित्य तिष्ठति च यत्र लीयते च तद्धरेरङ्गं तन्नामवाच्यम् । यथा 'ब्राह्मणोऽस्य मुखमासीत्' इत्यादौ ब्राह्मणादिजनकानि (जातिजनकानि–पा) हरेर्मुखादीनि ब्राह्मणादिनामान्युच्यन्त एवमितरत्रापीति । अतो न भगवदङ्गेभ्यश्विदिवदिनकरादीनां भिन्नानां तदभेदोक्तिनिमित्तो विरोध आशङ्कनीयः । उक्तभङ्ग्या तदभावात् ।।छ।।**

'ಯಸ್ಮಾದಂಗಾದ್ಯಜ್ಜಾಯತೇ' ಎಂಬ ಭಾಷ್ಯದಲ್ಲಿ ಉದಾಹರಿಸಿದ ನಾರದೀಯ ವಚನದ ವ್ಯಾಖ್ಯಾನ ಹೀಗಿದೆ - ಯಸ್ಮಾತ್ = ಯಾವ ಪರಮಾತ್ಮನ, ಅಂಗಾತ್ = ಅಂಗದಿಂದ, ಯತ್ = ಯಾವ ದೇವತೆಯು ಅಥವಾ ಯಾವ ಲೋಕವು, ಜಾಯತೇ = ಹುಟ್ಟುತ್ತದೋ, ಚ = ಯಾರನ್ನು ಆಶ್ರಯಿಸಿ ಸ್ಥಿತಿಯನ್ನು ಹೊಂದುತ್ತದೋ, ಮತ್ತು ಯಾರಲ್ಲಿ ಲಯವನ್ನು ಹೊಂದುತ್ತದೋ, ತತ್ = ಆ, ಹರೇಃ = ಶ್ರೀಹರಿಯ, ಅಂಗಮ್ = ಅಂಗವು, ತತ್ = ಆ ಲೋಕದ ಅಥವಾ ಆ ದೇವತೆಯ, ನಾಮ = ಹೆಸರಿನಿಂದ, ವಾಚ್ಯಮ್= ಪ್ರತಿಪಾದ್ಯವಾಗುತ್ತದೆ. ಯಥಾ = ಯಾವರೀತಿಯಾಗಿ, ಬ್ರಹ್ಮಾದಿಕಂ = 'ಬ್ರಾಹ್ಮಣೋಽಸ್ಯ ಮುಖಮಾಸೀತ್' ಬ್ರಾಹ್ಮಣನು ವಿಷ್ಣುವಿನ ಮುಖ ಇತ್ಯಾದಿಯಾಗಿ ಬ್ರಾಹ್ಮಣಜಾತಿಗೆ ಜನಕವಾದ ಶ್ರೀಹರಿಯ ಹೆಸರಿನಿಂದ ಕರೆಸಿಕೊಳ್ಳುತ್ತದೋ, ಅದರಂತೆ ಬೇರೆಡೆಯೂ ತಿಳಿಯಬೇಕು. ಆದ್ದರಿಂದ ಭಗವಂತನ ಅಂಗಗಳಿಗಿಂತ ಸ್ವರ್ಗ ಮೊದಲಾದ ಲೋಕಗಳು ದಿನಕರ ಮೊದಲಾದ ದೇವತೆಗಳು ಭಿನ್ನರೇ ಆಗಿದ್ದಾರೆ. ಆದರೂ ಭಗವಂತನ ಅಂಗಗಳ ದೆಸೆಯಿಂದ ಅಭೇದವನ್ನು ಹೇಳಿದ್ದಕ್ಕೆ ವಿರೋಧವನ್ನು ಆಶಂಕಿಸಬಾರದು. ಪರಮಾತ್ಮನ ಅಂಗವನ್ನು ಆಶ್ರಯಿಸಿ ಸೃಷ್ಟ್ಯಾದಿಗಳನ್ನು ಹೊಂದಿರುವ ಕಾರಣದಿಂದ ಹಾಗೇ ಅಭೇದವನ್ನು ಶಾಸ್ತ್ರದಲ್ಲಿ ಹೇಳಲಾಗುತ್ತದೆ.

ಪಾಠಾಂತರದ ಬಗ್ಗೆ - 'ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ ಇತ್ಯಾದಿ' ಎಂಬುದಾಗಿ ಪ್ರಚಲಿತ ಪಾಠ. 'ಇತ್ಯಾದಿ' ಎಂಬ ಪದದ ಬದಲು 'ಇತಿ' ಎಂದಷ್ಟೇ ಸಾಕು. ಪ್ರಾಚೀನ ಕೋಶಗಳಲ್ಲಿ 'ಇತಿ' ಎಂದಷ್ಟೇ ಕಾಣಸುತ್ತದೆ. 'ಇತ್ಯಾದಿ' ಎಂಬ ಪ್ರಚಲಿತಪಾಠವು ಕಾಣಿಸುವುದಿಲ್ಲ.

'ಯಸ್ಮಾದ್ ಯಜ್ಜಾಯತೇ ಚಾಂಗಾತ್ ಲೋಕವೇದಾದಿಕಂ ಹರೇಃ' ಎಂಬುದು ಪ್ರಚಲಿತ ಪಾಠ. 'ಯಸ್ಮಾದ್ ಯಜ್ಜಾಯತೇ ಚಾಂಗಾತ್ ಲೋಕದೇವಾದಿಕಂ ಹರೇಃ' ಎಂಬುದು ಪ್ರಾಚೀನ ಪಾಠ. 'ಲೋಕವೇದಾದಿಕಂ ಹರೇಃ' ಎಂಬ ಪ್ರಚಲಿತಪಾಠವು ಕೇವಲ ಮುದ್ರಣದೋಷದಿಂದ ಪ್ರಸಿದ್ಧವಾಗಿದೆ. ಇದು ಸರಿಯಾದ ಪಾಠವಲ್ಲ. ಏಕೆಂದರೆ ತತ್ತ್ವಪ್ರದೀಪದಲ್ಲಿ ಸ್ಪಷ್ಟವಾಗಿ ಪಂಡಿತಾಚಾರ್ಯರು 'ಭಗವದಂಗೇಭ್ಯಸ್ತ್ರಿದಿವ-ದಿನಕರಾದೀನಾಂ ಭಿನ್ನಾನಾಂ' ಎಂಬುದಾಗಿ ಲೋಕಪದಕ್ಕೆ 'ತ್ರಿದಿವ' ಎಂಬುದಾಗಿ, 'ದೇವ' ಎಂಬ ಪದಕ್ಕೆ 'ದಿನಕರ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಮತ್ತು ಅಪೌರುಷೇಯವಾದ ವೇದಗಳು ಭಗವಂತನ ಅಂಗದಿಂದ ಹುಟ್ಟಲು ಸಾಧ್ಯವೇ ಇಲ್ಲ. ಆದ್ದರಿಂದ 'ಲೋಕದೇವಾದಿಕಂ ಹರೇಃ' ಎಂಬ ಪ್ರಾಚೀನಪಾಠವೇ ಸಮಂಜಸವಾದದ್ದು.

## ತತ್ವಪ್ರಕಾಶಿಕಾ

‘ಶಬ್ದಾದಿಭ್ಯೋಽಂತಃಪ್ರತಿಷ್ಠಾನಾತ್’ ಎಂಬ ಆಕ್ಷೇಪ ಭಾಗದ ವ್ಯಾಖ್ಯಾನ

**तत्वप्रकाशिका – शब्दादिभ्योऽन्तःप्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते ।। १-२-२६ ।।**

**वैश्वानरस्य विष्णुत्वमाक्षिप्य समादधत्सूत्रमुपन्यस्याऽक्षेपांशं तावद् व्याचष्टे – शब्दादिभ्य इति ।।**

ವೈಶ್ವಾನರನು ವಿಷ್ಣುವೇ ಆಗಿದ್ದಾನೆಂಬ ವಿಷಯವನ್ನು ಆಕ್ಷೇಪಿಸಿ ಸಮಾಧಾನವನ್ನು ಮಾಡುವ ಸೂತ್ರವನ್ನು ಪಠಿಸಿ ಸೂತ್ರದಲ್ಲಿರುವ ಆಕ್ಷೇಪಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ ''ಶಬ್ದಾದಿಭ್ಯಃ'' ಇತ್ಯಾದಿಯಾಗಿ.

ಅಗ್ನಿಯು ಏಕೆ ವೈಶ್ವಾನರನಲ್ಲ ?

**तत्वप्रकाशिका – यदुक्तमात्मशब्दविशेषणात् समाख्यानाच्च वैश्वानरस्य विष्णुत्वनिश्चय इति तदयुक्तम् । यथा खलु वैश्वानरस्य विष्णुत्वनिश्चायका ऽत्मशब्दादि विद्यते तथाऽग्नित्वनिश्चायकस्यापि विद्यमानत्वात् ।**

ಹಿಂದೆ ಆತ್ಮಶಬ್ದವು ವಿಶೇಷಣವಾಗಿರುವುದರಿಂದ ಮತ್ತು ‘ಅಹಂ ವೈಶ್ವಾನರೋ ಭೂತ್ವಾ’ ಎಂಬ ಸಮಾಖ್ಯಾಪ್ರಮಾಣವಿರುವುದರಿಂದ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಲಾಯಿತು. ಆದರೆ ಇದು ತಪ್ಪು. ಏಕೆಂದರೆ ಯಾವರೀತಿಯಾಗಿ ಆತ್ಮಶಬ್ದದ ವಿಶೇಷಣದಿಂದ ವಿಷ್ಣುವೇ ವೈಶ್ವಾನರನೆಂದು ನಿಶ್ಚಯಿಸುತ್ತೀರೋ, ಅದೇ ರೀತಿಯಾಗಿ ಅಗ್ನಿಯೂ ಸಹ ವೈಶ್ವಾನರನಾಗಿದ್ದಾನೆ ಎಂಬ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ.

ವೈಶ್ವಾನರ ಶ್ರುತಿಯಲ್ಲಿ ಅಗ್ನಿಶಬ್ದದ ಸಮಾನಾಧಿಕರಣ್ಯವಿದೆ

**तत्वप्रकाशिका – तथाहि । वैश्वानरशब्दस्याऽत्मशब्दसमानाधिकृतत्ववदग्नि-शब्दसामानाधिकृतत्वं च श्रूयते 'अयमग्निः' इति बृहदारण्यके 'वैश्वानरम्' इत्यास्यामृचि च ।**

ಅದು ಹೀಗೆ -- ವೈಶ್ವಾನರಶಬ್ದಕ್ಕೆ ಆತ್ಮಶಬ್ದದ ಸಾಮಾನಾಧಿಕರಣ್ಯವಿರುವಂತೆ ಅಗ್ನಿಶಬ್ದದ ಸಾಮಾನಾಧಿಕರಣ್ಯವೂ ಸಹ 'ಅಯಮಗ್ನಿರ್ವೈಶ್ವಾನರಃ' ಎಂಬ ಬೃಹದಾರಣ್ಯಕದಲ್ಲಿ ಕೇಳಿಸುತ್ತಿದೆ. 'ವೈಶ್ವಾನರಮೃತ ಆಜಾತಮಗ್ನಿಂ' ಎಂಬ ಶ್ರುತಿಯಲ್ಲಿಯೂ ಅಗ್ನಿಶಬ್ದದ ಸಾಮಾನಾಧಿಕರಣ್ಯವಿರುವುದು ಕಾಣಿಸುತ್ತಿದೆ.

ಅಗ್ನಿಯೇ ವೈಶ್ವಾನರನೆನ್ನಲು ಅನೇಕ ಲಿಂಗಗಳು

**तत्वप्रकाशिका – तथाऽग्निलिङ्गं च वैश्वानरे होमाधिकरणत्वं गार्हपत्याद्यङ्गत्वं च श्रूयते 'वैश्वानरे तद्धुतम्' इत्यादौ । तथा वैश्वानरे पाचकत्वाख्यमग्निकर्म च श्रूयते ।**

ಇದರಂತೆ ಅಗ್ನಿಜ್ಞಾಪಕವಾದ ಲಿಂಗಗಳೂ ಸಹ ಇರುತ್ತವೆ. ಹೋಮಾಧಿಕರಣತ್ವ, ಗಾರ್ಹಪತ್ಯಾದಿಅಂಗತ್ವ ಮೊದಲಾದವು 'ವೈಶ್ವಾನರೇ ತದ್ಧುತಮ್' 'ವೈಶ್ವಾನರನಲ್ಲಿ ಹೋಮ ಮಾಡಿದಂತಾಗುತ್ತದೆ' ಇತ್ಯಾದಿ ಶ್ರುತಿಗಳಲ್ಲಿ ಕಾಣಿಸುತ್ತಿದೆ. ಅದೇ ರೀತಿಯಾಗಿ ಪಾಚಕತ್ವವೆಂಬ ಅಗ್ನಿಯ ಕರ್ಮವೂ ಸಹ ವೈಶ್ವಾನರನಲ್ಲಿ ಕೇಳಿಸುತ್ತಿದೆ.

'ಅಯಮಗ್ನಿರ್ವೈಶ್ವಾನರಃ' ಎಂಬ ಶ್ರುತಿಯ ಆಧಾರ

**तत्वप्रकाशिका – 'अयमग्निर्वैश्वानरो योऽयमन्तःपुरुषे येनेदमन्नं पच्यते यदिदमद्यते' इति बृहदारण्यके ।**

ಆ ಶ್ರುತಿ ಹೀಗಿದೆ -- ''ಅಯಮಗ್ನಿರ್ವೈಶ್ವಾನರೋ ಯೋऽಯಮಂತಃಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ' 'ಪುರುಷನಾದವನು ಯಾವ ಅನ್ನವನ್ನು

ಭಕ್ಷಿಸುತ್ತಾನೋ ಆ ಅನ್ನವು ಅಗ್ನಿಯಿಂದ ಪಾಕ ಮಾಡಲ್ಪಟ್ಟಿರುತ್ತದೆ' ಎಂಬುದಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಲ್ಪಟ್ಟಿದೆ.

### ಛಾಂದೋಗ್ಯೋಪನಿಷತ್ತಿನಲ್ಲಿ ಅಗ್ನಿಲಿಂಗಗಳು

**तत्वप्रकाशिका – 'तद्यद्भक्तम्' इति छान्दोग्ये च । तस्माद्वैश्वानरस्य विष्णुत्वज्ञापकवदग्नित्वज्ञापकस्यापि सत्वान्न विष्णुरेवायमिति निश्चयो युज्यत इत्यर्थः ।**

ಮತ್ತು ಛಾಂದೋಗ್ಯೋಪನಿಷತ್ತಿನಲ್ಲಿಯೂ 'ತದ್ಯದ್ಭಕ್ತಮ್' 'ಭೋಜನಕಾಲದಲ್ಲಿ ಯಾವ ಅನ್ನವು ಮೊದಲು ಪ್ರಾಣಾಹುತಿರೂಪದಿಂದ ಸ್ವೀಕರಿಸಲಾಗುತ್ತದೋ ಅದು ಜಾಠರದಲ್ಲಿರುವ ವೈಶ್ವಾನರನಿಗೆ ಹೋಮದ್ರವ್ಯವಾಗಿದೆ' ಎಂದು ಹೇಳಲಾಗಿದೆ. ಈ ಕಾರಣದಿಂದಲೂ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂಬ ವಿಷಯದಲ್ಲಿ ಆತ್ಮಶಬ್ದದ ಸಾಮಾನಾಧಿಕರಣ್ಯವು ಜ್ಞಾಪಕವಾಗಿರುವಂತೆ ವೈಶ್ವಾನರನು ಅಗ್ನಿಯಾಗಿದ್ದಾನೆಂಬ ವಿಷಯದಲ್ಲೂ ಅನೇಕ ಲಿಂಗಗಳಿರುತ್ತವೆಂದು ತಿಳಿಯುತ್ತದೆ. ಆದ್ದರಿಂದ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ನಿಶ್ಚಯಿಸಲು ಬರುವುದಿಲ್ಲವೆಂದು ಅಭಿಪ್ರಾಯ. ಇಷ್ಟು ಪೂರ್ವಪಕ್ಷ.

### ವೈಶ್ವಾನರ ಶಬ್ದವಿರುವ ವಾಕ್ಯಗಳೆಲ್ಲವೂ ಈ ಅಧಿಕರಣಕ್ಕೆ ವಿಷಯ

**तत्वप्रकाशिका – अत्र सर्ववैश्वानरविद्यानां विचार्यत्वात् तत्तद्वाक्योद्धारो युक्त एव समाख्यारूपेण वा ।**

ಈ ಅಧಿಕರಣದಲ್ಲಿ ಸಕಲಶ್ರುತಿಯಲ್ಲಿ ಇರುವ ವೈಶ್ವಾನರ ಶಬ್ದಗಳು ವಿಚಾರಮಾಡಲು ಅರ್ಹವಾಗಿವೆ. ಆದ್ದರಿಂದ ವೈಶ್ವಾನರ ಶಬ್ದವಿರುವ ಎಲ್ಲ ವಾಕ್ಯಗಳನ್ನು ವಿಷಯವಾಕ್ಯವನ್ನಾಗಿ ಪರಿಗಣಿಸುವುದು ಯುಕ್ತವೇ ಆಗಿದೆ. ಅಥವಾ ಸಮಾಖ್ಯಾಪ್ರಮಾಣಕ್ಕಾಗಿ ಭಿನ್ನ ಭಿನ್ನ ವಾಕ್ಯಗಳನ್ನು ಉಲ್ಲೇಖಿಸಿರುವುದು ಯುಕ್ತವಾಗಿದೆಯೆಂದು ತಿಳಿಯಬೇಕು.

'ಮೂರ್ಧಾನಂ ದಿವಃ' ಇತ್ಯಾದಿ ಶ್ರುತ್ಯರ್ಥ

**तत्वप्रकाशिका – 'मूर्धानं दिवः' इति मन्त्रार्थः – दिवः कारणभूतं मूर्धानं पृथिव्याः कारणभूतं पादं जनानां सम्यज्ज्ञानायाभिव्यक्तं सर्वज्ञमखण्डेशमत्यन्नं जनानां पातारं वैश्वानरमग्निं देवाः स्वास्यतयाऽकुर्वन् – इति ।**

"ಮೂರ್ಧಾನಂ ದಿವಃ" ಎಂಬ ಶ್ರುತ್ಯರ್ಥ ಹೀಗಿದೆ. ಯಾರ ತಲೆಯು ದ್ಯುಲೋಕಕ್ಕೆ ಕಾರಣವಾಗಿದೆಯೋ, ಯಾರ ಕಾಲುಗಳು ಪೃಥಿವಿಗೆ ಕಾರಣವಾಗಿದೆಯೋ, ಯಾರು ಸಾತ್ವಿಕಜನರಿಗೆ ಸಮ್ಯಗ್‌ಜ್ಞಾನವನ್ನು ಪ್ರಕಟಪಡಿಸುತ್ತಾನೋ ಅಂತಹ ವ್ಯಕ್ತಿಯೇ ಸರ್ವಜ್ಞನಾಗಿದ್ದಾನೆ. ಸಕಲಕ್ಕೂ ಒಡೆಯನಾಗಿದ್ದಾನೆ. ಅವನೇ ವಿಪುಲವಾದ ಅನ್ನನು. ಸಕಲ ಜನರಿಗೆ ರಕ್ಷಕನು. ಇಂತಹ ವೈಶ್ವಾನರಾಗ್ನಿಯನ್ನು ದೇವತೆಗಳು ತಮ್ಮ ಮುಖವನ್ನಾಗಿ ಮಾಡಿಕೊಂಡರು" ಎಂದು.

'ಅಗ್ನಿರ್ದೇವಾನಾಂ ಮುಖಮ್' ಇತ್ಯಾದಿ ಶ್ರುತಿಗಳ ಅರ್ಥ

**तत्वप्रकाशिका – गतिसाधनत्वादरतिः पादः । 'ऋताय जातम्' इति समाख्यानात्सप्तमी तादर्थ्ये । 'अन्नं थम्' इति हि श्रुतिः । 'अग्निर्देवानां मुखम्' इति च । 'वैश्वानरे तद्धुतं भवति' इति वाक्यार्थः । एवंवित् यद्यपि चाण्डालायोच्छिष्टं प्रयच्छेत् आत्मनि हैवास्य तद्वैश्वानरे हुतं स्यादिति वाक्यादवगन्तव्यः ।**

ಗಮನಕ್ಕೆ ಸಾಧನವಾಗಿದ್ದರಿಂದ ಅರತಿಪದಕ್ಕೆ ಪಾದವೆಂದರ್ಥ. 'ಋತಾಯ ಜಾತಮ್' ಎಂಬ ಸಮಾಖ್ಯಾಶ್ರುತಿಯು ಪ್ರಮಾಣವಾಗಿರುವುದರಿಂದ ಪ್ರಕೃತ ಸಪ್ತಮೀವಿಭಕ್ತಿಯು ತಾದರ್ಥ್ಯದಲ್ಲಿ (ಅದಕ್ಕೋಸ್ಕರ ಎಂಬರ್ಥದಲ್ಲಿ) ಪ್ರಯುಕ್ತವಾಗಿದೆ. 'ಅನ್ನಂ ಥಮ್' ಅತ್ಯಂತವಾದ ಅನ್ನವಿದ್ದವನು ಎಂದು ಶ್ರುತಿಯಿರುತ್ತದೆ. 'ಅಗ್ನಿರ್ದೇವಾನಾಂ ಮುಖಮ್' ಅಗ್ನಿಯು ದೇವತೆಗಳಿಗೆ ಮುಖನಾಗಿದ್ದಾನೆ ಎಂದೂ ಶ್ರುತಿಯಿರುತ್ತದೆ. "ವೈಶ್ವಾನರೇ ತದ್ದುತಮ್ ಭವತಿ" ಎಂಬುದರ ಅರ್ಥವನ್ನು 'ಏವಂವಿತ್' ಎಂಬ ವಾಕ್ಯದಿಂದ ತಿಳಿಯಬೇಕು. ಈ ರೀತಿಯಾಗಿ ವೈಶ್ವಾನರನನ್ನು ತಿಳಿದವನು ವಸ್ತುತಃ ಚಾಂಡಾಲನಿಗೆ ತನ್ನ ಉಚ್ಛಿಷ್ಟವನ್ನು

ನೀಡಿದರೂ ಸಹ ಆ ಚಾಂಡಾಲನಲ್ಲಿರುವ ವೈಶ್ವಾನರನಲ್ಲಿ ಹೋಮಮಾಡಿದಂತಾಗುತ್ತದೆ ಎಂದಿದರರ್ಥ.

### ಪೂರ್ವಪಕ್ಷದ ನಿರಾಕರಣೆ

**तत्वप्रकाशिका – भक्तम् = अन्नम् । परिहारसूत्रांशं व्याचष्टे – नेति ।।**

'ಭಕ್ತಮ್' ಎಂಬ ಶಬ್ದಕ್ಕೆ ಅನ್ನವು ಎಂದರ್ಥ. ಈ ರೀತಿಯಾದ ಪೂರ್ವಪಕ್ಷವನ್ನು ಪರಿಹಾರಮಾಡುವ ಸೂತ್ರದ ಭಾಗವನ್ನು ''ನ'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

### ಅಗ್ನಿದೇವತೆ ಹಾಗೂ ವಿಷ್ಣು ಇಬ್ಬರಲ್ಲಿಯೂ ಪ್ರಮಾಣಗಳು ಸಮಾನವಲ್ಲ

**तत्वप्रकाशिका – उभयत्र श्रुत्यादिसाम्याद्वैश्वानरस्य विष्णुत्वनिश्चयोपपत्तेः।**

ಅಗ್ನಿದೇವತೆ ಹಾಗೂ ವಿಷ್ಣುವಿನಲ್ಲಿ ಶ್ರುತಿ ಹಾಗೂ ಲಿಂಗಾದಿಗಳು ಸಮಾನವಾಗಿರುವುದರಿಂದ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ನಿಶ್ಚಯಿಸಲಾಗದು ಎಂಬ ಪೂರ್ವಪಕ್ಷವು ಅಯುಕ್ತವಾಗಿದೆ. ಏಕೆಂದರೆ ಇಬ್ಬರಲ್ಲಿಯೂ ಶ್ರುತಿಲಿಂಗಾದಿಗಳು ಸಮಾನವಾಗಿದ್ದರೂ ಸಾವಕಾಶತ್ವ ನಿರವಕಾಶತ್ವಗಳ ಬಲದಿಂದ ನಿರ್ಣಯಿಸಬಹುದು.

### ಅಗ್ನಿಲಿಂಗಗಳೆಲ್ಲವೂ ಸಾವಕಾಶ

**तत्वप्रकाशिका – तत्र यदग्निनाम लिङ्गं कर्म च वैश्वानरे श्रूयते तद्विष्णौ सावकाशम् । 'अथ हेममात्मानम्' इत्यग्न्यादिनामलिङ्गकर्मत्वेन विष्णोरुपासनोपदेशात् ।**

ಈ ವಿಷಯದಲ್ಲಿ ಅಗ್ನಿ ಎಂಬ ನಾಮ, ಅಗ್ನಿಯ ಲಿಂಗ ಪಾಚಕತ್ವವೆಂಬ ಕರ್ಮ ಇವೆಲ್ಲವೂ ವೈಶ್ವಾನರನಲ್ಲಿ ಏನು ಕೇಳಿಸುತ್ತಿವೆಯೋ ಅವೆಲ್ಲವೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಹೇಗೆಂದರೆ 'ಅಥ ಹೇಮಮಾತ್ಮಾನಮ್' ಎಂಬುದಾಗಿ ಶ್ರುತಿಯಲ್ಲಿ ನಾನಾ ಲಿಂಗ, ಕರ್ಮಗಳಿಂದ ವಿಷ್ಣುವನ್ನು ಉಪಾಸನೆ ಮಾಡಬೇಕೆಂದು ಉಪದೇಶಿಸಲಾಗಿದೆ.

ಆತ್ಮಶಬ್ದಾದಿಗಳೇ ವಿಷ್ಣುತ್ವ ನಿರ್ಣಾಯಕ

**तत्वप्रकाशिका – न चात्मशब्दादेरन्यस्त्यवकाशः । अतो निरवकाशेन सावकाशबाधोपपत्तेः युज्यते वैश्वानरस्य विष्णुत्वनिश्चय इति भावः ।**

ವಿಷ್ಣುವಿನಲ್ಲಿ ಪ್ರಸಿದ್ಧವಾದ ಆತ್ಮಶಬ್ದಾದಿಗಳಿಗೆ ಬೇರೆ ಕಡೆ ಅವಕಾಶವಿರುವುದಿಲ್ಲ. ಆದ್ದರಿಂದ ನಿರವಕಾಶವಾದ ಆತ್ಮಶಬ್ದದ ಬಲದಿಂದ ಸಾವಕಾಶವಾದ ಅಗ್ನಿಶಬ್ದ ಮೊದಲಾದವುಗಳಿಗೆ ಬಾಧವು ಬರುತ್ತದೆ. ಆದ್ದರಿಂದ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ನಿಶ್ಚಯಿಸಬಹುದು.

ಉಪಾಸನೆಗೆ ಹೇಳಿದ್ದು ಅಸತ್ತಲ್ಲ

**तत्वप्रकाशिका – नच वाच्यमुपासनार्थमुक्तत्वादेव 'योषितमग्निं ध्यायीत' इत्यादाविवाऽसत्वम् । 'नाविद्यमानं ब्रुवते वेदा ध्यातुं न वैदिकाः' इत्यादिवचनात् । वाक्यान्तरस्याविरोधेन योऽर्थः स्थाप्यते तदर्थत्वाच ।**

ಇನ್ನು ಉಪಾಸನೆಗೋಸ್ಕರ ಹೇಳಿದ್ದರಿಂದಲೇ ಅದು ಅಸತ್ತಾಗಿದೆ ಎಂದು ಹೇಳುತ್ತೇವೆ. ಯಾವ ರೀತಿಯಲ್ಲಿ 'ಯೋಷಿತಮಗ್ನಿಂ ಧ್ಯಾಯೀತ' ಎಂಬಲ್ಲಿ 'ಸ್ತ್ರೀಯನ್ನು ಅಗ್ನಿಯನ್ನಾಗಿ ತಿಳಿಯಬೇಕು' ಎಂದು ಹೇಳಿದಾಗ ಸ್ತ್ರೀಯಲ್ಲಿ ಅಗ್ನಿಯು ಅಸತ್ತಾಗಿದೆಯೋ ಅದೇ ರೀತಿಯಾಗಿ ವಿಷ್ಣುವಿನಲ್ಲಿ ಉಪಾಸನೆಗೋಸ್ಕರ ಹೇಳಿರುವ ನಾಮಲಿಂಗಾದಿಗಳೆಲ್ಲವೂ ಅಸತ್ತಾಗಿರುತ್ತವೆ ಎಂದರೆ ಹೀಗೆ ಹೇಳಬಾರದು. ಏಕೆಂದರೆ 'ನಾವಿದ್ಯಮಾನಂ ಬ್ರುವತೇ ವೇದಾ ಧ್ಯಾತುಂ ನ ವೈದಿಕಾಃ' 'ಇಲ್ಲದೇ ಇರುವುದನ್ನು ಉಪಾಸನೆಗೋಸ್ಕರ ವೇದಗಳು ಹಾಗೂ ತದನುಸಾರಿಯಾದ ಸ್ಮೃತಿಗಳು ಹೇಳುವುದಿಲ್ಲ' ಎಂಬ ಪ್ರಮಾಣವು ಆಧಾರವಾಗಿದೆ. ಅದಲ್ಲದೇ 'ಅಹಂ ವೈಶ್ವಾನರೋ ಭೂತ್ವಾ' ಎಂಬ ಗೀತಾವಾಕ್ಯಕ್ಕೆ ಅವಿರುದ್ಧವಾದ ಅರ್ಥವನ್ನೇ 'ವೈಶ್ವಾನರಮುಪಾಸ್ತೇ' ಎಂಬ ವಾಕ್ಯಕ್ಕೆ ಹೇಳಬೇಕು. ಆದ್ದರಿಂದಲೂ ಅಸದರ್ಥವನ್ನು ಈ ವಾಕ್ಯವು ಹೇಳುವುದಿಲ್ಲ.

### ವೈಶ್ವಾನರನೆಂದು ಉಪಾಸನೆ ಮಾಡಿರಿ

**तत्वप्रकाशिका – विश्वं = पूर्णम् । आरात् = समीपे स्वहृदये । प्रथम 'इति'शब्दो विधिसमाप्तौ । द्वितीयस्य इत्युपासीतेत्यन्वयः । प्रकरणबलाच्च वैश्वानरस्य विष्णुत्वनिश्चयो भवतीत्याह – अनात्तत्वादिति ।।**

ವಿಶ್ವ = ಪೂರ್ಣ, ಆರಾತ್ = ಸಮೀಪದಲ್ಲಿ ಎಂದರೆ ತನ್ನ ಹೃದಯದಲ್ಲೇ. ಇಲ್ಲಿ ಮೊದಲಿರುವ ಇತಿಶಬ್ದವು ವಿಧಿವಾಕ್ಯದ ಸಮಾಪ್ತ್ಯರ್ಥದಲ್ಲಿದೆ. ಎರಡನೆಯ ಇತಿಶಬ್ದವು 'ಇತ್ಯುಪಾಸೀತ' ಎಂಬಲ್ಲಿ ಅನ್ವಯವನ್ನು ಹೊಂದುತ್ತದೆ. ಪ್ರಕರಣದ ಬಲದಿಂದಲೂ ಸಹ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ಸಿದ್ಧವಾಗುತ್ತದೆ ಎಂದು ''ಅನಾತ್ತತ್ವಾತ್'' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

### ಇದು ವಿಷ್ಣುಪ್ರಕರಣ ಎನ್ನಲು ಆತ್ಮ ಹಾಗೂ ಬ್ರಹ್ಮಶಬ್ದಗಳೇ ಆಧಾರ

**तत्वप्रकाशिका – 'को न आत्मा किं ब्रह्म' इति विचारपूर्वकं वैश्वानरविद्याया आरभ्याधीतत्वेन विष्णुप्रकरणत्वाच्च वैश्वानरो विष्णुरेवेति निश्चयो भवति । 'अनात्तत्वात्' इति वचनेन विष्णोरन्येषां आत्मत्वाद्य-सम्भवादित्यर्थः ।**

'ಕೋ ನ ಆತ್ಮಾ ಕಿಂ ಬ್ರಹ್ಮ' ಉಪಾಸ್ಯನಾದ ಆತ್ಮನು ಯಾರು ಅವನು ಯಾವ ಪ್ರಕಾರದಲ್ಲಿದ್ದಾನೆ. ಈ ರೀತಿಯಾಗಿ ವಿಚಾರಪೂರ್ವಕವಾಗಿ ವೈಶ್ವಾನರವಿದ್ಯೆಯು ಪ್ರಾರಂಭವಾಗಿದೆ. ಆದ್ದರಿಂದ ಇದು ವಿಷ್ಣುಪ್ರಕರಣವೇ ಆಗಿದೆ ಎಂದು ನಿಶ್ಚಯವಾಗುತ್ತದೆ. ಏಕೆಂದರೆ ಆತ್ಮ ಹಾಗೂ ಬ್ರಹ್ಮಶಬ್ದಗಳು ಮುಖ್ಯವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಹಾಗೂ ''ಅನಾತ್ತತ್ವಾತ್'' ಎಂಬ ಮಾತಿನಿಂದ ವಿಷ್ಣುವಿಗಿಂತ ಭಿನ್ನರಾದವರು ಆತ್ಮಶಬ್ದಾದಿಗಳಿಂದ ಪ್ರತಿಪಾದ್ಯರಾಗುವುದಿಲ್ಲವೆಂದು ಸ್ಪಷ್ಟವಾಗುತ್ತದೆ.

### ಸಮಾಖ್ಯಾಪ್ರಮಾಣದಿಂದ ವೈಶ್ವಾನರನಿಗೆ ವಿಷ್ಣುತ್ವ ಸಮರ್ಥನೆ

**तत्वप्रकाशिका – श्रुतिसमाख्यया च वैश्वानरस्य विष्णुत्वमुपपादयति।। चन्द्रमा इति ।। यः पुरुषाख्यो विष्णुः पुरुषसूक्ते ''शीर्ष्णो द्यौः समवर्तत' 'चक्षोः सूर्यो अजायत' 'प्राणाद्वायुरजायत' 'पद्भ्यां भूमिरजायत' इत्यादिना वाक्येन द्युभ्वादिजनकशीर्षादिमानभिहितस्तद्विधमेवात्र वैश्वानरं चाधीयते छन्दोगाः 'मूर्धेव सुतेजाश्चक्षुर्विश्वरूपः प्राणः पृथग्वर्त्मा पृथिव्येव पादौ' इत्यादिना वाक्येन । अतः पुरुषसूक्तसमाख्ययाऽपि विष्णुरेव वैश्वानर इत्यर्थः ।**

ಸಮಾಖ್ಯಾಶ್ರುತಿಯನ್ನು ಪ್ರಮಾಣವನ್ನಾಗಿ ನೀಡಿ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ಸಮರ್ಥಿಸುತ್ತಿದ್ದಾರೆ. ''ಚಂದ್ರಮಾ'' ಇತ್ಯಾದಿಯಾಗಿ. ಪುರುಷನೆಂಬ ವಿಷ್ಣುವು ಪುರುಷಸೂಕ್ತದಲ್ಲಿ 'ಶೀರ್ಷ್ಣೋ ದ್ಯೌಃ ಸಮವರ್ತತ' ತಲೆಯಿಂದ ದ್ಯುಲೋಕವು ಹುಟ್ಟಿತು. 'ಚಕ್ಷೋಃ ಸೂರ್ಯೋ ಅಜಾಯತ' ಕಣ್ಣಿನಿಂದ ಸೂರ್ಯನು ಹುಟ್ಟಿದನು. 'ಪ್ರಾಣಾದ್ ವಾಯುರಜಾಯತ' = ಪ್ರಾಣದಿಂದ ವಾಯುವು ಹುಟ್ಟಿದನು. 'ಪದ್ಭ್ಯಾಂ ಭೂಮಿರಜಾಯತ' ಕಾಲುಗಳಿಂದ ಭೂಮಿಯು ಹುಟ್ಟಿತು ಇತ್ಯಾದಿ ವಾಕ್ಯದಿಂದ ದ್ಯುಲೋಕ, ಸೂರ್ಯ ಮೊದಲಾದವುಗಳಿಗೆ ಜನಕವಾದ ತಲೆ ಮೊದಲಾದ ಅವಯವಗಳುಳ್ಳವನೆಂದು ಹೇಳಲ್ಪಟ್ಟಿದ್ದಾನೆ. ಅದರಂತೆ ಛಾಂದೋಗ್ಯಶ್ರುತಿಯಲ್ಲಿಯೂ ಸಹ 'ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ ಪೃಥಿವ್ಯೇವ ಪಾದೌ' ಎಂಬುದಾಗಿ ಪುರುಷಸೂಕ್ತದಲ್ಲಿ ವರ್ಣನೆ ಮಾಡಿದಂತೆ ಭಗವಂತನ ಅವಯವಗಳನ್ನು ವರ್ಣನೆ ಮಾಡಲಾಗಿದೆ. ಹೀಗೆ ಪುರುಷಸೂಕ್ತರೂಪಸಮಾಖ್ಯಾ ಪ್ರಮಾಣದಿಂದಲೂ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ನಿರ್ಣಯವಾಗುತ್ತದೆ.

### ಪುರುಷಸೂಕ್ತವು ವಿಷ್ಣುಪರ

**तत्वप्रकाशिका – ननु पुरुषसूक्तस्य विष्णुपरत्वे भवेत्तत्समाख्ययैतद्विद्याया विष्णुपरत्वं तदेव कुत इत्यत आह – चशब्देनेति ।। विष्णुपरत्वं पुरुषसूक्तस्य**

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ದುಭ್ವಾದ್ಯಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷ ವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ದ್ಯುಭ್ವಾದ್ಯಧಿಕರಣ

## ಬ್ರಹ್ಮಸೂತ್ರ

'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಸೂತ್ರ ವ್ಯಾಖ್ಯಾನ

**।। अथ तृतीयः पादः ।।**

**।। अथ द्युभ्वाद्यधिकरणम् ।।**

**ब्रह्मसूत्रम् – ।। द्युभ्वाद्यायतनं स्वशब्दात् ।। १ ।।**

**'ಯಸ್ಮಿನ್ ದ್ಯೌಃ' ಎಂಬ ಮಂತ್ರದಲ್ಲಿ ಸ್ವರ್ಗ, ಭೂಮಿ ಮೊದಲಾದವುಗಳಿಗೆ ಆಶ್ರಯನಾಗಿ ಹೇಳಲ್ಪಟ್ಟವನು ವಿಷ್ಣುವೇ ಆಗಿದ್ದಾನೆ. ವಿಷ್ಣುವಿಗೆ ಮಾತ್ರ ಸಂಬಂಧಿಸಿದ ಆತ್ಮಶಬ್ದವು ಈ ವಿಷಯದಲ್ಲಿ ಆಧಾರವಾಗಿದೆ.**

ಅರ್ಥ -- ದ್ಯುಭ್ವಾದ್ಯಾಯತನಂ = 'ಯಸ್ಮಿನ್' ಎಂಬ ಮಾಂಡೂಕ್ಯೋಪನಿಷತ್ತಿನವಾಕ್ಯದಲ್ಲಿ ಸ್ವರ್ಗ ಭೂಮಿ ಮೊದಲಾದವುಗಳಿಗೆ ಆಶ್ರಯನಾಗಿ ಹೇಳಲ್ಪಟ್ಟಿರುವವನು ವಿಷ್ಣುವೇ ಆಗಿದ್ದಾನೆ ಹೊರತು ಬೇರೆಯವರಲ್ಲ. ಏಕೆಂದರೆ ಸ್ವಶಬ್ದಾತ್ = ಸ್ವ ಎಂಬ ಶಬ್ದವೇ ಸ್ವಶಬ್ದ ಎನಿಸುತ್ತದೆ. ವಿಷ್ಣುವಿಗೆ ಮಾತ್ರ ವಾಚಕವಾದ ಆತ್ಮಶಬ್ದದ ಆಧಾರದಿಂದ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಉಭಯತ್ರಪ್ರಸಿದ್ಧ ಶಬ್ದಗಳ ಸಮನ್ವಯಕ್ಕಾಗಿ ಮೂರನೆಯ ಪಾದ

**ब्रह्मसूत्रभाष्यम् – तत्र चान्यत्र च प्रसिद्धानां शब्दानां विष्णौ समन्वयं (प्रायेण) अस्मिन् पादे दर्शयति ।**

ಅನುವಾದ - ಭಗವಂತನಲ್ಲಿ ಮತ್ತು ಬೇರೆಯವರಲ್ಲಿ ಪ್ರಸಿದ್ಧವಾಗಿರುವ ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಪರಮಮುಖ್ಯವೃತ್ತಿಯಿಂದ ಮಾಡಿ ತೋರಿಸುತ್ತಿದ್ದಾರೆ. ಮತ್ತು ಅದಕ್ಕೆ ಸಂಬಂಧಪಟ್ಟ ಕೆಲವು ಬೇರೆ ವಿಷಯಗಳ ಪ್ರಸಕ್ತಿಯು ಈ ಪಾದದಲ್ಲಿ ಇರುತ್ತದೆ.

ಪ್ರತಿಪದಾರ್ಥ - ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯ ಮಾಡುವುದಕ್ಕಾಗಿ ಮೂರನೆಯ ಪಾದವು ಹೊರಟಿದೆ. ಈ ವಿಷಯವನ್ನು ಭಾಷ್ಯಕಾರರು ಹೇಳುತ್ತಿದ್ದಾರೆ.

ತತ್ರ = ಭಗವಂತನಲ್ಲಿ, ಚ ಮತ್ತು ಅನ್ಯತ್ರ = ಬೇರೆಯವರಲ್ಲಿ, ಪ್ರಸಿದ್ಧಾನಾಂ ಶ್ರುತಿಯಿಂದ ಹಾಗೂ ವ್ಯವಹಾರದಿಂದ ಪ್ರಸಿದ್ಧವಾದ, ಶಬ್ದಾನಾಂ = ನಾಮಾತ್ಮಕಶಬ್ದಗಳ ಹಾಗೂ ಲಿಂಗಾತ್ಮಕಶಬ್ದಗಳ, ವಿಷ್ಣೌ = ನಾರಾಯಣನಲ್ಲಿ, ಸಮನ್ವಯಂ = ಪರಮಮುಖ್ಯವೃತ್ತಿಯಿಂದ ಸಮನ್ವಯವನ್ನು, ಅಸ್ಮಿನ್ = ಈ, ಪಾದೇ = ಮೂರನೆಯ ಪಾದದಲ್ಲಿ, ಪ್ರಾಯೇಣ = ಬಹುತೇಕವಾಗಿ, (ತತ್ವಪ್ರದೀಪದ ಪಾಠದಲ್ಲಿ 'ಪ್ರಾಯೇಣ' ಎಂಬ ಪದವಿಲ್ಲ) ದರ್ಶಯತಿ = ತೋರಿಸುತ್ತಿದ್ದಾರೆ. (ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳಲ್ಲಿ ಸಮನ್ವಯ ಮಾಡದ ಕಾರಣ ಪ್ರಾಯೇಣ ಎಂದು ಹೇಳಿದ್ದಾರೆ.)

### ರುದ್ರ, ಜೀವ ಇವರುಗಳೇಕೆ ದ್ಯುಭ್ವಾದ್ಯಾಯತನರಲ್ಲ

**ब्रह्मसूत्रभाष्यम् – विष्णोः परविद्याविषयत्वमुक्तम् । तत्र 'यस्मिन् द्यौः पृथिवी चान्तरिक्षमोतं मनः सह प्राणैश्च सर्वैः । तमेवैकं जानथ आत्मानम्'**

**(मुं. २-२-५.) इत्यत्र । 'प्राणानां ग्रन्थिरसि रुद्रो माऽऽविशान्तकः' (महाना-३५.)'प्राणेश्वरः कृत्तिवासाः पिनाकी' (घृतसूक्तम्) इत्यादिना रुद्रस्य प्राणाधारत्वप्रतीतेः 'स एषोऽन्तश्चरते बहुधा जायमानः' (मुं.२-२-६.)इति जीवलिङ्गाच्च तयोः प्राप्तिरिति ॥**

ಅದೃಶ್ಯತ್ವಾಧಿಕರಣದಲ್ಲಿ ಪರವಿದ್ಯೆಗೆ ವಿಷಯನಾದವನು ವಿಷ್ಣು ಎಂದು ಹೇಳಲಾಯಿತು. ಆದರೆ ಆ ಪರವಿದ್ಯಾವಿಷಯತ್ವವು ಆಥರ್ವಣಶ್ರುತಿಯಲ್ಲಿ ''ಯಸ್ಮಿನ್ ದ್ಯೌಃ'' ಇತ್ಯಾದಿಯಾಗಿ ಯಾವ ವ್ಯಕ್ತಿಯು ದ್ಯುಲೋಕ, ಭೂಲೋಕ ಮೊದಲಾದವುಗಳಿಗೆ ಆಶ್ರಯನಾಗಿದ್ದಾನೋ ಅಂತಹವನಲ್ಲಿ ಹೇಳಲ್ಪಟ್ಟಿದೆ. ಅಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವ ಎಂಬ ಲಿಂಗವು ರುದ್ರದೇವರಲ್ಲಿ ಅಥವಾ ಜೀವರಲ್ಲಿ ಹೇಳಬಹುದು. ಏಕೆಂದರೆ ಸ್ವರ್ಗಲೋಕ ಭೂಲೋಕ ಇವುಗಳಿಗೆ ಆಶ್ರಯನಾದವನು ಇಂದ್ರಿಯಗಳಿಗೆ ಆಧಾರನಾಗಿದ್ದಾನೆಂದು 'ಮನಃ ಸಹ ಪ್ರಾಣೈಶ್ಚ ಸರ್ವೈಃ ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ. 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾವಿಶಾಂತಕಃ' ಎಂಬ ಶ್ರುತಿಯಲ್ಲಿ ಪ್ರಾಣ ಮೊದಲಾದ ಇಂದ್ರಿಯಗಳಿಗೆ ಆಶ್ರಯನಾದವನು ರುದ್ರ ಎಂದು ತಿಳಿಯುತ್ತದೆ. ಮತ್ತು ಪ್ರಾಣೇಶ್ವರನೆಂದರೆ ರುದ್ರನೇ ಆಗಿದ್ದಾನೆಂದು 'ಪ್ರಾಣೇಶ್ವರಃ ಕೃತ್ತಿವಾಸಾ ಪಿನಾಕೀ' ಎಂಬ ಘೃತಸೂಕ್ತವು ಹೇಳುತ್ತಿದೆ.

ಅಥವಾ ದ್ಯುಭ್ವಾದಿಲೋಕಗಳಿಗೆ ಆಶ್ರಯನಾದವನು ಜೀವನೂ ಸಹ ಆಗಬಹುದು. 'ಸ 'ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬ ಈ ಶ್ರುತಿಯು ಜೀವನು ಅನೇಕ ಶರೀರಗಳಲ್ಲಿ ಹುಟ್ಟಿ , ಅದರೊಳಗಿರುತ್ತಾನೆಂಬ ಜೀವನ ಧರ್ಮವನ್ನು ಹೇಳಿದೆ. ಆದ್ದರಿಂದ ರುದ್ರ ಅಥವಾ ಜೀವರುಗಳೇ ದ್ಯುಭ್ವಾದ್ಯಾಯತನತ್ವ ಎಂಬ ಲಿಂಗಕ್ಕೆ ಆಶ್ರಯರಾಗಿದ್ದಾರೆಂದು ಪೂರ್ವಪಕ್ಷ ಪ್ರಾಪ್ತವಾಗುತ್ತದೆ.

ಪ್ರತಿಪದಾರ್ಥ -- ಮೊದಲನೆಯ ಈ ಅಧಿಕರಣದಲ್ಲಿ ದ್ಯುಭ್ವಾದ್ಯಾಯತನತ್ವ (ಸ್ವರ್ಗಲೋಕ, ಭೂಲೋಕ ಮೊದಲಾದವುಗಳಿಗೆ ಆಶ್ರಯನಾಗಿರುವಿಕೆ) ಎಂಬ ಲಿಂಗಾತ್ಮಕಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. ಅದಕ್ಕಾಗಿ ಮೊದಲು ರುದ್ರ , ಅಥವಾ ಜೀವಸಾಮಾನ್ಯರೇ ದ್ಯುಭ್ವಾದ್ಯಾಯತನರಾಗಿದ್ದಾರೆಂಬ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ.

ವಿಷ್ಣೋಃ = ನಾರಾಯಣನಿಗೆ, ಪರವಿದ್ಯಾವಿಷಯತ್ವಂ = ಪರವಿದ್ಯೆಗೆ ವಿಷಯತ್ವವನ್ನು ಉಕ್ತಮ್ = ಹಿಂದಿನ ಅದೃಶ್ಯತ್ವಾಧಿಕರಣದಲ್ಲಿ ಹೇಳಲಾಯಿತು, ತತ್ರ = ಈ ಪರವಿದ್ಯಾವಿಷಯತ್ವವಿಷಯದಲ್ಲಿ ಆಥರ್ವಣೋಪನಿಷತ್ತಿನಲ್ಲಿ, ಯಸ್ಮಿನ್ = ಯಾವನಲ್ಲಿ ದ್ಯುಲೋಕವೆನಿಸಿದ ಸ್ವರ್ಗವು, ಚ = ಮತ್ತು, ಪೃಥಿವೀ = ಭೂಲೋಕವು, ಅಂತರಿಕ್ಷಂ = ಆಕಾಶವು ಓತಂ ಆಶ್ರಯಿಸಿಕೊಂಡಿವೆಯೋ ಮತ್ತು, ಸರ್ವೈಃ = ಎಲ್ಲಾ, ಪ್ರಾಣೈಃ = ಪ್ರಾಣ ಅಪಾನ ಮೊದಲಾದ ಪ್ರಾಣಗಳಿಂದ ಸಹ ಕೂಡಿರುವ, ಮನಃ = ಮನಸ್ಸು, ಓತಂ = ಯಾವ ವ್ಯಕ್ತಿಯನ್ನು ಆಶ್ರಯಿಸಿವೆಯೋ, ತಮೇವ = ಅವನನ್ನೇ, ಏಕಂ = ಮುಖ್ಯವಾಗಿ, ಆತ್ಮಾನಮ್ = ಆತ್ಮಶಬ್ದವಾಚ್ಯನನ್ನಾಗಿ, ಜಾನಥ = ತಿಳಿಯಿರಿ. ಇತ್ಯತ್ರ = ಹೀಗೆ ಈ ಶ್ರುತಿಯಲ್ಲಿ, ಅಂತಹ ವ್ಯಕ್ತಿಯೇ ಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಲಾಗಿದೆ.

ಮತ್ತು ಪ್ರಾಣಾನಾಂ = ಪ್ರಾಣಗಳಿಗೆ, ಗ್ರಂಥಿಃ = ನಿಯಾಮಕನು, ಅಸಿ = ಆಗಿರುವಿ. ಅಂತಕಃ = ಸಂಹಾರಕನೂ ಸಹ ನೀನೇ ಆಗಿರುವಿ. ಅಂತಹ ರುದ್ರನೇ ಮಾವಿಶ = ನನ್ನನ್ನು ಪ್ರವೇಶಿಸಬೇಡ. ಪ್ರಾಣೇಶ್ವರಃ = ಪ್ರಾಣಗಳಿಗೆ ಒಡೆಯನಾದ, ಕೃತ್ತಿವಾಸಾಃ = ಗಜಚರ್ಮಧಾರಿಯಾದ, ಪಿನಾಕೀ = ಪಿನಾಕವೆಂಬ ಧನುಸ್ಸನ್ನು ಧರಿಸಿದವನು, ಇತ್ಯಾದಿನಾ = ಇವೇ ಮೊದಲಾದ ವಾಕ್ಯಗಳಿಂದ, ಪ್ರಾಣಾಧಾರತ್ವಸ್ಯ = ಪ್ರಾಣಗಳಿಗೆ ಆಶ್ರಯವಾಗಿರುವಿಕೆ ಎಂಬ ಧರ್ಮವು, ರುದ್ರಸ್ಯ = ರುದ್ರದೇವರಿಗೆ, ಪ್ರತೀತೇಃ = ತೋರುತ್ತದೆ. ಆದಕಾರಣ;

ಮತ್ತು ಸ ಏಷಃ = ಇವನೇ, ಅಂತಃ = ಸಕಲಪ್ರಾಣಗಳ ಹೃದಯದಲ್ಲಿ, ಚರತೇ = ಸಂಚರಿಸುತ್ತಾನೆ. ಬಹುಧಾ = ಅನೇಕ ರೂಪಗಳನ್ನು ಹೊಂದಿ, ಜಾಯಮಾನಃ = ಹುಟ್ಟುತ್ತಾನೆ. ಇತಿ = ಹೀಗೆ, ಜೀವಲಿಂಗಾಚ್ಚ = ಜೀವನ ಲಿಂಗಗಳೂ ಸಹ ಇರುವುದರಿಂದ, ತಯೋಃ = ರುದ್ರ, ಹಾಗೂ ಜೀವರಿಗೆ, ಪ್ರಾಪ್ತಿಃ = ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಪ್ರಾಪ್ತವಾಗುತ್ತದೆ. ಇತಿ = ಇಷ್ಟು ಪೂರ್ವಪಕ್ಷ.

## ಸ್ವರ್ಗಾದಿ ಲೋಕಗಳಿಗೆ ಮಹಾವಿಷ್ಣುವೇ ಆಧಾರ

**ब्रह्मसूत्रभाष्यम् – अत उच्यते –**

**।। द्युभ्वाद्यायतनं स्वशब्दात् ।। १ ।।**

**'तमेवैकं जानथ आत्मानम्' (मुं.२–२–५) इत्यात्मशब्दाद् द्युभ्वाद्यायतनं विष्णुरेव ।**

**'आत्मब्रह्मादयः शब्दास्तमृते विष्णुमव्ययम् ।**
**न सम्भवन्ति यस्मात् तैर्नैवाऽन्या गुणपूर्णता ।।'**
**इति हि ब्रह्मवैवर्ते ।।१।।**

ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸೂತ್ರಕಾರರು ನಿರಾಕರಿಸುತ್ತಿದ್ದಾರೆ.

'ತಮೇವೈಕಂಜಾನಥ' ಎಂಬಮಾಂಡೂಕ್ಯೋಪನಿಷತ್ತಿನಮಾತಿನಂತೆದ್ಯುಭ್ವಾದ್ಯಾಯತನನಾದವನು ಆತ್ಮನಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗುತ್ತಾನೆ; ಹೊರತು ರುದ್ರನಾಗಲೀ, ಜೀವನಾಗಲೀ ಆಗುವುದಿಲ್ಲ.

ಏಕೆಂದರೆ ಆತ್ಮಾ, ಬ್ರಹ್ಮ ಮೊದಲಾದ ಶಬ್ದಗಳೆಲ್ಲವೂ ನಾಶರಹಿತನಾದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ; ಹೊರತು ಬೇರೆಯವರನ್ನಲ್ಲ. ಚತುರ್ಮುಖಾದಿ ದೇವತೆಗಳೆಲ್ಲರೂ ಗುಣಪೂರ್ಣರಾಗದ ಕಾರಣ ಆತ್ಮಾದಿಶಬ್ದಗಳು ಅವರನ್ನು ಪ್ರತಿಪಾದಿಸುವುದಿಲ್ಲ. ಹೀಗೆ ಬ್ರಹ್ಮವೈವರ್ತಪುರಾಣವು ಹೇಳಿದೆ.

ಪ್ರತಿಪದಾರ್ಥ -- ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸಿದ್ಧಾಂತವನ್ನು ಸ್ಥಾಪನೆ ಮಾಡುವ ಸೂತ್ರವನ್ನು ಹೇಳಿ ವ್ಯಾಖ್ಯಾನಿಸುತ್ತಿದ್ದಾರೆ.

ತಮೇವ = ವಿಷ್ಣುವನ್ನೇ, ಏಕಂ = ಪ್ರಧಾನವಾಗಿ, ಆತ್ಮಾನಂ = ಆತ್ಮಶಬ್ದವಾಚ್ಯನೆಂದು, ಜಾನಥ = ತಿಳಿಯಿರಿ. ಇತಿ = ಹೀಗೆ, ಆತ್ಮಶಬ್ದಾತ್ = ವಿಷ್ಣುವನ್ನೇ ಪ್ರತಿಪಾದಿಸುವ ಆತ್ಮಶಬ್ದವು ಕೇಳಿಸುತ್ತಿರುವುದರಿಂದ, ವಿಷ್ಣುರೇವ = ಮಹಾವಿಷ್ಣುವೇ, ದ್ಯುಭ್ವಾದ್ಯಾಶ್ರಯಃ = ಸ್ವರ್ಗ ಭೂಮಿ ಮೊದಲಾದ ಲೋಕಗಳಿಗೆ ಆಶ್ರಯನಾಗುತ್ತಾನೆ.

ಆತ್ಮಬ್ರಹ್ಮಾದಯಃ = ಆತ್ಮಾ ಬ್ರಹ್ಮ ಮೊದಲಾದ, ಶಬ್ದಾಃ = ಶಬ್ದಗಳು, ಅವ್ಯಯಂ = ನಾಶರಹಿತನಾದ, ವಿಷ್ಣುಂ = ವಿಷ್ಣುವನ್ನು, ಋತೇ = ಹೊರತಾಗಿ,

ನ ಸಂಭವಂತಿ = ಚತುರ್ಮುಖಾದಿ ದೇವತೆಗಳಲ್ಲಿ ಕೂಡುವುದಿಲ್ಲ. ಯಸ್ಮಾತ್ = ಏಕೆಂದರೆ, ತೈಃ = ಚತುರ್ಮುಖಬ್ರಹ್ಮ ರುದ್ರಾದಿಗಳಿಂದ, ಗುಣಪೂರ್ಣತಾ = ಸಕಲಗುಣಪರಿಪೂರ್ಣತೆಯು, ನೈವಾಪ್ತಾ = ಹೊಂದಲ್ಪಟ್ಟಿರುವುದಿಲ್ಲ. ಇತಿ = ಹೀಗೆ ಬ್ರಹ್ಮವೈವರ್ತೇ = ಬ್ರಹ್ಮವೈವರ್ತಪುರಾಣದಲ್ಲಿ ಹೇಳಲಾಗಿದೆ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

### ಮೂರನೆಯ ಪಾದದ ಪ್ರಮೇಯ

### ।। द्युभ्वाद्यायतनं स्वशब्दात् ।।

**सत्तर्कदीपावळिः – श्रीदशप्रमतिभ्यो नमः ।। 'विष्णौ तदितरत्रप्रसिद्धानां शब्दानां विष्णौ मुख्यवृत्तिः' अस्मिन् पादे बाहुल्येन प्रदर्श्यत इत्याह – तच्चेति ।। 'यस्मिन् द्यौः' इत्याद्याम्नायते ।**

ದಶಪ್ರಮತಿಗಳಿಗೆ ಸಾಷ್ಟಾಂಗ ನಮಸ್ಕಾರ. ವಿಷ್ಣುವಿನಲ್ಲಿ ಹಾಗೂ ಬೇರೆಯವರಲ್ಲಿ ಪ್ರಸಿದ್ಧವಾದ ಶಬ್ದಗಳನ್ನು ಮುಖ್ಯವೃತ್ತಿಯಿಂದ ಮಹಾವಿಷ್ಣುವಿನಲ್ಲಿ ಬಹುಲವಾಗಿ ಈ ಪಾದದಲ್ಲಿ ಸಮರ್ಥಿಸುತ್ತಿದ್ದಾರೆಂದು ''ತತ್ರ'' ಇತ್ಯಾದಿ ಭಾಷ್ಯದಿಂದ ತಿಳಿಸಿದ್ದಾರೆ. 'ಯಸ್ಮಿನ್ ದ್ಯೌಃ' ಇತ್ಯಾದಿ ಶ್ರುತಿಯು ಅಧಿಕರಣದ ವಿಷಯವಾಕ್ಯ.

ಗ್ರಂಥಿಶಬ್ದದ ಅರ್ಥ

**सत्तर्कदीपावळिः – तत्र श्रूयमाणो द्युभ्वाद्याश्रयो रुद्रस्तावद् भवेत् । 'ओतं मनः सह प्राणैश्च सर्वैः' इति प्राणाधारत्वेनोच्यमानत्वात् । 'प्राणानां ग्रन्थिरसि प्राणेश्वरः' इति च श्रुत्यन्तरेण प्राणाधारत्वस्य रुद्रधर्मत्वेनोक्तत्वात्। 'ग्रथ्यते तस्मिन्' इति ग्रन्थिः = धारकः ।**

ಈ ವಿಷಯವಾಕ್ಯದಲ್ಲಿ ಶ್ರುತನಾದ ದ್ಯುಭ್ವಾದ್ಯಾಶ್ರಯನು ರುದ್ರನೇ ಆಗುತ್ತಾನೆ. ಏಕೆಂದರೆ 'ಓತಂ ಮನಃ ಸಹ ಪ್ರಾಣೈಶ್ಚ ಸರ್ವೈಃ' ಇತ್ಯಾದಿಯಾಗಿ ಪ್ರಾಣಾಧಾರತ್ವೇನ ರುದ್ರನು ಪ್ರತಿಪಾದ್ಯನಾಗಿದ್ದಾನೆ. 'ಪ್ರಾಣಾನಾಂ ಗ್ರಂಥಿರಸಿ ಪ್ರಾಣೇಶ್ವರಃ' ಎಂಬ ಮತ್ತೊಂದು ಶ್ರುತಿಯಿಂದ ಪ್ರಾಣಾಧಾರವು ರುದ್ರನ ಧರ್ಮವೆಂದು ಸಿದ್ಧವಾಗಿದೆ. ಏಕೆಂದರೆ ಗ್ರಂಥಿಶಬ್ದಕ್ಕೆ ''ಗ್ರಥ್ಯತೇ ತಸ್ಮಿನ್'' ಎಂಬ ನಿಷ್ಪತ್ತಿಯಂತೆ ಧಾರಣೆ ಮಾಡಿದವನು ಎಂದರ್ಥ.

ಜೀವನು ದ್ಯುಭ್ವಾದ್ಯಾಶ್ರಯತನನು ಏಕಲ್ಲ ?

**सत्तर्कदीपावळिः – 'स एषोऽन्तरश्चरते बहुधा जायमानः' इति परामृष्टत्वात् द्युभ्वाद्याश्रयो जीवो वा भवेद् बहुधाजननस्य जीवलिङ्गत्वात् ।**

'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬ ಶ್ರುತಿಯನ್ನು ಪ್ರಕೃತ ವಿಷಯವಾಕ್ಯದಲ್ಲಿ ಪರಾಮರ್ಶಮಾಡಿಕೊಳ್ಳುವುದರಿಂದ ದ್ಯುಭ್ವಾದ್ಯಾಶ್ರಯನಾದವನು ಜೀವನು ಆಗಬಹುದು. ಬಹುಧಾ ಜಾಯಮಾನತ್ವವು ಜೀವನ ಅಸಾಧಾರಣಲಿಂಗವಾಗಿದೆ.

ಪರವಿದ್ಯೆಗೆ ವಿಷಯನಾದವನೇ ದ್ಯುಭ್ವಾದ್ಯಾಶ್ರಯನು

**सत्तर्कदीपावळिः – द्युभ्वाद्याश्रयस्यैव 'अथ परा यया तदक्षरमधिगम्यते' इत्युपक्रम्योक्तत्वात् यदुक्तं 'परविद्याविषयत्वं विष्णुधर्मः' इति प्राक्, तदपि न सिद्ध्यति । तदाह – विष्णोरित्यादिना ।।**

ಯಾರು ದ್ಯುಭ್ವಾದ್ಯಾಶ್ರಯನೋ, ಅವನು 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬ ಶ್ರುತಿಯಲ್ಲಿ ಪರವಿದ್ಯಾವಿಷಯನಾಗಿದ್ದಾನೆಂದು ಹೇಳಲಾಗಿದೆ. ಪರವಿದ್ಯಾವಿಷಯತ್ವವು

ವಿಷ್ಣುಧರ್ಮವೆಂದು ಹಿಂದೆ ಅದೃಶ್ಯತ್ವಾಧಿಕರಣದಲ್ಲಿ ಸ್ಥಾಪನೆ ಮಾಡಿದ ಸಿದ್ಧಾಂತವೂ ಕೂಡ ಈಗ ಸಿದ್ಧವಾಗುವುದಿಲ್ಲ. ಈ ವಿಷಯವನ್ನು ಭಾಷ್ಯದಲ್ಲಿ 'ವಿಷ್ಣೋಃ' ಇತ್ಯಾದಿಯಾಗಿ ತಿಳಿಸಿರುತ್ತಾರೆ.

### ಆತ್ಮಶಬ್ದದ ಮುಖ್ಯಾರ್ಥ ಯಾರು ?

**सत्तर्कदीपावळिः – एतन्निराकर्तुं सूत्रं पठित्वा व्याचष्टे – द्युभ्वेत्यादिना।। 'तमैवेकं जानथ आत्मानम्' इत्यात्मशब्देन विशेषितत्वात् द्युभ्वाद्याश्रयो विष्णुरेव ।**

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ ಸೂತ್ರವನ್ನು ಪಠಣವನ್ನು ಮಾಡಿ ವ್ಯಾಖ್ಯಾನಮಾಡುತ್ತಿದ್ದಾರೆ 'ದ್ಯುಭ್ವಾದ್ಯಾಯತನಂ' ಇತ್ಯಾದಿಯಾಗಿ. 'ತಮೇವೈಕಂ ಜಾನಥ ಆತ್ಮಾನಂ' ಎಂಬ ಶ್ರುತಿಯಲ್ಲಿ ಆತ್ಮಶಬ್ದವನ್ನು ವಿಶೇಷಣವನ್ನಾಗಿ ನೀಡಿರುವುದರಿಂದ ದ್ಯುಭ್ವಾದ್ಯಾಯತನಾದವನು ವಿಷ್ಣುವೇ ಆಗುತ್ತಾನೆ.

### ಆತ್ಮ ಎಂದರೆ ಮಹಾವಿಷ್ಣು ಮಾತ್ರ

**सत्तर्कदीपावळिः – गुणैराततत्ववाच्यात्मशब्दो न विष्णोरन्यत्र स्वार्थं लभते । तथाहि उक्तम् – आत्मब्रह्मेति ।। 'अमृतस्यैष सेतुः' इति मुक्ताधारत्वेनोच्यमानत्वादपि द्युभ्वाद्याश्रयो विष्णुः ।**

ಗುಣಗಳಿಂದ ತುಂಬಿರುವ ವಿಷ್ಣುವೇ ಆತ್ಮಶಬ್ದ ಪ್ರತಿಪಾದ್ಯನಾಗುತ್ತಾನೆ. ಬೇರೆಡೆ ಆತ್ಮಶಬ್ದವು ಸ್ವಾರ್ಥವನ್ನು ಹೊಂದುವುದಿಲ್ಲ. ಇದನ್ನೇ ''ಆತ್ಮಬ್ರಹ್ಮಾದಯಃ'' ಎಂಬ ಶ್ಲೋಕದಿಂದ ಸ್ಪಷ್ಟಪಡಿಸಿದ್ದಾರೆ. 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯಲ್ಲಿ ಮುಕ್ತರಿಗೆ ಆಧಾರತ್ವೇನ ಪ್ರತಿಪಾದ್ಯನೆಂದು ಹೇಳಲ್ಪಟ್ಟವನೂ ಕೂಡ ದ್ಯುಭ್ವಾದ್ಯಾಶ್ರಯನಾದ ಮಹಾವಿಷ್ಣುವೇ ಆಗಿದ್ದಾನೆಂದು ಹೊರತು, ಬೇರೆಯವರಲ್ಲ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

### ಪರವಿದ್ಯೆಗೆ ವಿಷಯನಾದವನೇ ಪ್ರಾಣಾಧಾರ

**तत्वप्रदीपः – अथोभयत्र प्रसिद्धानां नामलिङ्गात्मकानां शब्दानां समन्वयः कथ्यते । ''अथ परा यया तदक्षरमधिगम्यते'' इत्यादिना विष्णोः परविद्याविषयत्वमुक्तम् । तत्र परविद्याविषये, तस्यामेव श्रुतौ 'यस्मिन् द्यौः पृथिवी चान्तरिक्षमोतं मनस्सह प्राणैश्च सर्वैः । तमेवैकं जानथ आत्मानम्' इत्यत्र द्युभ्वाद्यायतनवाक्यैः श्रूयमाणं प्राणाधारत्वं श्रुत्यन्तरे रुद्रस्य प्रतीयत इत्यन्वयः ।।**

ಮೂರನೆಯ ಪಾದವು ಪ್ರಾರಂಭವಾಗುತ್ತಿದೆ. ಈ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳ ಹಾಗೂ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಸಮರ್ಥಿಸುತ್ತಿದ್ದಾರೆ.

'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಇತ್ಯಾದಿಯಾದ ಅದೃಶ್ಯತ್ವಾಧಿಕರಣದಲ್ಲಿ ಉಲ್ಲೇಖಿಸಿದ ಶ್ರುತಿಯಲ್ಲಿ ವಿಷ್ಣು ಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಲಾಗಿದೆ. ಯಾರು ಪರವಿದ್ಯೆಗೆ ವಿಷಯನಾಗಿದ್ದಾನೋ, ಅದೇ ಶ್ರುತಿಯು ಅವನಲ್ಲಿ 'ಯಸ್ಮಿನ್ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಮ್' ಎಂಬುದಾಗಿ ದ್ಯುಭ್ವಾದ್ಯಾಯತನ ವಾಕ್ಯಗಳಿಂದ ಪ್ರಾಣಾಧಾರತ್ವವನ್ನು ಹೇಳುತ್ತಿದೆ. ಈ ಪ್ರಾಣಾಧಾರತ್ವವು ರುದ್ರನಲ್ಲೇ ಪ್ರತೀತವಾಗುತ್ತಿದೆ ಎಂಬುದಾಗಿ ಭಾಷ್ಯದ ವಾಕ್ಯಗಳಿಗೆ ಅನ್ವಯಪ್ರಕಾರವಾಗಿ ಅರ್ಥವನ್ನು ತಿಳಿಯಬೇಕು.

### ಪ್ರಾಣಾಧಾರನೇ ದುಭ್ವಾದ್ಯಾಶ್ರಯ

**तत्वप्रदीपः – अयमभिसन्धिः – विष्णोः परविद्याविषयत्वमुक्तम् । तच्च परविद्याविषयत्वं द्युभ्वाद्यायतनस्योच्यते तमेवैकं जानथ आत्मानमित्यत्र ।**

**अनन्ययोगेन प्रधानज्ञेयत्वं त्वत्रोच्यते । तदेव च परविद्याविषयत्वम् । तस्य च द्युभ्वाद्यायतनस्य प्राणाधारत्वं श्रूयते 'ओतं मनः सह प्राणैश्च सर्वैः' इति ।**

ಭಾಷ್ಯದ ಅಭಿಪ್ರಾಯ ಹೀಗಿದೆ - ವಿಷ್ಣುವಿಗೆ ಪರವಿದ್ಯಾವಿಷಯತ್ವವನ್ನು ಹಿಂದೆ ಅದೃಶ್ಯತ್ವಾಧಿಕರಣದಲ್ಲಿ ಹೇಳಲಾಯಿತು. ಆದರೆ ಈ ಪರವಿದ್ಯಾವಿಷಯತ್ವವು ಶ್ರುತಿಗಳಲ್ಲಿ ದ್ಯುಭ್ವಾದ್ಯಾಯತನನಿಗೆ ಹೇಳಲ್ಪಟ್ಟಿದೆ 'ತಮೇವೈಕಂ ಜಾನಥ ಆತ್ಮಾನಮ್' ಇತ್ಯಾದಿಯಾಗಿ. ಅಷ್ಟೇ ಅಲ್ಲದೇ ಬೇರೆಯವರನ್ನು ತಿಳಿಯದೇ ಪರವಿದ್ಯಾವಿಷಯವನ್ನು ಪ್ರಧಾನವಾಗಿ ತಿಳಿಯಬೇಕೆಂದೂ ಕೂಡ ಈ ಶ್ರುತಿಯು ಹೇಳುತ್ತಿದೆ. ಪ್ರಧಾನವಾಗಿ ತಿಳಿಯಬೇಕಾದ ಈ ವ್ಯಕ್ತಿಯೇ ಪರವಿದ್ಯೆಗೆ ವಿಷಯನಾಗಿದ್ದಾನೆ. ಈ ಪರವಿದ್ಯಾವಿಷಯನಾದವನು ದ್ಯುಭ್ವಾದ್ಯಾಶ್ರಯನಾಗಿದ್ದಾನೆ. ಅವನೇ ಪ್ರಾಣಾಧಾರನಾಗಿದ್ದಾನೆಂದು 'ಓತಂ ಮನಃ ಸಹ ಪ್ರಾಣೈಶ್ಚ ಸರ್ವೈಃ' ಎಂಬುದಾಗಿ ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ.

ರುದ್ರ, ಜೀವ, ವಾಯು ಇವರುಗಳು ದುಭ್ವಾದ್ಯಾಶ್ರಯರರೇ ?

**तत्वप्रदीपः – तच्च प्राणाधारत्वं श्रुत्यन्तरे रुद्रस्य प्रतीयते, प्राणानां ग्रन्थिरसीत्यादौ, प्राणेश्वर इत्यादौ च । अस्यामेवोपरि जीवलिङ्गं च । वायोश्च तत्र तत्र प्रसिद्धं प्राणाधारत्वम् ।**

ಈ ಪ್ರಾಣಾಧಾರತ್ವವನ್ನು ನಾರಾಯಣೋಪನಿಷತ್ತು 'ಪ್ರಾಣಾನಾಂ ಗ್ರಂಥಿರಸಿ' ಇತ್ಯಾದಿಯಾಗಿ ರುದ್ರನಲ್ಲಿ ಹೇಳುತ್ತಿದೆ. 'ಪ್ರಾಣೇಶ್ವರಃ ಕೃತ್ತಿವಾಸಃ' ಎಂಬ ಘೃತಸೂಕ್ತವೂ ಕೂಡ ಇದನ್ನೇ ಸ್ಪಷ್ಟಪಡಿಸುತ್ತಿದೆ.

ಮತ್ತು ಇದೇ ಶ್ರುತಿಯ ಮುಂದಿನ ಭಾಗದಲ್ಲಿ ಜೀವಲಿಂಗವೂ ಕೂಡ ಕೇಳಿಸುತ್ತಿದೆ. ಮುಖ್ಯವಾಯುವಿನಲ್ಲಿಯೂ ಪ್ರಾಣಾಧಾರತ್ವವು ಪ್ರಸಿದ್ಧವಾಗಿರುವುದು ಅನೇಕ ಶ್ರುತಿಗಳಲ್ಲಿದೆ. ಆದ್ದರಿಂದ ರುದ್ರ, ಜೀವ, ವಾಯು ಇವರುಗಳಲ್ಲಿ ಪರವಿದ್ಯಾವಿಷಯತ್ವವು ತಿಳಿಯುತ್ತದೆ ಎಂಬುದು ಒಟ್ಟು ಭಾಷ್ಯದ ಅಭಿಪ್ರಾಯ.

ವಿಶೇಷವಿಚಾರ - ದ್ಯುಭ್ವಾದ್ಯಾಯತನನು ಅಥವಾ ಪ್ರಾಣಾಧಾರನು ಜೀವನಾಗಿದ್ದಾನೆನ್ನಲು ಭಾಷ್ಯದಲ್ಲಿ ನೇರವಾದ ಶ್ರುತಿಯನ್ನು ಉಲ್ಲೇಖ ಮಾಡಿಲ್ಲ. ಆದರೆ

ಬಹುಧಾ ಜಾಯಮಾನಃ' ಎಂಬುದಾಗಿ ಜೀವಲಿಂಗವನ್ನು ಹೇಳುವ ಮುಂಡಕದ ಮಾತನ್ನು ಉಲ್ಲೇಖಿಸಿದ್ದಾರೆ. ಅನೇಕ ಬಾರಿ ಹುಟ್ಟುವಿಕೆ ಎಂಬುದು ಜೀವನಲ್ಲಿ ಮುಖ್ಯವಾಗಿ ಕೂಡುತ್ತದೆ. ಈ ಬಹುಧಾ ಜಾಯಮಾನತ್ವವನ್ನು ವಿಷ್ಣುವಿನಲ್ಲಿ ಮುಖ್ಯವಾಗಿ ಹೇಳಲು ಬರುವುದಿಲ್ಲ. ಈ ಲಿಂಗದ ಬಲದಿಂದ 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ' ಇತ್ಯಾದಿ ವಾಕ್ಯವೂ ಕೂಡ ಜೀವಪರವಾಗಿಯೇ ವ್ಯಾಖ್ಯಾನ ಮಾಡಬೇಕೆಂಬುದು ಭಾಷ್ಯದ ಅಭಿಪ್ರಾಯ.

ಆದರೆ ರುದ್ರನ ವಿಷಯದಲ್ಲಿ 'ಪ್ರಾಣಾನಾಂ ಗ್ರಂಥಿರಸಿ' ಇತ್ಯಾದಿ ಬೇರೆ ಶ್ರುತಿಯನ್ನು ಆಧಾರವನ್ನಾಗಿ ನೀಡಿದ್ದಾರೆ. ಜೀವನ ವಿಷಯದಲ್ಲಿ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವನ್ನೇ ದ್ಯುಭ್ವಾದ್ಯಾಯತನಕ್ಕೆ ಆಶ್ರಯವನ್ನಾಗಿ ತಿಳಿಯಬೇಕು.

ವಾಯುದೇವರ ವಿಷಯದಲ್ಲೂ ಕೂಡ ಪ್ರತ್ಯೇಕವಾದ ಶ್ರುತಿಯನ್ನು ಭಾಷ್ಯದಲ್ಲಿ ಉಲ್ಲೇಖ ಮಾಡಿಲ್ಲ. ಏಕೆಂದರೆ 'ಯಸ್ಮಿನ್ ದ್ಯೌಃ ಪೃಥಿವೀ' ಎಂಬ ಶ್ರುತಿಯೇ ವಾಯುಪರವಾಗಿಯೂ ಕೂಡ ವ್ಯಾಖ್ಯಾನ ಮಾಡಬಹುದು. ಭೂರ್ಲೋಕ, ಭುವರ್ಲೋಕ, ಸುವರ್ಲೋಕಗಳಿಗೆ ಆಶ್ರಯರಾದವರು ವಾಯುದೇವರು ಹಾಗೂ ಇಂದ್ರಿಯಾಭಿಮಾನಿದೇವತೆಗಳಲ್ಲಿ ಶ್ರೇಷ್ಠರಾದ ಕಾರಣ ಅವರೇ ಪ್ರಾಣಾಧಾರರಾಗಿದ್ದಾರೆ. ಹೀಗೆ ವಾಯುವೂ ಕೂಡ ದ್ಯುಭ್ವಾದ್ಯಾಯತನ ಎನಿಸಬಹುದು.

### ಅಧಿಕರಣದ ಸಂಶಯ

**तत्वप्रदीपः – तत्र संशयः । किमिदं द्युभ्वाद्यायतनं रुद्रस्स्यादुत जीवमात्रमाहोस्विद्वायुरुत विष्णुरेवेति । द्युभ्वाद्यायतनमिति सूत्रभाष्ये एव सन्देहपदमावेदयतः । अस्यैव हि विष्णुत्वं सिद्धान्ततः सूत्र्यते भाष्यते च ।**

ಈ ಅಧಿಕರಣದ ಸಂಶಯಕೋಟಿ ಹೀಗಿದೆ - ದ್ಯುಭ್ವಾದ್ಯಾಯತನನಾದವನು ರುದ್ರನೋ, ಜೀವನೋ, ಅಥವಾ ವಾಯುವೋ ಅಥವಾ ಮಹಾವಿಷ್ಣುವೋ? ಈ ಸಂಶಯವು 'ದ್ಯುಭ್ವಾದ್ಯಾಯಶ್ರಯಃ ವಿಷ್ಣುರೇವ' ಎಂಬ ಸೂತ್ರಭಾಷ್ಯದಿಂದ ತಿಳಿಯುತ್ತದೆ. ದ್ಯುಭ್ವಾದ್ಯಾಯತನನಾದವನು ಮಹಾವಿಷ್ಣುವೇ ಆಗಿದ್ದಾನೆ ಎಂದು ಸೂತ್ರದಲ್ಲಿ ಹಾಗೂ ಭಾಷ್ಯದಲ್ಲಿ ಸಿದ್ಧಾಂತ ಮಾಡಿದ್ದಾರೆ.

ಎಲ್ಲಾ ಅಧಿಕರಣಗಳಲ್ಲಿ ಸಂಶಯಕೋಟಿ ತಿಳಿಯುವ ಬಗ್ಗೆ

**तत्वप्रदीपः – यस्य च यथात्वं सिद्धान्तयति तस्य तदन्यथात्वं पूर्वपक्षयतीति श्लिष्टम् । पूर्वपक्षसिद्धान्तनिर्णेयधर्मधर्मिण एव च संशयाधिकरणत्वम् । तावेव च धर्मौ सर्वत्र संशयकोटितामाटीकेते ।**

ಯಾವ ಅಧಿಕರಣದಲ್ಲಿ ಹೇಗೆ ಸಿದ್ಧಾಂತ ಮಾಡಲಾಗುತ್ತದೋ, ಅದಕ್ಕೆ ವಿರುದ್ಧವಾದದ್ದೇ ಪೂರ್ವಪಕ್ಷ- ವಾಗುತ್ತದೆಂಬುದು ಲೋಕಪ್ರಸಿದ್ಧಿ. ಏಕೆಂದರೆ ಪೂರ್ವಪಕ್ಷದಲ್ಲಿ ನಿರ್ಣಯ ಮಾಡುವ ಧರ್ಮದ ಧರ್ಮಿಯು ಹಾಗೂ ಸಿದ್ಧಾಂತದಲ್ಲಿ ನಿರ್ಣಯ ಮಾಡಲ್ಪಡುವ ಧರ್ಮದ ಧರ್ಮಿಯು ಸಂಶಯಕ್ಕೆ ಅಧಿಕರಣವಾಗಿರುತ್ತದೆ. ಈ ಎರಡು ಧರ್ಮಗಳೇ ಸಂಶಯಕೋಟಿಗೆ ಆಶ್ರಯವಾಗುತ್ತವೆ. ಆದ್ದರಿಂದ ಪೂರ್ವಪಕ್ಷ ಹಾಗೂ ಸಿದ್ಧಾಂತಕೋಟಿಗಳಿಂದಲೇ ಸಂಶಯವನ್ನು ತಿಳಿಯಬೇಕು.

ಈ ಪ್ರಸಿದ್ಧನ್ಯಾಯವನ್ನು ಅನುಸರಿಸಿರಿ

**तत्वप्रदीपः – अयमतिप्रसिद्धो न्यायस्सर्वत्रानुसारयितव्यो यथाद्रियन्ते विद्वांसः ।**

ಪ್ರಸಿದ್ಧವಾದ ಈ ನ್ಯಾಯವನ್ನು ಎಲ್ಲಾ ಅಧಿಕರಣಗಳಲ್ಲಿಯೂ ಅನುಸರಿಸಬೇಕು. ಸಂಶಯವನ್ನು ತಿಳಿಯಬೇಕೆಂಬ ಆದರವುಳ್ಳ ವಿದ್ವಾಂಸರು ಪೂರ್ವಪಕ್ಷ ಹಾಗೂ ಸಿದ್ಧಾಂತಗಳ ಧರ್ಮವನ್ನೇ ಸಂಶಯಕೋಟಿಯನ್ನಾಗಿ ತಿಳಿಯಬೇಕು. (ಆದ್ದರಿಂದ ನಾವು ಪ್ರತ್ಯೇಕವಾಗಿ ಸಂಶಯಕೋಟಿಯನ್ನು ಉಲ್ಲೇಖ ಮಾಡುವುದಿಲ್ಲ.

ನಾವೇಕೆ ಎಲ್ಲಾ ಅಧಿಕರಣಗಳಲ್ಲಿ ಸಂಶಯಾದಿಗಳನ್ನು ತೋರಿಸುವುದಿಲ್ಲ?

**तत्वप्रदीपः – न पुनरतिगहनार्थत्वावगाहसन्नाहिनो महदनुसेविनः प्रत्यधिकरणं प्रक्रियाप्रकथनरूपां बहिर्मुखसुखावहामनल्पजल्पमालामाद्रियेरन्। नहि मणिगणमार्गणपरा निपुणाधियोऽनुपदं स्वपरगुप्तिपाटनपटवोऽधिजलधि लहरीपटलपरिवृत्ति-परिगणनकौतुकेन समयमतिपातयन्ति ।**

ಶ್ರೀಮದಾಚಾರ್ಯರ ಅನುಸೇವಿಗಳಾದ ಜ್ಞಾನಿಗಳು ಅತ್ಯಂತ ಗಹನವಾದ ಅರ್ಥತತ್ವವನ್ನು ತಿಳಿಯುವುದರಲ್ಲೇ ಆಸಕ್ತರಾಗಿರುತ್ತಾರೆ. ಇಂಥವರಿಗೆ ಪ್ರತಿಯೊಂದು ಅಧಿಕರಣಗಳಲ್ಲಿ ಅಧಿಕರಣರಚನೆಗೆ ಉಪಯುಕ್ತವಾದ ಸಂಶಯಾದಿಗಳ ಪ್ರಕ್ರಿಯೆಯ ತಿಳಿಯುವಿಕೆಯು ಇಷ್ಟವಾಗುವುದಿಲ್ಲ. ಇದು ಕೇವಲ ಬಹಿರ್ಮುಖವಾದ ಸುಖಕಾರಕವಷ್ಟೇ ಹೊರತು, ತತ್ವಬುಭುತ್ಸುಗಳಿಗೆ ಸುಖಪ್ರದವಲ್ಲ. ಆದ್ದರಿಂದ ಬಹಳವಾದ ಹುರುಳಿಲ್ಲದ ಮಾತುಗಳನ್ನು ಪ್ರತಿಯೊಂದು ಅಧಿಕರಣಗಳಲ್ಲಿ ಜ್ಞಾನಿಗಳು ಇಷ್ಟಪಡಲಾರರು.

ನಿಪುಣಮತಿಗಳು ತತ್ವಮಣಿಗಳ ಅನ್ವೇಷಣದಲ್ಲಿ ರತರಾಗಿರುತ್ತಾರೆ. ಪ್ರತಿಕ್ಷಣವೂ ತಮ್ಮ ಸಿದ್ಧಾಂತದ ರಕ್ಷಣೆಯನ್ನು ಮಾಡಿಕೊಳ್ಳುವುದಷ್ಟೇ ಅಲ್ಲದೇ ಪರಪಕ್ಷದ ನಿರಾಕರಣದಲ್ಲಿ ಆಸಕ್ತರಾಗಿರುತ್ತಾರೆ. ಇಂಥವರು ಸಮುದ್ರದಡದಲ್ಲಿ ಕುಳಿತು ಅಲೆಗಳನ್ನು ಎಣಿಸುವ ಕುತೂಹಲದಲ್ಲಿ ಸಮಯ ವ್ಯರ್ಥ ಮಾಡಲಾರರು.

> ಕಠಿಣಪದಾರ್ಥ - 'ಅತಿಗಹನಾರ್ಥತ್ತಾವಗಾಹಸನ್ನಾಹಿನಃ' = ಅತ್ಯಂತ ಗಹನವಾದ ಅರ್ಥತತ್ವವನ್ನು ತಿಳಿಯುವುದರಲ್ಲಿ ಆಸಕ್ತರಾದ, ಮಹದನುಸೇವಿನಃ = ಶ್ರೀಮದಾಚಾರ್ಯರನ್ನು ನಿರಂತರ ಸೇವಿಸುವ ಜ್ಞಾನಿಗಳು, ಪ್ರತ್ಯಧಿಕರಣಂ = ಪ್ರತಿಯೊಂದು ಅಧಿಕರಣದಲ್ಲಿ, ಪ್ರಕ್ರಿಯಾ ಪ್ರಕಥನರೂಪಾಂ = ಪ್ರಾಂಚರು ಹೇಳುವ ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ ಇವುಗಳೇ ಪ್ರಕ್ರಿಯಾಪ್ರಕಥನ ಇವುಗಳು, ಬಹಿರ್ಮುಖಸುಖಾವಹಾಮ್ = ಹೊರಗಿನಿಂದಷ್ಟೇ ಸುಖಪ್ರದವಾದ, ಅನಪಲ್ಪಜಲ್ಪಮಾಲಾಂ = ಬಹಳವಾದ ಹುರುಳಿಲ್ಲದ ಮಾತುಗಳ ಪರಂಪರೆಯನ್ನು, ನ ಪುನಃ ಆದ್ರಿಯೇರನ್ = ಮತ್ತೆ ಮತ್ತೆ ಇಷ್ಟ ಪಡುವುದಿಲ್ಲ. ಮಣಿಗಣಮಾರ್ಗಣಪರಾಃ = ಮಣಿಗಳ ಸಮೂಹವನ್ನು ಹುಡುಕುವುದರಲ್ಲಿ ನಿಷ್ಠರಾದ, ನಿಪುಣಾಧಿಯಃ = ಚತುರಮತಿಗಳು, ಅನುಪದಂ = ನಿರಂತರವಾಗಿ, ಸ್ವಪರಗುಪ್ತಿಪಾಟನ-ಪಟವಃ = ತಮ್ಮ ಪಕ್ಷವನ್ನು ರಕ್ಷಣೆ ಮಾಡಿಕೊಳ್ಳುತ್ತಾ ಪರಪಕ್ಷವನ್ನು ನಿರಾಕರಣೆ ಮಾಡುವುದರಲ್ಲಿ, ಪಟುಗಳಾದ ಜ್ಞಾನಿಗಳು, ಅಧಿಜಲಧಿ = ಸಮುದ್ರತಟದಲ್ಲಿ, ಲಹರೀಪಟಲಪರಿವೃತ್ತಿಪರಿಗಣನಕೌತುಕೇನ = ಪುನಃ ಪುನಃ ಬರುತ್ತಿರುವ ಅಲೆಗಳ ಎಣಿಸುವಿಕೆಯ ಕುತೂಹಲದಲ್ಲಿ,

ಸಮಯಂ = ಕಾಲವನ್ನು, ನಹಿ ಅತಿಪಾತಯಂತಿ = ವ್ಯರ್ಥ ಮಾಡಲಾರರು.

ವಿಶೇಷವಿಚಾರ - ಸಮುದ್ರದಲ್ಲಿ ಅಮೂಲ್ಯವಾದ ಮಣಿಗಳನ್ನು ಹುಡುಕುವುದರಲ್ಲಿ ನಿಪುಣರಾದ ವ್ಯಕ್ತಿಗಳು ಪ್ರತಿಕ್ಷಣವು ತಮಗಿರುವ ಆಪತ್ತನ್ನು ಪರಿಹರಿಸಿಕೊಂಡು, ತಮ್ಮ ಮಣಿಗಳ ಅನ್ವೇಷಣೆಗೆ ಅಡ್ಡಿಪಡಿಸುವ ಪ್ರಾಣಿಗಳನ್ನು ಸಂಹಾರ ಮಾಡುವುದರಲ್ಲೇ ಆಸಕ್ತರಾಗಿರುತ್ತಾರೆ ಹೊರತು, ದಡದಲ್ಲಿ ಕುಳಿತು ಅಲೆಗಳನ್ನು ಎಣಿಸುವ ಕುತೂಹಲದಲ್ಲಿ ಕಾಲವನ್ನು ವ್ಯರ್ಥಮಾಡಲಾರರು. ಇದರಂತೆ ನಿಜವಾದ ತತ್ವಜ್ಞಾನಿಯೂ ಕೂಡ ತತ್ವವೆಂಬ ಮಣಿಗಳ ಅನ್ವೇಷಣೆಯಲ್ಲಿಯೇ ಆಸಕ್ತನಾದಾಗ ತನ್ನ ಸಿದ್ಧಾಂತದ ಪರಿರಕ್ಷಣೆಯನ್ನು ಮಾಡಿಕೊಳ್ಳುವುದಷ್ಟೇ ಅಲ್ಲದೇ ಪರಪಕ್ಷದ ನಿರಾಕರಣೆಯಲ್ಲಿ ಪ್ರತಿಕ್ಷಣವು ಆಸಕ್ತನಾಗಿರುತ್ತಾನೆ. ಇಂಥವನು ಪ್ರತಿಯೊಂದು ಅಧಿಕರಣಗಳ ಸಂಶಯಗಳ ಪರಿಗಣನೆಯಲ್ಲಿ, ಅಧಿಕರಣಗಳ ಗಣನೆಯಲ್ಲಾಗಲೀ ಸಮಯವನ್ನು ವ್ಯರ್ಥಮಾಡಲಾರನಷ್ಟೇ.

ಅಧಿಕರಣಗಳ ರಚನೆಗೆ ದಿಕ್‌ಪ್ರದರ್ಶನ ಮಾಡಿದ್ದೇವೆ

**तत्वप्रदीपः – ननु संशयनिर्णयप्रयोजनादीनामनधिगतौ केयमधिकरण-परिभाषा । किमत्रानधिगतम् ? पूत्रोत्तरपक्षयुक्तिकथनात्मके विचारे विशेषयुक्त्या सिद्धान्तावधारणात्मको निर्णयस्तत्र तत्र प्रसिद्धः । प्रयोजनं च तत्तत्समन्वयसिद्धिः समन्वयाध्याये । एवमुत्तरत्रापीति दिङ्मात्रमत्र प्रदर्शितम्।।**

ಸಂಶಯ, ಸಿದ್ಧಾಂತ, ಪ್ರಯೋಜನ ಇವುಗಳನ್ನು ತಿಳಿಯದಿದ್ದರೆ, ಅಧಿಕರಣ ಪರಿಭಾಷೆಯನ್ನೇ ತಿಳಿಯಲು ಸಾಧ್ಯವಾಗುವುದಿಲ್ಲ ಅಲ್ಲವೆ ?

ಹೀಗೆ ಪ್ರಶ್ನಿಸುವುದೇ ತಪ್ಪು. ತಿಳಿಯದ ವಿಚಾರ ಯಾವುದಿದೆ ಇಲ್ಲಿ ? ಏಕೆಂದರೆ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ಹೇಳುವ ಸಂದರ್ಭದಲ್ಲಿ ವಿಶೇಷ-ಯುಕ್ತಿಯಿಂದ ಸಿದ್ಧಾಂತದ ಅವಧಾರಣೆಯನ್ನು ಎಲ್ಲೆಡೆಯೂ ಮಾಡಲಾಗುತ್ತದೆ. ಇದು ಪ್ರಸಿದ್ಧವೇ ಆಗಿದೆ. ಪ್ರಯೋಜನವು ಆಯಾ ಶಬ್ದಗಳ ಸಮನ್ವಯದ ಸಿದ್ಧರೂಪವೇ ಆಗಿದೆ. ಆದ್ದರಿಂದ ಎಲ್ಲವೂ ಕೂಡ ಸ್ವತಃ ತಿಳಿದುಕೊಳ್ಳಲು ಬರುತ್ತಿರುವಾಗ ಪ್ರತಿಯೊಂದು

ಅಧಿಕರಣಗಳಲ್ಲಿಯೂ ಅದನ್ನೇ ಏಕೆ ಹೇಳಬೇಕು ? ಆದ್ದರಿಂದ ಎಲ್ಲಾ ಅಧಿಕರಣಗಳಲ್ಲಿ ಸಂಶಯಾದಿಗಳನ್ನು ತಿಳಿಯುವ ಕ್ರಮವನ್ನು ಇಲ್ಲಿ ಕೇವಲ ದಿಕ್‌ಪ್ರದರ್ಶನ ಮಾಡಿರುತ್ತೇವೆ.

ವಿಶೇಷವಿಚಾರ - ಸೂತ್ರದಲ್ಲಿ 'ದ್ಯುಭ್ವಾದ್ಯಾಯತನಂ ಸ್ವ ಶಬ್ದಾತ್' ಎಂದು 'ಸ್ವ'ಶಬ್ದದ ಬಲದಿಂದ ದ್ಯುಭ್ವಾದ್ಯಾಯತನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತ ಮಾಡಿದ್ದಾರೆ. ಈ ಸಿದ್ಧಾಂತದಿಂದ ವಿಷ್ಣು ದ್ಯುಭ್ವಾದ್ಯಾಯತನ ಅಲ್ಲ ಎಂಬ ಪೂರ್ವಪಕ್ಷವು ಅರ್ಥಾತ್ ಸಿದ್ಧವಾಗುತ್ತದೆ. ಆ ಪೂರ್ವಪಕ್ಷವನ್ನು ಶ್ರೀಮದಾಚಾರ್ಯರು ಭಾಷ್ಯದಲ್ಲಿ ತೋರಿಸಿದ್ದಾರೆ. ಆದರೆ ಸಂಶಯವನ್ನು ಸೂತ್ರದಲ್ಲಿ ಅಥವಾ ಭಾಷ್ಯದಲ್ಲಿ ತೋರಿಸಿರುವುದಿಲ್ಲ. 'ಸಂಶಯ ತೋರಿಸದೇ ಇದ್ದರೆ ಇದನ್ನು ಅಧಿಕರಣವೆಂದು ಹೇಗೆ ಪರಿಗಣಿಸುವುದು. ಏಕೆಂದರೆ

ವಿಷಯೋ ವಿಷಯಶ್ಚೈವ ಪೂರ್ವಪಕ್ಷಸ್ತಥೋತ್ತರಃ ।
ಪ್ರಯೋಜನಂ ಚ ಪಂಚೈತೇ ಪ್ರಾಂಚೋಽಧಿಕರಣಂ ವಿದುಃ ॥

ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ ಈ ಐದು ಇದ್ದರೆ ಮಾತ್ರ ಅಧಿಕರಣವಾಗಲು ಸಾಧ್ಯ. ಆದರೆ ಬ್ರಹ್ಮಸೂತ್ರದಲ್ಲಿರುವ ಯಾವ ಅಧಿಕರಣದಲ್ಲಿಯೂ ಭಾಷ್ಯಕಾರರು ಸಂಶಯವನ್ನು ತೋರಿಸಿರುವುದಿಲ್ಲ. ಭಾಷ್ಯಕ್ಕೆ ವ್ಯಾಖ್ಯಾನ ಮಾಡಲು ಹೊರಟಿರುವ ತತ್ವಪ್ರದೀಪದಲ್ಲಿಯೂ ಕೂಡ ಸಂಶಯವನ್ನು ತೋರಿಸುತ್ತಿಲ್ಲ. ಇದು ಏಕೆ ? ಈ ಪ್ರಶ್ನೆಗೆ ಪಂಡಿತಾಚಾರ್ಯರು ಇಲ್ಲಿ ನಿಖರವಾಗಿ ಉತ್ತರವನ್ನು ಹೇಳುತ್ತಿದ್ದಾರೆ.

ಪ್ರತಿಯೊಂದು ಅಧಿಕರಣಗಳಲ್ಲಿಯೂ ಸಂಶಯವು ಇದ್ದೇ ಇರುತ್ತದೆ. ಬುದ್ಧಿವಂತರಿಗೆ ಈ ಸಂಶಯವು ಸುಲಭವಾಗಿ ತಿಳಿಯುತ್ತಿರುವಾಗ ಪುನಃ ಅದನ್ನು ನಾವೇಕೆ ತಿಳಿಸಬೇಕು ಎಂಬುದು ಪಂಡಿತಾಚಾರ್ಯರ ಅಭಿಪ್ರಾಯ.

ಪೂರ್ವಪಕ್ಷಧರ್ಮ ಹಾಗೂ ಸಿದ್ಧಾಂತಧರ್ಮಗಳನ್ನು ಸೇರಿಸಿದಾಗ ಸಂಶಯವು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಭಾಷ್ಯಕಾರರು ಸಂಶಯವನ್ನು ಎಲ್ಲಿಯೂ ಕೂಡ ತೋರಿಸಿರುವುದಿಲ್ಲ. ತತ್ವಪ್ರದೀಪಕಾರರೂ ಕೂಡ ಸಂಶಯವನ್ನು ಯಾವ ಅಧಿಕರಣ-ದಲ್ಲಿಯೂ ತೋರಿಸಿರುವುದಿಲ್ಲ.

ಪಂಡಿತಾಚಾರ್ಯರು ಸಂಶಯ, ಪ್ರಯೋಜನ ಇವುಗಳನ್ನು ಪ್ರತ್ಯೇಕವಾಗಿ ತೋರಿಸಬೇಕಾಗಿಲ್ಲವೆಂದು ಸ್ಪಷ್ಟವಾದ ನಿಲುವನ್ನು ಹೊಂದಿದ್ದಾರೆ. ಜ್ಞಾನಿಗಳಿಗೆ ತತ್ವಜ್ಞಾನದ

ತುಡಿತ ಬಹಳವಿದ್ದಾಗ ಅಧಿಕರಣಶರೀರಕ್ಕಾಗಿ ತಿಳಿಯಬೇಕಾದ ಸಂಶಯಾದಿಗಳ ವಿಚಾರವು ಅನುಪಯುಕ್ತವೆಂಬುದು ಇವರ ಅಭಿಪ್ರಾಯ.

ಶ್ರೀಮಟ್ಟೀಕಾಕೃತ್ಪಾದರು ತತ್ವಪ್ರಕಾಶಿಕೆಯ ಪ್ರತಿಯೊಂದು ಅಧಿಕರಣಗಳಲ್ಲಿ ಸಂಶಯ, ಪ್ರಯೋಜನ ಇವುಗಳೆಲ್ಲವನ್ನೂ ತೋರಿಸುತ್ತಾರೆ. ಆದ್ದರಿಂದ ಪಂಡಿತಾಚಾರ್ಯರ ಮಾತಿಗೆ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆ ಸಹಜ. ಆದರೆ ಜ್ಞಾನಿಗಳ ದೃಷ್ಟಿಯಲ್ಲಿ ಪಂಡಿತಾಚಾರ್ಯರ ಮಾತು ಹೊರಟರುತ್ತದೆ. ಮಂದಮತಿಗಳಿಗೆ ಶ್ರೀಮಟ್ಟೀಕಾಕೃತ್ಪಾದರು ಸಂಶಯಗಳನ್ನು ಪ್ರದರ್ಶನ ಮಾಡುತ್ತಾರೆ ಎಂದು ತಿಳಿಯಬೇಕು. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ವಿಷಯಾದಿಗಳನ್ನು ನೀವೇ ತಿಳಿದುಕೊಳ್ಳಿ

**तत्वप्रदीपः – अनयैव दिशा विषयादयस्तत्र तत्र विशेषतो गवेषणीयाः। प्रकिया च त्रिचतुरेषु स्थानेषु व्याक्रियमाणा किमिति मतिं नारोहेत् ।**

ಇದೇ ಕ್ರಮದಲ್ಲಿ ವಿಷಯಾದಿಗಳನ್ನು ಆಯಾ ಅಧಿಕರಣಗಳಲ್ಲಿ ಹುಡುಕಿ ತಿಳಿದುಕೊಳ್ಳಬೇಕು. (ಉಪನಿಷತ್ ವಾಕ್ಯವನ್ನು ಗಮನಿಸಿ, ಅಧಿಕರಣದ ವಿಷಯವು ಏನು ? ಎಂಬುದನ್ನು ವಿಚಾರ ಮಾಡಬೇಕು)

ಅಧಿಕರಣಗಳಿಗೆ ಆವಶ್ಯಕವಾದ ಪ್ರಕ್ರಿಯೆಯನ್ನು ಮೂರ್‍ನಾಕು ಸ್ಥಳದಲ್ಲಿ ನಾವು ತೋರಿಸಿದ್ದೇವೆ. ಇಷ್ಟು ಹೇಳಿದರೂ ಬುದ್ಧಿಗೆ ಅರ್ಥವಾಗುವುದಿಲ್ಲವೇನು ?

ಈ ಅಧಿಕರಣದ ಪೂರ್ವಪಕ್ಷ

**तत्वप्रदीपः – तदेवं विचार्यमाणे द्युभ्वाद्यायतनं रुद्र इति प्राप्तं, जीव इति वा, उक्तयुक्तेरेव । वायुरिति च पक्षान्तरम् । 'प्राणभृच्च' इति सौत्राच्चकारान्न जीवो वायुश्चेति सिद्धान्तभाष्ये प्रतिषेत्स्यमानत्वाच्च ।**

ಹೀಗೆ ವಿಚಾರ ಮಾಡಿದಾಗ ಪ್ರಕೃತ ದ್ಯುಭ್ವಾದ್ಯಧಿಕರಣದಲ್ಲಿ ಪೂರ್ವಪಕ್ಷ ಹೀಗಿದೆ - ದ್ಯುಭ್ವಾದ್ಯಾಯತನಾದವನು ರುದ್ರ ಅಥವಾ ಜೀವ. ಹಿಂದೆ ಹೇಳಿದ ಯುಕ್ತಿಗಳು ಈ

ವಿಷಯದಲ್ಲಿ ಗಮಕಗಳಾಗಿವೆ. ವಾಯುವೂ ಕೂಡ ದುಭ್ವಾದ್ಯಾಯತನ ಎಂಬುದು ಮತ್ತೊಂದು ಪೂರ್ವಪಕ್ಷ. 'ಪ್ರಾಣಭೃಚ್ಚ' ಎಂಬ ಸೂತ್ರದಲ್ಲಿರುವ 'ಚ'ಕಾರದಿಂದ ಜೀವ ಹಾಗೂ ವಾಯು ಇಬ್ಬರನ್ನು ಸಿದ್ಧಾಂತ ಭಾಷ್ಯದಲ್ಲಿ ನಿಷೇಧ ಮಾಡಲಾಗಿದೆ. ಆದ್ದರಿಂದ ಇಬ್ಬರೂ ಕೂಡ ಪೂರ್ವಪಕ್ಷಕ್ಕೆ ವಿಷಯರಾಗಿದ್ದಾರೆ ಎಂದು ಇಲ್ಲಿ ತಿಳಿಯಬೇಕು.

### ವಿಷ್ಣುವೇ ದುಭ್ವಾದ್ಯಾಶ್ರಯನೆಂದು ಸಿದ್ಧಾಂತ

**तत्वप्रदीपः – वायोः प्राप्तौ तु प्राणाधारत्वं, हेतुरिति प्रसिद्धत्वादनुक्तिः। अत आह – द्युभ्वाद्यायतनं स्वशब्दात् । द्युभ्वाद्यायतनं विष्णुरेव, आत्मशब्दात् । विष्णोः स्वरूपस्यैव साक्षाद्वाचको ह्ययमात्मशब्दः ।। ।।**

ವಾಯುವೇ ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು ಪ್ರಾಣಾಧಾರತ್ವವು ಹೇತುವಾಗಿದೆ. ಇದು ಪ್ರಸಿದ್ಧಯುಕ್ತಿಯಾದ್ದರಿಂದ ಪ್ರತ್ಯೇಕವಾಗಿ ಭಾಷ್ಯಕಾರರು ಹೇಳಿರುವುದಿಲ್ಲ. ಈ ಪೂರ್ವಪಕ್ಷದ ನಿರಾಕರಣೆಗಾಗಿ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಸೂತ್ರವು ಹೊರಟಿದೆ. ದ್ಯುಭ್ವಾದ್ಯಾಯತನನಾದವನು ವಿಷ್ಣುವೇ ಆಗಿದ್ದಾನೆ. ಆತ್ಮ ಶಬ್ದ ಇರುವುದರಿಂದ. ಆತ್ಮಶಬ್ದವು ಸಾಕ್ಷಾತ್ತಾಗಿ ವಿಷ್ಣುಸ್ವರೂಪವಾಚಕವಾಗಿದೆ.

ಪಾಠಾಂತರದ ಬಗ್ಗೆ - 'ದ್ಯುಭ್ವಾದ್ಯಾಯಶ್ರಯಃ ವಿಷ್ಣುರೇವ' ಎಂಬುದು ಪ್ರಚಲಿತ ಪಾಠ. ಆದರೆ 'ದ್ಯುಭ್ವಾದ್ಯಾಯತನಮಿತಿ ಸೂತ್ರಭಾಷ್ಯೈವ ಸಂದೇಹಪದಂ ಆವೇದಯತಃ' ಎಂಬ ತತ್ವಪ್ರದೀಪವನ್ನು ಗಮನಿಸಿದಾಗ 'ದ್ಯುಭ್ವಾದ್ಯಾಯತನಂ ವಿಷ್ಣುರೇವ' ಎಂಬುದೇ ತತ್ವಪ್ರದೀಪಕಾರರಿಗೆ ಸಮ್ಮತವಾದ ಪಾಠವೆಂದು ತಿಳಿಯುತ್ತದೆ. ಹೃಷೀಕೇಶತೀರ್ಥರ ಪಾಠವೂ ಕೂಡ 'ದ್ಯುಭ್ವಾದ್ಯಾಯತನಂ ವಿಷ್ಣುರೇವ' ಎಂಬುದಾಗಿಯೇ ಕಾಣಸುತ್ತದೆ.

ವಿಶೇಷವಿಚಾರ - ಸೂತ್ರಕಾರರು 'ಆತ್ಮಶಬ್ದಾತ್' ಎಂದು ಹೇಳುವ ಬದಲು, 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ಕಾರಣವೇನೆಂದರೆ ಆತ್ಮಶಬ್ದವು ವಿಷ್ಣುವಿನ ಅಸಾಧಾರಣವಾದ ಶಬ್ದವಾಗಿದೆ. ಮತ್ತು ಬ್ರಹ್ಮಶಬ್ದವನ್ನೂ ಕೂಡ ಇದರಿಂದ ಸಂಗ್ರಹಿಸಲು 'ಸ್ವಶಬ್ದಾತ್' ಎಂದಿದ್ದಾರೆ. 'ಆತ್ಮಶಬ್ದಾತ್' ಎಂದಷ್ಟೇ ಹೇಳಿದ್ದಲ್ಲಿ, ಬ್ರಹ್ಮಶಬ್ದವೆಂಬ ಹೇತುವನ್ನು ಹೇಳಲು ಬರುತ್ತಿರಲಿಲ್ಲ.

ಆತ್ಮಶಬ್ದವನ್ನು ಹೇತುವನ್ನಾಗಿ ಹೇಳಲು ಮತ್ತೊಂದು ಕಾರಣವಿದೆ. ನಾಮ ಹಾಗೂ ಲಿಂಗಗಳಲ್ಲಿ ನಾಮವೇ ಪ್ರಬಲವಾದ ಹೇತುವಾಗುತ್ತದೆ. 'ದಂಡವನ್ನು ಹಿಡಿದವನು' ಬಂದನು ಎಂದು ಹೇಳಿದಾಗ ಯಾರು ಬೇಕಾದರೂ ಕೂಡ ಆಗಬಹುದು. ಆದರೆ ದೇವದತ್ತನು ಬಂದನು ಎಂದು ಹೇಳಿದಾಗ ಮತ್ತೊಬ್ಬರನ್ನು ತಿಳಿಯಲು ಬರುವುದಿಲ್ಲ. ಹೀಗೆ ಲಿಂಗಕ್ಕಿಂತ ನಾಮವು ಪ್ರಬಲವಾಗಿರುವುದು ಲೋಕಸಿದ್ಧವಾಗಿದೆ. ಪ್ರಕೃತ ದ್ಯುಭ್ವಾದ್ಯಾಯತನನಾದವನು ಮಹಾವಿಷ್ಣುವೇ ಆಗಿದ್ದಾನೆನ್ನಲು ಉಳಿದೆಲ್ಲಾ ಲಿಂಗಗಳನ್ನು ಬಿಟ್ಟು, ಆತ್ಮಶಬ್ದವೆಂಬ ನಾಮವನ್ನೇ ಹೇತುವನ್ನಾಗಿ ಹೇಳುತ್ತಿದ್ದಾರೆ. ಈ ಆತ್ಮಶಬ್ದವು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಕೂಡ ಇರಲು ಸಾಧ್ಯವಿಲ್ಲವಾದ್ದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗುತ್ತಾನೆ ಎಂಬುದು ಸೂತ್ರಕಾರರ ಅಭಿಪ್ರಾಯ.

ಸೂತ್ರದಲ್ಲಿ 'ಸ್ವಶಬ್ದಾತ್' ಎಂದು ಹೇಳದೆ, 'ಆತ್ಮಶಬ್ದಾತ್' ಎಂದು ಹೇಳಿದರೆ ಆತ್ಮಶಬ್ದವೂ ಕೂಡ ವಿಷ್ಣುಪರವಾಗಿದೆ ಎಂಬುದನ್ನು ಪ್ರತ್ಯೇಕವಾಗಿ ಸಮರ್ಥನೆ ಮಾಡಬೇಕಾಗುತ್ತದೆ. 'ತಚ್ಛಬ್ದಾತ್' ಎಂದು ಹೇಳಿದರೆ ಶಬ್ದವಿಶೇಷಣ ಪ್ರತೀತಿಯು ಉಂಟಾಗುವುದಿಲ್ಲ. ಆದ್ದರಿಂದ ಆತ್ಮಶಬ್ದವು ವಿಷ್ಣುಪರವಾಗಿದೆ ಎಂದೂ ಕೂಡ ತಿಳಿಯಬೇಕು. ಶಬ್ದವಿಶೇಷದ ಪ್ರತೀತಿಯೂ ಉಂಟಾಗಬೇಕು. ಈ ಎರಡರ ಲಾಭಕ್ಕಾಗಿ ಸೂತ್ರಕಾರರು 'ಸ್ವಶಬ್ದಾತ್' ಎಂದು ಹೇಳಿರುತ್ತಾರೆ. 'ಸ್ವಸ್ಯ ಶಬ್ದಃ ಸ್ವಶಬ್ದಃ' ಎಂಬ ವಿಗ್ರಹವನ್ನು ಆಶ್ರಯಿಸಿದಾಗ ಆತ್ಮಶಬ್ದವು ವಿಷ್ಣುವಿನ ಅಸಾಧಾರಣಶಬ್ದವಾಗಿದೆ ಎಂಬುದು ಸ್ಪಷ್ಟವಾಗಿದೆ. ಈ ಅಭಿಪ್ರಾಯದಿಂದಲೇ ಪಂಡಿತಾಚಾರ್ಯರು 'ವಿಷ್ಣೋಃ ಸ್ವರೂಪಸ್ಯೈವ ಸಾಕ್ಷಾದ್ವಾಚಕೋ ಹ್ಯಯಮಾತ್ಮಶಬ್ದಃ' ವಿಷ್ಣುವಿನ ಸ್ವರೂಪವನ್ನೇ ನೇರವಾಗಿ ಆತ್ಮಶಬ್ದವು ಪ್ರತಿಪಾದನೆ ಮಾಡುತ್ತದೆ ಎಂದು ಹೇಳಿರುತ್ತಾರೆ.

### ಆತ್ಮಶಬ್ದದ ಮುಖ್ಯಾರ್ಥ ವಿಷ್ಣುವೇ ಏಕೆ ?

**तत्वप्रदीपः – मुक्तोपसृप्यव्यदेशात् ।। 'अमृतस्यैष सेतुः' इति मुक्तस्याऽश्रयत्वेनोपसृप्यत्वव्यपदेशाच्च विष्णुरेवात्रोच्यते । परायणं पराणां मुक्तानामयनम् ।।**

'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯು ಮುಕ್ತರಿಗೆ ಮಹಾವಿಷ್ಣುವೇ ಆಶ್ರಯನಾಗಿದ್ದಾನೆಂದು ಹೇಳುತ್ತಿದೆ. ಆದ್ದರಿಂದ ವಿಷ್ಣುವೇ ಆತ್ಮಶಬ್ದದ ಮುಖ್ಯಾರ್ಥನಾಗುತ್ತಾನೆ. 'ಪರಾಯಣಂ' ಎಂಬ ಶಬ್ದಕ್ಕೆ ಮುಕ್ತರಿಗೆ ಆಶ್ರಯನಾದವನು ಎಂದರ್ಥ.

ವಿಶೇಷವಿಚಾರ - 'ಅಮೃತಸ್ಯೈಷ ಸೇತುಃ' ಎಂಬುದಾಗಿ ಮುಕ್ತೋಪಸೃಪ್ಯತ್ವವನ್ನು ಹೇಳಿರುವುದರಿಂದ ಮಹಾವಿಷ್ಣುವೇ ಆತ್ಮಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ ಎಂಬುದು ಸೂತ್ರದ ಮೊದಲನೆಯ ಅರ್ಥ.

ಮುಕ್ತೋಪಸೃಪ್ಯತ್ವವನ್ನು ಹೇಳಿದ ಮಾತ್ರಕ್ಕೆ ಮಹಾವಿಷ್ಣು ಏಕೆ ಆತ್ಮಶಬ್ದದಿಂದ ಪ್ರತಿಪಾದ್ಯನಾಗಬೇಕು ? ಎಂಬ ಪ್ರಶ್ನೆಗೂ ಕೂಡ ಇದೇ ಸೂತ್ರವು ಉತ್ತರಿಸುತ್ತಿದೆ. 'ಬ್ರಹ್ಮಜೀವಾತ್ಮೋಽಪಿ ಪರಂ' ಇತ್ಯಾದಿಯಾಗಿ ತೈತ್ತಿರೀಯಶ್ರುತಿಯು ವಿಷ್ಣುವೇ ಮುಕ್ತೋಪಸೃಪ್ಯನಾಗಿದ್ದಾನೆಂದು ಹೇಳುತ್ತಿದೆ. ಆದ್ದರಿಂದ ಇವನೇ ಆತ್ಮಶಬ್ದ ಪ್ರತಿಪಾದ್ಯನಾಗುತ್ತಾನೆ. ಇದು ಸೂತ್ರದ ಎರಡನೆಯ ಅರ್ಥ.

'ಉಪಸೃಪ್ಯ' ಶಬ್ದಕ್ಕೆ ಎರಡು ಬಗೆಯ ಅರ್ಥವನ್ನು ಭಾಷ್ಯದ ಮಾತುಗಳಿಂದ ತಿಳಿಯಬೇಕು. ೧. ಭೂಮಿಯಲ್ಲೇ ಎತ್ತರವಿರುವ ಶ್ವೇತದ್ವೀಪಕ್ಕೆ ಯಾವ ಯೋಗಿಯು ಹೋಗುವುದಿಲ್ಲವೋ, ಅವನು ಮುಕ್ತನಾಗುವುದಿಲ್ಲ ಎಂದು ಆದಿತ್ಯಪುರಾಣವು ಹೇಳುತ್ತಿದೆ. ಈಗ ಉಪಶಬ್ದಕ್ಕೆ 'ಎತ್ತರ' ಎಂಬರ್ಥವನ್ನು ವಿವಕ್ಷಿಸಬೇಕು.

ಶ್ವೇತದ್ವೀಪಕ್ಕೆ ತೆರಳಿದ ಅನಂತರ ಮುಕ್ತನು 'ಉಪಸೃಪ್ಯನ' ಮಾಡುತ್ತಾನೆ ಎಂದರೆ 'ಪರಮಾತ್ಮನ ಸಮೀಪಕ್ಕೆ ಹೋಗುತ್ತಾನೆ' ಎಂದರ್ಥ. ಈಗ ಉಪಶಬ್ದಕ್ಕೆ 'ಹತ್ತಿರ' ಎಂದರ್ಥ. ಹೀಗೆ ಉಪಸೃಪ್ಯಶಬ್ದಕ್ಕೆ ಎರಡು ಅರ್ಥಗಳನ್ನು ತಿಳಿಯಬೇಕು.

ಸ್ವರ್ಗಾದಿ ಲೋಕಗಳಿಗೆ ಆಶ್ರಯನಾದವನು 'ಆತ್ಮಾ' ಎಂದು ಉಪನಿಷತ್ತಿನಲ್ಲಿ ಹೇಳುತ್ತಿದೆ. ಆತ್ಮಶಬ್ದಕ್ಕೆ ಮುಖ್ಯಾರ್ಥ ವಿಷ್ಣುವಾದರೂ ಕೂಡ ಜೀವಾದಿಗಳು ಅಮುಖ್ಯಾರ್ಥರಾಗುತ್ತಾರೆ. ಆದ್ದರಿಂದ ಹಿಂದಿನ ಸೂತ್ರದ ಪೂರ್ವಪಕ್ಷದ ಯುಕ್ತಿಯ ಆಧಾರದಿಂದ ಬೇರೆ ಜೀವರೂ ಕೂಡ ಲೋಕಕ್ಕೆ ಆಶ್ರಯರಾಗಬಹುದು. ಈ ಪ್ರಶ್ನೆಗೆ 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರವು ಉತ್ತರವನ್ನು ನೀಡುತ್ತಿದೆ. ಆಥರ್ವಣಶ್ರುತಿಯಲ್ಲಿ ಲೋಕಕ್ಕೆ ಆಶ್ರಯನಾದ ಆತ್ಮನು ಮುಕ್ತರಿಂದ ಗಮ್ಯನಾಗಿದ್ದಾನೆಂದು ಹೇಳಲಾಗಿದೆ. ಇದು ವಿಷ್ಣುವಿನ ಧರ್ಮವೇ ಹೊರತು, ಜೀವಾದಿಗಳ ಧರ್ಮವಲ್ಲ. ಈ ಕಾರಣದಿಂದ ಆತ್ಮಶಬ್ದಕ್ಕೆ ಅಮುಖ್ಯಾರ್ಥ ಮಾಡಬಾರದೆಂಬುದು ಈ ಸೂತ್ರದ ಹೃದಯ.

ಗಮನಿಸ ಬೇಕಾದ ವಿಚಾರ - ಶ್ರೀಮದಾಚಾರ್ಯರು 'ಬಹುನಾಽತ್ರ ಕಿಮುಕ್ತೇನ' ಇಲ್ಲಿ ಆದಿತ್ಯಪುರಾಣದ ವಚನವನ್ನು ಉಲ್ಲೇಖಿಸಿದ್ದಾರೆ. ಸಾಮಾನ್ಯವಾಗಿ ಆಚಾರ್ಯರು ಮಹಾಪುರಾಣಗಳನ್ನು ಉಲ್ಲೇಖಿಸುತ್ತಾರೆ. ಇಲ್ಲಿ ಉಪಪುರಾಣವಾದ ಆದಿತ್ಯಪುರಾಣವನ್ನು

ಉಲ್ಲೇಖಿಸಿರುವುದು ಗಮನಾರ್ಹವಿಷಯ. ಮತ್ತು 'ಧ್ಯೇಯಃ ಸದಾ' ಇತ್ಯಾದಿಯಾಗಿ ನರಸಿಂಹಪುರಾಣದ ಮಾತನ್ನು ಮತ್ತೊಂದು ಕಡೆ ಉಲ್ಲೇಖಿಸಿದ್ದಾರೆ. ಅದೂ ಕೂಡ ಉಪಪುರಾಣವಾಗಿದೆ. ಬಹುಷಃ ಆದಿತ್ಯಪುರಾಣ ಹಾಗೂ ನರಸಿಂಹ ಪುರಾಣಗಳೆಂಬ ಎರಡು ಉಪಪುರಾಣಗಳನ್ನು ಬಿಟ್ಟು, ಬೇರೆ ಉಪಪುರಾಣಗಳನ್ನು ಉಲ್ಲೇಖಿಸಿರುವುದು ಕಾಣಸುತ್ತಿಲ್ಲ.

ಪಾಠಾಂತರ ಬಗ್ಗೆ - 'ಏಷಃ ಶಾಸ್ತ್ರವಿನಿರ್ಣಯಃ' ಎಂಬುದು ಪ್ರಚಲಿತ ಪಾಠ. ಆದರೆ 'ಏಷಃ ಶಾಸ್ತ್ರಸ್ಯ ನಿರ್ಣಯಃ' ಎಂಬುದು ಪ್ರಾಚೀನಪಾಠ. 'ಶಾಸ್ತ್ರಸ್ಯ ನಿರ್ಣಯಃ' ಎಂಬ ಪ್ರಚಲಿತಪಾಠಕ್ಕೆ ಉಪೋದ್ಬಲಕವಾಗಿ ಯಾವುದೇ ವ್ಯಾಖ್ಯಾನಗಳಲ್ಲಿ ಪ್ರತೀಕಗ್ರಹಣವು ಕಾಣಸುತ್ತಿಲ್ಲ. ಆದ್ದರಿಂದ 'ಶಾಸ್ತ್ರಸ್ಯ ನಿರ್ಣಯಃ' ಎಂಬ ಪ್ರಾಚೀನಪಾಠವನ್ನು ಅನುಸುರಿಸವುದು ಸೂಕ್ತವಾಗಿದೆ.

### ಶೈವರು ಅನುಮಾನ ಮಾಡುವರು

**तत्वप्रदीपः – नाऽनुमानमतच्छब्दात् ।। 'आनुमानम्' अनुमानात्मकागमपरिकल्पितं रुद्राख्यं ब्रह्मात्र न वाच्यम् । शैवागमे क्वचिदुक्तसाधनानुष्ठानेन यथोक्तदृष्टफलोदयोपलम्भात्तद्दृष्टान्तेनेशवाक्यत्वहेतुनाऽन्यत्रापि प्रामाण्यमनुमीयते।**

'ಆನುಮಾನಮ್' ಅನುಮಾನ ಸ್ವರೂಪವಾದ ಶೈವಾಗಮದಿಂದ ಪರಿಕಲ್ಪಿತವಾದ ರುದ್ರ ಎಂಬ ಬ್ರಹ್ಮನು ಪ್ರಕೃತ ಪ್ರತಿಪಾದ್ಯನಾಗುವುದಿಲ್ಲ. ಏಕೆಂದರೆ ಶೈವಾಗಮದಲ್ಲಿ ಕೆಲವು ಮಾತುಗಳಂತೆ ಸಾಧನೆಯನ್ನು ಮಾಡಿದಾಗ ಫಲ ದೊರೆಯುವುದು ಕಾಣಸುತ್ತಿದೆ. ಇದರ ದೃಷ್ಟಾಂತದಿಂದ ಮತ್ತು ಈಶವಾಕ್ಯತ್ವ ಎಂಬ ಹೇತುವಿನಿಂದ ಬೇರೆ ಶೈವಪುರಾಣದಲ್ಲಿರುವ ಬೇರೆ ವಾಕ್ಯಗಳೂ ಕೂಡ ಪ್ರಮಾಣವಾಗಿವೆ ಎಂದು ಶೈವರು ಅನುಮಾನ ಮಾಡುತ್ತಾರೆ.

### ಶೈವಾಗಮವೇ ಅನುಮಾನಾತ್ಮಕ

**तत्वप्रदीपः – एवमनुमानादाप्तप्रामाण्यस्तदागमः 'अनुमानात्मकः' उच्यते।**

ಹೀಗೆ ಅನುಮಾನದಿಂದ ಶೈವಾಗಮವನ್ನು ಆಪ್ತವಾಕ್ಯವೆಂಬುದಾಗಿ ಪ್ರಮಾಣವೆನ್ನುತ್ತಾರೆ. ಆದ್ದರಿಂದ ಶೈವಾಗಮವು ಅನುಮಾನಾತ್ಮಕವಾಗಿದೆ ಎಂಬುದು ಭಾಷ್ಯಕಾರರ ಅಭಿಪ್ರಾಯ.

### ಶೈವಾಗಮವು ಅಪ್ರಮಾಣ

**तत्वप्रदीपः – न च तेन प्रामाण्यं साधयितुं शक्यते । तेनैव यथोक्तदृष्टफलव्यभिचारिणा वाक्यान्तरेण कृत्स्नस्याप्यप्रामाण्यसाधनसौकर्यात्।**

ಕೆಲವು ವಾಕ್ಯಗಳು ದೃಷ್ಟಫಲಕವಾಗಿರುವುದರಿಂದ ಶೈವಾಗಮಕ್ಕೆ ಪ್ರಾಮಾಣ್ಯವನ್ನು ಸಾಧಿಸಬಹುದಲ್ಲವೇ? ಎಂದು ಪ್ರಶ್ನಿಸಲಾಗದು. ಏಕೆಂದರೆ ಅಂಥದ್ದೇ ಕೆಲವು ವಾಕ್ಯಗಳಿಂದ ದೃಷ್ಟಫಲವು ವ್ಯಭಿಚರಿತವಾಗಿರುವುದು ಕಂಡಿದೆ. ಇಂಥ ವಾಕ್ಯಗಳ ದೃಷ್ಟಾಂತದಿಂದ ಬೇರೆ ವಾಕ್ಯಗಳಿಗೂ ಅಪ್ರಾಮಾಣ್ಯವನ್ನು ಸುಲಭವಾಗಿ ಸಾಧನೆ ಮಾಡಬಹುದು.

### ಪಶುಪತಿ ನಿರ್ದುಷ್ಟನಲ್ಲ

**तत्वप्रदीपः – अत एव 'परिकल्पितरुद्रः' इति समगिरत भगवान् । विस्पष्टमाचष्ट चानुव्याख्याने ''तद्वद्व्यभिचारिणा । अप्रामाण्यानुमा च स्यात्'' इति । स्वयं च भगवत्तमः पशुपतेरसामञ्जस्यमसर्वज्ञत्वादिकं च सूत्रयिष्यति ।**

ಆದ್ದರಿಂದಲೇ ಭಾಷ್ಯಕಾರರು 'ಪರಿಕಲ್ಪಿತರುದ್ರಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಅತ್ಯಂತ ಸ್ಪಷ್ಟವಾಗಿ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿರುತ್ತಾರೆ - 'ತದ್ವದ್ವ್ಯಭಿಚಾರಿಣಾ । ಅಪ್ರಾಮಾಣ್ಯಾನುಮಾ ಚ ಸ್ಯಾತ್' ಶೈವಾಗಮದ ಕೆಲವು ವಾಕ್ಯಗಳು ವ್ಯಭಿಚರಿತ-ವಾಗಿರುವುದರಿಂದ ಅಪ್ರಾಮಾಣ್ಯವನ್ನು ಅನುಮಾನ ಮಾಡಬಹುದು ಎಂದು. ಸ್ವತಃ ಭಗವತ್ತಮರಾದ ಸೂತ್ರಕಾರರೂ ಕೂಡ ಪಶುಪತಿಗೆ ನಿರ್ದುಷ್ಟತ್ವವಿಲ್ಲವೆಂದು ಸಮರ್ಥಿಸಿ, ಅಸರ್ವಜ್ಞತ್ವಾದಿಗಳನ್ನು ಹೇಳುವವರಿದ್ದಾರೆ.

### ಪರೋವರೀಯಾನ್ ಮಹಾವಿಷ್ಣು

**तत्वप्रदीपः – 'परः परो वरीयान्' परा वाग्देवी, परतः परो विरिञ्चः, ततोऽपि वरा प्रकृतिः, वरीयान् विष्णुः ।। अत्र तरबीयसुनौ तमबिष्ठनर्थौ ।**

'ಪರಃ ಪರೋ ವರೀಯಾನ್' ಎಂಬ ಶ್ರುತಿಯಲ್ಲಿ 'ಪರಾ ಎಂಬ ಶಬ್ದಕ್ಕೆ ವಾಗಭಿಮಾನಿಯಾದ 'ಸರಸ್ವತಿ' ಎಂದರ್ಥ. ಅವಳಿಗಿಂತ ಶ್ರೇಷ್ಠರಾದವರು ಚತುರ್ಮುಖಬ್ರಹ್ಮ, ಅವರಿಗಿಂತ ಶ್ರೇಷ್ಠರಾದವರು ಪ್ರಕೃತಿ, ಪ್ರಕೃತಿಗಿಂತ ಶ್ರೇಷ್ಠನಾದವನು ಮಹಾವಿಷ್ಣು ಎಂಬುದು ಇದರ ಅಭಿಪ್ರಾಯ. ಇಲ್ಲಿ 'ತರಪ್' ಮತ್ತು 'ಈಯಸೂನ್' ಪ್ರತ್ಯಯಗಳು ತರಪ್ ಹಾಗೂ ಇಷ್ಠನ್ ಪ್ರತ್ಯಯಗಳ ಅರ್ಥಗಳಲ್ಲಿ ಪ್ರಯೋಗಿಸಲಾಗಿದೆ.

ಶರ್ವಃ ಶಂರೋಧನಾದ್ ಹರಿಃ

**तत्वप्रदीपः – ''यत्रोभयोः प्रयोगो न तत्रैकार्थौ तरसमापौ'' इति च शब्दनिर्णये । 'शर्वश्शंरोधनाद्धरिः मुक्तिपर्यन्तं स्वरूपभूतमपि शं रुद्ध्वा वर्तते हि ।। ।।**

'ಯತ್ರೋಭಯೋಃ ಪ್ರಯೋಗಃ ನ ತತ್ರೈಕಾರ್ಥೌ ತರಪ್ತಮಾಪೌ' ಎಂದು ಶಬ್ದನಿರ್ಣಯವು ಇದನ್ನು ಸ್ಪಷ್ಟಪಡಿಸಿದೆ. 'ಶರ್ವಃ ಶಂರೋಧನಾದ್ಧರಿಃ' ಎಂಬ ಪ್ರಮಾಣಶ್ಲೋಕವು ಮುಕ್ತಿಯ ತನಕ ಮೋಕ್ಷಯೋಗ್ಯಜೀವರ ಸ್ವರೂಪಭೂತವಾದ ಸುಖವನ್ನು ಮೋಕ್ಷಪರ್ಯಂತವಾಗಿ ಅನುಭವಕ್ಕೆ ಗೋಚರವಾಗದಂತೆ ತಡೆಹಿಡಿಯುವುದರಿಂದ ಮಹಾವಿಷ್ಣು 'ಶರ್ವ' ಎಂದು ಕರೆಸಿಕೊಳ್ಳುತ್ತಾನೆ ಎಂದರ್ಥ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ತೃತೀಯಪಾದ ಪ್ರತಿಪಾದ್ಯವಾದ ಪ್ರಮೇಯ

**तत्वप्रकाशिका – ।। द्युभ्वाद्यायतनं स्वशब्दात् ।।**

**एतत्पादप्रतिपाद्यं दर्शयति – तत्र चेति ।। हरौ तदितरत्र च श्रुत्यादि-प्रसिद्धनामलिङ्गात्मकशब्दानां विष्ण्वेकवाचित्वं प्रबलहेतुभिः प्रतिपादयत्य-स्मिन्पादे सूत्रकार इत्यर्थः ।**

ಈ ಪಾದದಲ್ಲಿ ಪ್ರತಿಪಾದ್ಯವಾದ ವಿಷಯವನ್ನು 'ತತ್ರ ಚ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಶ್ರೀಹರಿಯಲ್ಲಿ ಮತ್ತು ಬೇರೆ ಕಡೆ ಶ್ರುತಿ ಮೊದಲಾದ ಪ್ರಮಾಣಗಳಿಂದ ಪ್ರಸಿದ್ಧವಾಗಿರುವ ನಾಮಾತ್ಮಕಶಬ್ದಗಳನ್ನು ಹಾಗೂ ಲಿಂಗಾತ್ಮಕಶಬ್ದಗಳನ್ನು ಕೇವಲ ವಿಷ್ಣುಪರವಾಗಿ ಅನೇಕ ಪ್ರಬಲವಾದ ಹೇತುಗಳಿಂದ ಈ ಪಾದದಲ್ಲಿ ಸೂತ್ರಕಾರರು ಪ್ರತಿಪಾದಿಸುತ್ತಿದ್ದಾರೆ.

ಭಾಷ್ಯದಲ್ಲಿ 'ಪ್ರಾಯೇಣ' ಎಂದೇಕೆ ಹೇಳಿರುವರು ?

**तत्वप्रकाशिका – चशब्दौ मिथःसमुच्चयार्थौ । देवताद्यधिकरणव्यावृत्त्यर्थम् – प्रायेणेति ।।**

'ತತ್ರ ಚ ಅನ್ಯತ್ರ ಚ' ಎಂಬಲ್ಲಿರುವ ಎರಡು ಚಶಬ್ದಗಳು ಪರಸ್ಪರ ಸಮುಚ್ಚಯವನ್ನು ತೋರಿಸುತ್ತಿವೆ. ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳು ಈ ನಿಯಮಕ್ಕೆ ಸಂಬಂಧಪಟ್ಟಿಲ್ಲವೆಂದು ತಿಳಿಸುವುದಕ್ಕಾಗಿ ಭಾಷ್ಯದಲ್ಲಿ 'ಪ್ರಾಯೇಣ' ಎಂದು ಹೇಳಿದ್ದಾರೆ.

ಅಧಿಕರಣದ ವಿಷಯವಾಕ್ಯ ಯಾವುದು ?

**तत्वप्रकाशिका – (अ)तत्र 'रुद्रो वाव लोकाधारः' 'वायुना वै गौतमसूत्रेणायं च लोकः परश्च लोकः सर्वाणि भूतानि सन्दृब्धानि भवन्ति' 'आकाश एव तदोतं च प्रोतं च' 'सर्वे वा एते प्राणाश्च प्राणिनश्च देवाश्च दिव्यानि च लोकाश्च लोकिनश्च अलोकाश्चालोकिनश्च विष्णावेवोताश्च प्रोताश्च' इत्यादिनोभयत्र प्रसिद्धद्युभ्वाद्यायतनत्वलिङ्गस्य भगवति समन्वयप्रतिपादनादस्ति शास्त्रादिसङ्गतिः ।**

ಈ ಅಧಿಕರಣದ ವಿಷಯವಾಕ್ಯ ಹೀಗಿದೆ ''ರುದ್ರೋ ವಾವ ಲೋಕಾಧಾರಃ' ರುದ್ರನೇ ಸರ್ವಲೋಕಗಳಿಗೆ ಆಶ್ರಯನಾಗಿದ್ದಾನೆಂದು, ಮತ್ತು 'ವಾಯುನಾ ವೈ ಗೌತಮ ಸೂತ್ರೇಣಾಯಂಚ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ' ಯಾರನ್ನು ಆಶ್ರಯಿಸಿ ಸಕಲ ಜಗತ್ತು ನಿಂತಿದೆಯೋ ಅಂತಹ ವಾಯುವೇ ಈ ಲೋಕಕ್ಕೂ ಮತ್ತು ಪರಲೋಕಕ್ಕೂ, ಸಕಲಭೂತಗಳಿಗೂ ಆಶ್ರಯನಾಗಿದ್ದಾನೆ. ಮತ್ತು 'ಆಕಾಶ ಏವ ತದೋತಂ ಚ

ಪ್ರೋತಂ ಚ' 'ಆಕಾಶದಲ್ಲಿಯೇ ಸಕಲ ಪ್ರಪಂಚವೂ ಓತಪ್ರೋತವಾಗಿ ಸೇರಿಕೊಂಡಿದೆ' ಎಂದು ಮತ್ತು 'ಸರ್ವೇ ವಾ ಏತೇ ಪ್ರಾಣಾಶ್ಚ ಪ್ರಾಣಿನಶ್ಚ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚ ಅಲೋಕಾಶ್ಚ ಅಲೋಕಿನಶ್ಚ ವಿಷ್ಣಾವೇವ ಓತಾಶ್ಚ ಪ್ರೋತಾಶ್ಚ' ಸಕಲ ಇಂದ್ರಿಯಗಳು, ಪ್ರಾಣಿಗಳು, ದೇವತೆಗಳು, ಸ್ವರ್ಗದಲ್ಲಿರುವ ಸಕಲ ಪದಾರ್ಥಗಳು, ಭೂರ್ಭುವಾದಿ ಲೋಕಗಳು ಹಾಗೂ ಅಲ್ಲಿರುವ ಅಭಿಮಾನಿ ದೇವತೆಗಳು, ಲೋಕಾಲೋಕಗಳು ಅಲ್ಲಿರುವ ಮುಕ್ತಜೀವರುಗಳು ಹೀಗೆ ಸಕಲ ಪದಾರ್ಥಗಳೂ ವಿಷ್ಣುವಿನಲ್ಲಿ ಓತಪ್ರೋತವಾಗಿ ನೆಲೆಸಿವೆ ಇವೇ ಮೊದಲಾದ ಶ್ರುತಿಗಳಿಂದ ದ್ಯುಭ್ವಾದ್ಯಾಯತನತ್ವಲಿಂಗವು ಉಭಯತ್ರಪ್ರಸಿದ್ಧವಾಗಿದೆ. ಇಂತಹ ದ್ಯುಭ್ವಾದ್ಯಾಯತನತ್ವ-ಲಿಂಗವನ್ನು ಈ ಅಧಿಕರಣದಲ್ಲಿ ವಿಷ್ಣುವಿನಲ್ಲೇ ಸಮನ್ವಯಮಾಡಲಾಗಿದೆ. ಆದ್ದರಿಂದ ಈ ಅಧಿಕರಣಕ್ಕೆ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

### ಶ್ರುತ್ಯಾದಿಸಂಗತಿಗಳು

**ತತ್ವಪ್ರಕಾಶಿಕಾ – श्रुत्यादिसङ्गतिं विषयवाक्यमुदाहृत्य विषयसंशय-सयुक्तिकपूर्वपक्षान् दर्शयति – विष्णोरिति ।।**

ಇನ್ನು ಶ್ರುತಿಸಂಗತಿ, ಅಧಿಕರಣಸಂಗತಿ ಹಾಗೂ ವಿಷಯವಾಕ್ಯ ಇವುಗಳನ್ನು ತೋರಿಸುತ್ತಾ ವಿಷಯ, ಸಂಶಯ ಹಾಗೂ ಯುಕ್ತಿಬದ್ಧವಾದ ಪೂರ್ವಪಕ್ಷಗಳನ್ನು ''ವಿಷ್ಣೋಃ'' ಎಂಬ ಭಾಷ್ಯದಿಂದ ತೋರಿಸುತ್ತಿದ್ದಾರೆ.

### ದ್ಯುಭ್ವಾದ್ಯಾಯತನನೇ ಪರವಿದ್ಯೆಗೆ ವಿಷಯ

**ತತ್ವಪ್ರಕಾಶಿಕಾ – अदृश्यत्वादिगुणकाक्षरस्य विष्णोः परविद्याविषयत्व-मुक्तम् । तत्परविद्याविषयत्वमाथर्वणे यस्मिन्द्यौरित्युक्तस्य द्युभ्वाद्यायतनस्योच्यते। 'तमेवैकं जानथ आत्मानमन्या वाचो विमुञ्चथामृतस्यैष सेतुः' इति ।**

ಹಿಂದಿನ ಪಾದದಲ್ಲಿರುವ ಅದೃಶ್ಯತ್ವಾಧಿಕರಣದಲ್ಲಿ ಅದೃಶ್ಯತ್ವ ಮೊದಲಾದ ಗುಣವುಳ್ಳ ಅಕ್ಷರನಾಮಕನಾದ ವಿಷ್ಣುವಿಗೆ ಪರವಿದ್ಯಾವಿಷಯತ್ವವನ್ನು ಹೇಳಲಾಗಿದೆ. ಆದರೆ ಇದೇ ಪರವಿದ್ಯಾ ವಿಷಯತ್ವವನ್ನು ಆಥರ್ವಣೋಪನಿಷತ್ತು 'ಯಸ್ಮಿನ್ ದ್ಯೌಃ' ಎಂಬ ವಾಕ್ಯದಿಂದ

ಪ್ರತಿಪಾದ್ಯನಾದ ದ್ಯುಭ್ವಾದ್ಯಾಯತನನಿಗೆ ಹೇಳುತ್ತಿದೆ. 'ತಮೇವೈಕಂ ಜಾನಥ ಆತ್ಮಾನಮನ್ಯಾವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ' 'ವಿಷ್ಣುವನ್ನೇ ಮುಖ್ಯವಾಗಿ ತಿಳಿಯಿರಿ. ಉಳಿದ ವಿಷಯಗಳನ್ನು ಬಿಡಿರಿ. ಅವನೇ ಮುಕ್ತರಿಗೆಲ್ಲಾ ಆಧಾರನಾಗಿದ್ದಾನೆ' ಇತ್ಯಾದಿವಾಕ್ಯದಿಂದ ದ್ಯುಭ್ವಾದ್ಯಾಯತನನಲ್ಲಿ ಪರವಿದ್ಯಾ ವಿಷಯತ್ವವು ಹೇಳಲ್ಪಟ್ಟಿದೆ.

### ದ್ಯುಭ್ವಾದ್ಯಾಯತನನು ಯಾರು ?

**ತत्वप्रकाशिका – स च यदि विष्णोरितरः स्यात्तदा परविद्याविषयत्वमन्यस्य प्रसज्येतेत्यवश्यं निर्णयः । तद् द्युभ्वाद्यायतनत्वं विषयः ।**

ಈ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಒಂದುವೇಳೆ ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಬರುವುದಾದರೆ ಪರವಿದ್ಯಾವಿಷಯತ್ವ ಎಂಬ ಧರ್ಮವೂ ಸಹ ಬೇರೆಯವರಲ್ಲೇ ಬರಬೇಕಾಗುತ್ತದೆ. ಆದ್ದರಿಂದ ದ್ಯುಭ್ವಾದ್ಯಾಯತನತ್ವ ಎಂಬ ಲಿಂಗವು ಯಾರಲ್ಲಿದೆ ಎಂದು ಅವಶ್ಯವಾಗಿ ನಿರ್ಣಯ ಮಾಡಬೇಕು. ಆದ್ದರಿಂದ ಈ ಅಧಿಕರಣಕ್ಕೆ ಅಂತಹ ದ್ಯುಭ್ವಾದ್ಯಾಯತನತ್ವವೇ ವಿಷಯವಾಗಿದೆ.

### ಸಂದೇಹ ಹಾಗೂ ಪೂರ್ವಪಕ್ಷ

**तत्वप्रकाशिका – तत्किं विष्णोरन्येषां वेति सन्देहः । उक्तसाधारण्यमेव सन्देहबीजम् । द्युभ्वाद्यायतनत्वं रुद्रप्रधानजीववायूनामिति पूर्वः पक्षः ।**

ಈ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿ ಮಾತ್ರವಿದೆಯೋ ಅಥವಾ ಬೇರೆಯವರಲ್ಲಿಯೂ ಇದೆಯೋ ಎಂದು ಸಂಶಯ. ಈ ಹಿಂದೆ ಹೇಳಿದ ಎರಡೂ ಪ್ರಕಾರದ ಸಾಧಾರಣವಾದ ಶ್ರುತಿಗಳೇ ಸಂದೇಹಕ್ಕೆ ಕಾರಣಗಳಾಗಿವೆ. ದ್ಯುಭ್ವಾದ್ಯಾಯತನತ್ವವು ರುದ್ರ, ಪ್ರಧಾನ, ಜೀವ, ಹಾಗೂ ವಾಯು ಮೊದಲಾದವರಲ್ಲಿ ಯಾರಲ್ಲಾದರೂ ಬರಬಹುದೆಂದು ಪೂರ್ವಪಕ್ಷ.

### ರುದ್ರನೇ ದ್ಯುಭ್ವಾದ್ಯಾಯತನನೆಂದು ಪೂರ್ವಪಕ್ಷ

**तत्वप्रकाशिका – अत्रोक्तप्राणाधारत्वस्य 'प्राणानां ग्रन्थिरसि' 'प्राणेश्वरः' इत्यादिना रुद्रे प्रतीतेः । तथा द्युभ्वन्तरिक्षायतनत्वस्य च 'रुद्रो वाव लोकाधारः' इति तस्मिन्नुक्तत्वात् ।**

ಈ ಅಧಿಕರಣದ ವಿಷಯವಾಕ್ಯದಲ್ಲಿ ಕೇಳಿಸುತ್ತಿರುವ ಪ್ರಾಣಾಧಾರತ್ವ ಎಂಬ ಧರ್ಮವು 'ಪ್ರಾಣಾನಾಂ ಗ್ರಂಥಿರಸಿ' ಎಂಬ ಶ್ರುತಿಯಿಂದ ಮತ್ತು 'ಪ್ರಾಣೇಶ್ವರಃ' ಎಂಬ ಶ್ರುತಿಯಿಂದಲೂ ರುದ್ರನಲ್ಲೇ ಪ್ರತೀತವಾಗುತ್ತಿದೆ. ಇದರಂತೆ ದ್ಯುಲೋಕ, ಭೂಲೋಕ, ಅಂತರಿಕ್ಷ ಮೊದಲಾದವುಗಳಿಗೆ ಆಶ್ರಯನಾದವನೂ ಸಹ ರುದ್ರನೇ ಆಗಿದ್ದಾನೆಂದು "ರುದ್ರೋ ವಾವ ಲೋಕಾಧಾರಃ" ಎಂಬ ಶ್ರುತಿಯಿಂದ ಸ್ಪಷ್ಟವಾಗುತ್ತದೆ.

### ಶ್ರುತಿಯಲ್ಲಿರುವ ರುದ್ರನ ಅಸಾಧಾರಣಲಿಂಗಗಳು

**तत्वप्रकाशिका – मनआयतनत्वं च तस्मिन् 'मनो वै रुद्र ओतं च प्रोतं च' इति प्रतीयते । न चैतच्छ्रुतीनां विष्णुविषयत्वम् । अन्तकः कृत्तिवासाः पिनाकीत्यादिरुद्रलिङ्गात् ।**

ಮತ್ತು ಮನಸ್ಸಿಗೆ ಆಶ್ರಯನಾದವನೂ ಸಹ ರುದ್ರನೇ ಆಗಿದ್ದಾನೆಂದು 'ಮನೋ ವೈ ರುದ್ರ ಓತಂ ಚ ಪ್ರೋತಂ ಚ' ಎಂಬ ಶ್ರುತಿಯಿಂದ ತಿಳಿಯುತ್ತದೆ. ಈ ಎಲ್ಲ ಶ್ರುತಿಗಳೂ ವಿಷ್ಣುವಿಷಯಕವಾಗಿದೆಯಲ್ಲವೇ ಎಂದು ಪ್ರಶ್ನಿಸಬಾರದು. ಏಕೆಂದರೆ ಈ ಶ್ರುತಿಗಳಲ್ಲಿ ಅಂತಕಃ, ಕೃತ್ತಿವಾಸಾಃ, ಪಿನಾಕೀ ಮೊದಲಾದ ರುದ್ರಲಿಂಗಗಳೇ ಕೇಳಿಸುತ್ತಿವೆ.

### ರುದ್ರನೇ ದ್ಯುಭ್ವಾದ್ಯಾಯತನನೆನಲು ಅನುಮಾನ

**तत्वप्रकाशिका – दृष्टफलविधायकरुद्रवाक्यदृष्टान्तेन तत्सर्वाश्रयत्व-प्रतिपादकवाक्यप्रामाण्यानुमानेन च तस्य सर्वाश्रयत्वसिद्धेः ।**

ರುದ್ರನೇ ದ್ಯುಭ್ವಾದ್ಯಾಯತನನಾಗಿದ್ದಾನೆ ಎಂಬ ವಿಷಯದಲ್ಲಿ ಅನುಮಾನವೂ ಸಹ ಪ್ರಮಾಣವಾಗಿದೆ. ರುದ್ರನನ್ನು ವರ್ಣಿಸುವ ಕೆಲವು ಶ್ರುತಿವಾಕ್ಯಗಳಿಂದ ದೃಷ್ಟಫಲವು ಸಿಗುತ್ತಿದೆ. ಇಂತಹ ದೃಷ್ಟಫಲವಿಧಾಯಕವಾದ ರುದ್ರಪರವಾಕ್ಯದ ದೃಷ್ಟಾಂತದಿಂದ ರುದ್ರನೇ ಸರ್ವಾಶ್ರಯ-ನಾಗಿದ್ದಾನೆಂದು ಪ್ರತಿಪಾದಿಸುವ ವಾಕ್ಯಕ್ಕೂ ಸಹ ಪ್ರಾಮಾಣ್ಯವನ್ನು ಸಮರ್ಥಿಸಲು ಬರುತ್ತದೆ. ಹೀಗೆ ಅನುಮಾನಪ್ರಮಾಣದಿಂದ ರುದ್ರನೇ ಸರ್ವಾಶ್ರಯನೆಂದು ಸಿದ್ಧನಾಗುತ್ತಾನೆ.

### ಜಡವಾದ ಪ್ರಕೃತಿ ದ್ಯುಭ್ವಾದ್ಯಾಯತನನೆಂದು ಮತ್ತೊಂದು ಪೂರ್ವಪಕ್ಷ

**तत्वप्रकाशिका – द्युभ्वादीनां प्रकृतिकार्यत्वात्तदाश्रयत्वं प्रकृतेर्युक्तम् । 'यद्भूतं च भवच्च भविष्यच्चेत्याचक्षते आकाश एव तदोतं च प्रोतं च' इति श्रुतेश्च पूर्ववत्प्रकृतेः सर्वाश्रयत्वाभिधायककापिलागमप्रामाण्यानुमानाच्च ।**

ಎರಡನೇ ಪೂರ್ವಪಕ್ಷ-- ಅಥವಾ ಜಡವಾದ ಪ್ರಕೃತಿಯೇ ದ್ಯುಭ್ವಾದ್ಯಾಯತನವಾಗಬಹುದು. ಏಕೆಂದರೆ, ದ್ಯುಲೋಕ, ಭೂಲೋಕ ಎಲ್ಲವೂ ಸಹ ಪ್ರಕೃತಿಯ ಕಾರ್ಯವಾಗಿವೆ. ಈ ಪದಾರ್ಥಗಳಿಗೆಲ್ಲ ಪ್ರಕೃತಿಯೇ ಆಶ್ರಯವಾಗುತ್ತದೆಂಬುದು ಸಮಂಜಸವಾಗಿದೆ. 'ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶ ಏವ ತದೋತಂ ಚ ಪ್ರೋತಂ ಚ' 'ಹಿಂದೆ ಹುಟ್ಟಿದ, ಈಗ ಹುಟ್ಟುತ್ತಿರುವ, ಮುಂದೆ ಹುಟ್ಟಲಿರುವ ಸಕಲಪದಾರ್ಥಗಳೂ ಆಕಾಶದಲ್ಲೇ ಅಂದರೆ ಪ್ರಕೃತಿಯಲ್ಲೇ ಓತಪ್ರೋತವಾಗಿ ಆಶ್ರಯಿಸಿವೆ' ಎಂಬ ಶ್ರುತಿಯ ಆಧಾರದಿಂದ ಪ್ರಕೃತಿಗೆ ಸರ್ವಾಶ್ರಯತ್ವವನ್ನು ಹೇಳಬಹುದು. ಅಥವಾ ರುದ್ರನ ವಿಷಯದಲ್ಲಿ ಅನುಮಾನಪ್ರಾಮಾಣ್ಯವನ್ನು ಹೇಳಿದಂತೆ ಪ್ರಕೃತಿಯ ವಿಷಯದಲ್ಲಿಯೂ ಅನುಮಾನಪ್ರಮಾಣವನ್ನು ಹೇಳಬಹುದು. ಪ್ರಕೃತಿಯನ್ನು ವರ್ಣಿಸುವ ಕೆಲವು ವಾಕ್ಯಗಳಿಗೆ ದೃಷ್ಟಫಲದ ಮೂಲಕವಾಗಿ ಪ್ರಾಮಾಣ್ಯವು ಕಂಡಿರುವುದರಿಂದ ಅದರ ದೃಷ್ಟಾಂತದಿಂದ ಪ್ರಕೃತಿಗೆ ಸರ್ವಾಶ್ರಯತ್ವವನ್ನು ಹೇಳುವ ಕಾಪಿಲಾಗಮಕ್ಕೂ ಸಹ ಪ್ರಾಮಾಣ್ಯವನ್ನು ಅನುಮಾನದಿಂದ ಸಾಧಿಸಬಹುದು. ಹೀಗೆ ಶ್ರುತಿ ಹಾಗೂ ಅನುಮಾನಗಳ ಪ್ರಮಾಣದ ಆಧಾರದಿಂದ ಪ್ರಕೃತಿಯು ದ್ಯುಭ್ವಾದ್ಯಾಯತನವಾಗಿದೆ ಎಂದು ಹೇಳಬಹುದು.

### ಜೀವನೂ ಸಹ ದ್ಯುಭ್ವಾದ್ಯಾಯತನನೆಂದು ಮೂರನೆಯ ಪೂರ್ವಪಕ್ಷ

**तत्वप्रकाशिका – 'अरा इव रथनाभौ संहता यत्र नाड्यः स एषोऽन्तश्चरते बहुधा जायमानः' इति द्युभ्वाद्यायतने जीवलिङ्गश्रवणाज्जीवस्य तद्युक्तम् । तस्य जीवत्वादेव प्राणित्वप्रसिद्धेश्च ।**

ಮೂರನೆಯ ಪೂರ್ವಪಕ್ಷ-- ಅಥವಾ ಜೀವನೂ ಸಹ ದ್ಯುಭ್ವಾದ್ಯಾಯತನನಾಗಬಹುದು. ಏಕೆಂದರೆ, 'ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ಸ ಏಷೋಽಂತಶ್ಚರತೇ ಬಹುಧಾ

ಜಾಯಮಾನಃ' 'ಯಾವ ರೀತಿಯಾಗಿ ರಥಚಕ್ರದಲ್ಲಿರುವ ರಂಧ್ರಗಳಲ್ಲಿ ಅರವು (ಚಕ್ರಕ್ಕೆ ಆಧಾರವಾಗಿರುವ ಅಚ್ಚು) ಜೋಡಿಸಲ್ಪಟ್ಟಿರುತ್ತದೋ ಆದೇ ರೀತಿಯಾಗಿ ಈ ದೇಹದಲ್ಲಿ ನಾಡಿಗಳು ಜೋಡಿಸಲ್ಪಟ್ಟಿರುತ್ತವೆ. ಮತ್ತು ಅನೇಕವಿಧವಾದ ಶರೀರದಿಂದ ಹುಟ್ಟುವ ಜೀವನು ಎಲ್ಲಕ್ಕೂ ಆಶ್ರಯನಾಗಿದ್ದಾನೆ' ಹೀಗೆ ಶ್ರುತಿ ಇರುವುದರಿಂದ ದ್ಯುಭ್ವಾದ್ಯಾಯತನನಲ್ಲಿ ನಾನಾವಿಧಶರೀರೋತ್ಪನ್ನತ್ವ ಎಂಬ ಜೀವನ ಲಿಂಗವು ಕೇಳಿಸುತ್ತಿದೆ. ಹಾಗಾಗಿ ಜೀವನೂ ಸಹ ದ್ಯುಭ್ವಾದ್ಯಾಯತನನಾಗಬಹುದು. 'ಜೀವ ಪ್ರಾಣಧಾರಣೇ' ಎಂಬ ಧಾತುವಿನಂತೆ ಜೀವಶಬ್ದದಿಂದ ಪ್ರಾಣಧಾರಣತ್ವವೆಂಬ ಪ್ರವೃತ್ತಿನಿಮಿತ್ತವು ತಿಳಿಯುತ್ತದೆ. ಆದ್ದರಿಂದ ಜೀವನಲ್ಲಿ ಪ್ರಾಣಾಶ್ರಯತ್ವವು ಸ್ಪಷ್ಟವಾಗುತ್ತದೆ. ಈ ಕಾರಣಗಳಿಂದ ಜೀವನು ದ್ಯುಭ್ವಾದ್ಯಾಯತನನಾಗುತ್ತಾನೆ.

### 'ವಾಯು' ದ್ಯುಭ್ವಾದ್ಯಾಯತನನೆಂದು ನಾಕನೆಯ ಪೂರ್ವಪಕ್ಷ

**ತत्वप्रकाशिका – विषयभूतलोकाधारत्वस्य 'वायुना वै गौतमसूत्रेण' इति वायौ श्रुतिसिद्धत्वात् तस्य द्युभ्वाद्यायतनत्वं युक्तम् । तस्य प्राणाधारत्वप्रसिद्धेश्च ।**

ನಾಕನೆಯ ಪೂರ್ವಪಕ್ಷ. ಅಥವಾ ವಾಯುವು ದ್ಯುಭ್ವಾದ್ಯಾಯತನನಾಗಬಹುದು. ವಿಷಯವಾಕ್ಯದಲ್ಲಿ ಕೇಳಿಸುತ್ತಿರುವ ಲೋಕಾಧಾರತ್ವವು 'ವಾಯುನಾ ವೈ ಗೌತಮಸೂತ್ರೇಣ' ಎಂಬ ಶ್ರುತಿವಾಕ್ಯದಿಂದ ವಾಯುವಿನಲ್ಲಿ ಸಿದ್ಧವಾಗುತ್ತದೆ. ಮತ್ತು ವಾಯುದೇವನು ಪ್ರಾಣಗಳಿಗೆ ಆಶ್ರಯನಾಗಿದ್ದಾನೆಂಬುದು ಪ್ರಸಿದ್ಧವೇ ಆಗಿದೆ. ಹಾಗಾಗಿ ವಾಯುದೇವನೂ ಸಹ ದ್ಯುಭ್ವಾದ್ಯಾಯತನನಾಗುತ್ತಾನೆ.

### ವಿಷ್ಣು ದ್ಯುಭ್ವಾದ್ಯಾಯತನನೆನ್ನಲು ಬಾಧಕಗಳು

**तत्वप्रकाशिका – विष्णोर्द्युभ्वाद्यायतनत्वप्रसिद्धावपि नासावत्रोच्यते । बहुधा जन्मबाधात् ।**

ವಿಷ್ಣುವು ದ್ಯುಭ್ವಾದ್ಯಾಯತನನಾಗಿದ್ದಾನೆಂದು ಪ್ರಸಿದ್ಧಿ ಇರಬಹುದು. ಆದರೆ ಈ ಪ್ರಕರಣದಲ್ಲಿ ಇಲ್ಲಿಯ ತನಕ ಸಮರ್ಥಿಸಿದ ಅನೇಕ ಯುಕ್ತಿಗಳಿಂದ ವಿಷ್ಣುವನ್ನು

ದ್ಯುಭ್ವಾದ್ಯಾಯತನನೆಂದು ಹೇಳಲಾಗದು. ಅಷ್ಟೇ ಅಲ್ಲದೆ ಅನೇಕ ವಿಧವಾದ ಜನ್ಮವನ್ನು ತಾಳುತ್ತಾನೆಂಬ ಬಹುಧಾಜಾಯಮಾನತ್ವವೆಂಬ ಬಾಧಕಲಿಂಗವೂ ಸಹ ವಿಷ್ಣುವಿಷಯದಲ್ಲಿ ಕಾಣಿಸುತ್ತಿದೆ.

### ಜೀವೇಶ್ವರರಿಗೆ ಅಭೇದವಿರುವುದರಿಂದ ಪೂರ್ವಪಕ್ಷವು ಪ್ರಬಲವಾಗಿದೆ

**तत्वप्रकाशिका – परविद्याविषयत्वलिङ्गाद् विष्णुरिति चेन्न । जीवेशाभेदेन ब्रह्मगतलिङ्गस्यापि जीवे सम्भवात् ।**

ಈ ಪ್ರಕರಣವು ಪರವಿದ್ಯಾವಿಷಯಕವಾದ್ದರಿಂದ ವಿಷ್ಣುವನ್ನೇ ಪ್ರತಿಪಾದಿಸಬೇಕಲ್ಲವೇ ಎಂದೂ ಶಂಕಿಸಬಾರದು. ಏಕೆಂದರೆ ಜೀವೇಶ್ವರರಿಗೆ ಅಭೇದವಿರುವುದರಿಂದ ಪರವಿದ್ಯಾ-ವಿಷಯತ್ವವೆಂಬ ಈಶ್ವರನ ಧರ್ಮವು ಜೀವನಲ್ಲಿಯೂ ಬರುತ್ತದೆ.

### ಕಾರಣದ ಧರ್ಮ ಕಾರ್ಯದಲ್ಲಿದೆ, ಕಾರ್ಯದ ಧರ್ಮ ಕಾರಣದಲ್ಲಿಲ್ಲ

**तत्वप्रकाशिका – नच तथा बहुधा जन्म सम्भवति । कारणगतस्यैव कार्ये सम्भवात् ।**

ಆದರೆ ಜೀವನಲ್ಲಿರುವ ಬಹುಧಾಜಾಯಮಾನತ್ವವೆಂಬ ಲಿಂಗವನ್ನು ಅಭೇದವಿರುವ ಪ್ರಯುಕ್ತ ಈಶ್ವರನಲ್ಲಿ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಕಾರಣದಲ್ಲಿರುವ ಧರ್ಮವನ್ನು ಕಾರ್ಯದಲ್ಲಿ ಒಪ್ಪಬಹುದೇ ಹೊರತು; ಕಾರ್ಯದಲ್ಲಿರುವ ಧರ್ಮವನ್ನು ಕಾರಣದಲ್ಲಿ ಒಪ್ಪಲು ಸಾಧ್ಯವಿಲ್ಲ.

### ರುದ್ರಾದಿಗಳೇ ಪರವಿದ್ಯೆಗೆ ವಿಷಯ

**तत्वप्रकाशिका – अतः परविद्याविषयो द्युभ्वाद्याश्रयो विष्णोरितर एवेति तस्यैवादृश्यत्वादिगुणकत्वमिति भावः ।**

ಆದ್ದರಿಂದ ಯಾವ ವ್ಯಕ್ತಿಯು ಪರವಿದ್ಯಾವಿಷಯನಾಗಿದ್ದಾನೋ ಅವನೇ ದ್ಯುಭ್ವಾದ್ಯಾಶ್ರಯ-ನಾಗಿದ್ದಾನೆ. ಹಾಗಾಗಿ ವಿಷ್ಣು ಪರವಿದ್ಯಾವಿಷಯನೆಂದು ಹೇಳಲಾಗದ ಕಾರಣ

ದ್ಯುಭ್ವಾದ್ಯಾಶ್ರಯನೂ ಸಹ ಆಗುವುದಿಲ್ಲ. ರುದ್ರಾದಿಗಳೇ ಆಗುತ್ತಾರೆ. ಅಂತಹ ರುದ್ರಾದಿಗಳಲ್ಲೇ ಅದೃಶ್ಯತ್ವಾದಿಗುಣಗಳನ್ನು ಹೇಳಬೇಕೆಂದು ಪೂರ್ವಪಕ್ಷದ ಅಭಿಪ್ರಾಯ.

ಸಿದ್ಧಾಂತಸ್ಥಾಪನೆಗೆ ಅವತಾರಿಕೆ

**तत्वप्रकाशिका – सिद्धान्तयत् सूत्रमवतार्य व्याचष्टे – अत इति ।। द्युभ्वाद्यायतनत्वे स्वशब्दपर्यायात्मशब्दश्रवणाद्द्युभ्वाद्यायतनं विष्णुरेवेत्यर्थः । आत्मशब्दादपि कुतो विष्णुरित्यत आह – आत्मेति ।।१।।**

ಸಿದ್ಧಾಂತವನ್ನು ಸ್ಥಾಪಿಸುವ ಸೂತ್ರಕ್ಕೆ ಅವತಾರಿಕೆಯನ್ನು ಕೊಡುವ ಮೂಲಕ ವ್ಯಾಖ್ಯಾನಿಸುತ್ತಿದ್ದಾರೆ. ''ಅತಃ'' ಎಂಬುದಾಗಿ. ದ್ಯುಭ್ವಾದ್ಯಾಯತನನಾದವನಲ್ಲಿ ಸ್ವಶಬ್ದದ ಪರ್ಯಾಯಶಬ್ದವೆನಿಸಿದ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗುತ್ತಾನೆ ಎಂದರ್ಥ. ಆತ್ಮಶಬ್ದವಿದ್ದರೂ ವಿಷ್ಣು ಎಂಬರ್ಥವನ್ನೇ ಏಕೆ ಸ್ವೀಕರಿಸಬೇಕು? ಎಂಬ ಪ್ರಶ್ನೆಗೆ ''ಆತ್ಮ'' ಎಂಬ ಸ್ಮೃತಿವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ವಿಶೇಷವಿಚಾರ - ಸೂತ್ರದಲ್ಲಿ 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ವಿಷ್ಣುವಿನಲ್ಲಿ ಅಸಾಧಾರಣವಾಗಿ ಪ್ರಯೋಗಿಸಲ್ಪಟ್ಟ ಆತ್ಮಶಬ್ದವು ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಎಂದು ಇದರ ಅರ್ಥ. ಈ ಅರ್ಥವನ್ನು ವಿವಕ್ಷಿಸುವುದಾದರೆ ಸಹಜವಾಗಿ ಶಂಕೆಯು ಉದ್ಭವಿಸುತ್ತದೆ. ಸೂತ್ರಕಾರರು 'ಆತ್ಮಶಬ್ದಾತ್' ಎಂದೇ ಹೇಳಬಹುದಿತ್ತಲ್ಲವೇ? ನೇರವಾಗಿ ಇದರಿಂದ ಹೇತುವನ್ನು ತಿಳಿಸಿದಂತಾಗುತ್ತಿತ್ತು. 'ಸ್ವಶಬ್ದಾತ್' ಎಂದು ಹೇಳಿದರೆ ವಿಷ್ಣುವಿಗೆ ಸಂಬಂಧಪಟ್ಟ ಶಬ್ದ ಯಾವುದೆಂದು ಮೊದಲು ವಿಮರ್ಶಿಸಿ ಅನಂತರ ಅದು ಆತ್ಮಶಬ್ದವಾಗಿದೆಯೆಂಬುದನ್ನು ಅನ್ಯಥಾನುಪಪತ್ತಿ ಪ್ರಮಾಣದಿಂದ ತಿಳಿಯಬೇಕಾಗುತ್ತದೆ. ಇದು ವಕ್ರ ಮಾರ್ಗ. ಸೂತ್ರಕಾರರು ನೇರ ಮಾರ್ಗವನ್ನೇಕೆ ಬಿಟ್ಟರು? ವಕ್ರಮಾರ್ಗವನ್ನೇಕೆ ಹಿಡಿದರು? ಎಂದು.

ಇದು ಮಂದಮತಿಗಳಿಗೆ ಬರುವ ಪ್ರಶ್ನೆಯಷ್ಟೇ ಹೊರತು, ಇದರಲ್ಲಿ ಹುರುಳಿಲ್ಲ. 'ಸ್ವಶಬ್ದಾತ್' ಎಂಬ ಶಬ್ದ ಪ್ರಯೋಗದ ಹಿಂದೆ ಬಹಳ ಅರ್ಥವನ್ನು ತುಂಬಿದ್ದಾರೆ ಸೂತ್ರಕಾರರು. 'ಆತ್ಮಾ' ಎಂಬ ಶಬ್ದವು ವಿಷ್ಣುವಿನಲ್ಲಿ ಅಸಾಧಾರಣವಾಗಿದೆ ಮತ್ತು ಈ ಶಬ್ದವಿಶೇಷವನ್ನೇ ಸ್ವೀಕರಿಸಬೇಕು ಎಂಬೆರಡು ವಿಚಾರಗಳನ್ನು ತಿಳಿಸುವುದಕ್ಕಾಗಿ 'ಸ್ವಶಬ್ದಾತ್' ಎಂದು

ಹೇಳಿರುವರು. ಒಂದು ವೇಳೆ ಆತ್ಮಶಬ್ದವನ್ನೇ ಬಾಯಿಬಿಟ್ಟು ಹೇಳಿದ್ದರೆ, ಅದು ವಿಷ್ಣುವಿನಲ್ಲಿ ಅಸಾಧಾರಣವಾಗಿದೆಯೆಂದು ತಿಳಿಯುತ್ತಿರಲಿಲ್ಲ. ಇದು ಶಬ್ದವಿಶೇಷವೆಂದೂ ಸಹ ತಿಳಿಯುತ್ತಿರಲಿಲ್ಲ. 'ಸ್ವ ಇತಿ ಶಬ್ದಃ = ಸ್ವಶಬ್ದಃ' ಎಂಬ ಕರ್ಮಧಾರಯವನ್ನು ಆಶ್ರಯಿಸಿದಾಗ ಶಬ್ದವಿಶೇಷವನ್ನೇ ಸ್ವೀಕರಿಸಬೇಕೆಂಬ ಪ್ರಯೋಜನವು ಲಾಭವಾಗುತ್ತದೆ. 'ಸ್ವಸ್ಯ ಶಬ್ದಃ' 'ಸ್ವಶಬ್ದಃ' ಎಂಬ ಷಷ್ಠೀತತ್ಪುರುಷವನ್ನು ಆಶ್ರಯಿಸಿದಾಗ ವಿಷ್ಣುವಿನ ಅಸಾಧಾರಣ ಶಬ್ದವಾಗಿದೆಯೆಂದು ತಿಳಿಯುತ್ತದೆ. 'ಆತ್ಮಶಬ್ದಾತ್' ಎಂಬ ಪದಪ್ರಯೋಗದಿಂದ ಈ ಎರಡು ಸಮಾಸಗಳೂ ತಿಳಿಯಲು ಸಾಧ್ಯವಿರಲಿಲ್ಲ. ಈ ಎರಡು ಸಮಾಸಗಳಿಂದ ತಿಳಿಯುವ ಪ್ರಮೇಯವೂ ಸಹ ಸಿದ್ಧವಾಗುತ್ತಿರಲಿಲ್ಲ.

ಅಥವಾ ಸ್ವಶಬ್ದವನ್ನು ದೃಷ್ಟಾಂತವೆಂದು ತಿಳಿಯಬಹುದು. ಲೋಕದಲ್ಲಿ ೧. ತಾನು, ೨. ದುಡ್ಡು, ೩. ಬಂಧು ಮೊದಲಾದ ಅರ್ಥಗಳಲ್ಲಿ 'ಸ್ವ' ಎಂಬ ಶಬ್ದವನ್ನು ಪ್ರಯೋಗಿಸುವುದು ಕಂಡಿದೆ. ಆದರೂ ಸಹ ಚತುರ್ಮುಖನನ್ನು 'ಸ್ವಭೂಃ' ಎಂದು ಕರೆಯಲಾಗುತ್ತದೆ. ಏಕೆಂದರೆ 'ಸ್ವ' ಎನಿಸಿದ ಭಗವಂತನಿಂದ ಹುಟ್ಟಿದ್ದವನಾದ್ದರಿಂದ. ಇದರಿಂದ 'ಸ್ವ' ಶಬ್ದವು ಶ್ರೀಹರಿಯಲ್ಲೇ ಮುಖ್ಯವಾಗಿದೆಯೆಂದು ತಿಳಿಯುತ್ತದೆ. ಅದರಂತೆ ಆತ್ಮಶಬ್ದವನ್ನೂ ಲೋಕದಲ್ಲಿ ಬೇರೆಡೆ ಪ್ರಯೋಗಿಸಬಹುದು. ಆದರೆ ಚತುರ್ಮುಖನನ್ನೇ 'ಆತ್ಮಭೂಃ' ಎಂದೂ ಸಹ ಕರೆಯುತ್ತಾರೆ. ಹಾಗಾದರೆ ಆತ್ಮಶಬ್ದಕ್ಕೆ ಮುಖ್ಯಪ್ರತಿಪಾದ್ಯನು ವಿಷ್ಣುವೇ ಆಗಿದ್ದಾನೆಂದು ಅರ್ಥೈಸಬೇಕು. ಹೀಗೆ ಸ್ವಶಬ್ದವು ಹೇಗೆ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೋ? ಅದರಂತೆ ಆತ್ಮಶಬ್ದವೂ ಸಹ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆಂಬ ಇತ್ಯಾದಿ ವಿಚಾರಗಳನ್ನು ಸೂತ್ರಕಾರರು ಇಲ್ಲಿ ಸೇರಿಹಿಡಿದಿದ್ದಾರೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
## ಭಾವದೀಪ

ಸ್ವತಃ ಭಾಷ್ಯಕಾರರೇ ಪಾದಪ್ರಮೇಯವನ್ನು ಏಕೆ ಹೇಳುತ್ತಿರುವರು ?

**भावदीपः – द्युभ्वाद्यायतनं स्वशब्दात् ।।** पूर्वोक्तदिशा पादार्थत्वाप्रतीतेराह – **एतदिति ।। हराविति ।।** एषां शब्दानां लोके हराविवान्यत्रप्रयोगाद्

**व्यक्तिविशेषनिर्णयाय श्रुत्यन्तरान्वेषणे श्रुत्यन्तरेऽन्यत्रेव हरावपि प्रयोगात् श्रुतिसाधारण्येन वा आदिपदोक्तेन भूमाक्षरादिनये वक्ष्यमाणदिशा प्रक्रमसमाख्यासाधारण्येन वा प्रवृत्तिनिमित्तसाधारण्येन वा पूर्वोक्तन्यायलोकप्रयोगाभ्यां वा प्रसिद्धानामेकोपस्थापनदशायामन्यस्याप्युपस्थापकानामिति यावत् साक्षाद्धर्मिवाचिनां धर्मद्वारा धर्मिवाचिनां च शब्दानामित्यर्थः ।**

ಈ ಪಾದದಲ್ಲಿಯೂ ಸಹ ಹಿಂದಿನಂತೆ ಯಾವ ಪ್ರಮೇಯವನ್ನು ಹೇಳುತ್ತಿದ್ದಾರೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದ ಸ್ವತಃ ಭಾಷ್ಯಕಾರರೇ ಪಾದಪ್ರಮೇಯವನ್ನು "ಏತತ್" ಇತ್ಯಾದಿ ವಾಕ್ಯಗಳಿಂದ ತಿಳಿಸುತ್ತಿದ್ದಾರೆ. "ಹರೌ" ಎಂಬುದಕ್ಕೆ ಹೀಗರ್ಥ - ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಶಬ್ದಗಳು ಭಗವಂತನಲ್ಲಿ ಹೇಗೆ ಪ್ರಸಿದ್ಧವಾಗಿವೆಯೋ ಅದರಂತೆ ಲೋಕದಲ್ಲಿಯೂ ಬೇರೆ ಕಡೆ ಪ್ರಸಿದ್ಧವಾಗಿವೆ. ಹೀಗಿರುವಾಗ ಇಂತಹ ವ್ಯಕ್ತಿಯನ್ನೇ ಪ್ರತಿಪಾದಿಸುತ್ತವೆ ಎಂದು ನಿರ್ಣಯಿಸಲು ಒಂದು ಶ್ರುತಿಯನ್ನು ಅನ್ವೇಷಣೆ ಮಾಡುವುದಾದರೆ ಮತ್ತೊಂದು ಶ್ರುತಿಯಲ್ಲಿ ಬೇರೆ ವ್ಯಕ್ತಿಗಳಲ್ಲಿ ಪ್ರಯೋಗಿಸಿದಂತೆ ಶ್ರೀಹರಿಯಲ್ಲೂ ಪ್ರಯೋಗಿಸಿರುವುದು ಕಾಣಿಸುತ್ತದೆ. ಹೀಗೆ ಭಗವಂತನಲ್ಲಿ ಮತ್ತು ಬೇರೆ ವಿಷಯದಲ್ಲಿ ಶ್ರುತಿಯು ಸಾಧಾರಣವಾಗಿದೆ. ಆದಿ ಪದದಿಂದ ಭೂಮಾಧಿಕರಣ ಮತ್ತು ಅಕ್ಷರಾಧಿಕರಣಗಳಲ್ಲಿ ಹೇಳುವಂತೆ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣವು ಎರಡು ವಿಷಯಗಳಲ್ಲಿ ಸಾಧಾರಣವಾಗಿರುವುದರಿಂದ ಈ ಶಬ್ದಗಳು ಉಭಯತ್ರ ಪ್ರಸಿದ್ಧವಾಗಿವೆ. ಅಥವಾ ಎರಡೂ ಕಡೆ ಪ್ರವೃತ್ತಿನಿಮಿತ್ತವು ಸಾಧಾರಣವಾಗಿರುವುದರಿಂದ ಉಭಯತ್ರ ಪ್ರಸಿದ್ಧವಾಗಿವೆ. ಅಥವಾ ಹಿಂದೆ ಹೇಳಿದ ನ್ಯಾಯ ಹಾಗೂ ಲೋಕಪ್ರಯೋಗಗಳಿಂದ ಉಭಯತ್ರ ಪ್ರಸಿದ್ಧವಾಗಿವೆ. ಅಂದರೆ ಶಬ್ದವು ಒಬ್ಬನನ್ನು ತಿಳಿಸುವಾಗ ಮತ್ತೊಬ್ಬನ ಸ್ಮರಣೆಯೂ ಸಹ ಬರುತ್ತದೆಂದು ಅಭಿಪ್ರಾಯ. ಈ ಎಲ್ಲಾ ಕಾರಣಗಳಿಂದ ನೇರವಾಗಿ ಧರ್ಮಿವಾಚಿಯಾದ ಮತ್ತು ಧರ್ಮದ ಮುಖಾಂತರ ಧರ್ಮಿವಾಚಿವಾದ ಶಬ್ದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ ಎಂದು ತಿಳಿಯಬೇಕು.

ವಿಶೇಷವಿಚಾರ - ನಾಮಪಾದದಲ್ಲಿ ಸಕಲ ನಾಮಾತ್ಮಕಶಬ್ದಗಳು ಭಗವಂತನ ಹೆಸರುಗಳಾಗಿವೆಯೆಂಬುದನ್ನು ವಿಚಾರ ಮಾಡಿದ್ದಾಯಿತು. ಯೌಗಿಕವಾದ ಸಕಲ ಶಬ್ದಗಳು ಲಿಂಗಸ್ವರೂಪದಲ್ಲಿರುವುದರಿಂದ ಅವುಗಳೂ ಸಹ ಭಗವಂತನ ಗುಣಪ್ರತಿಪಾದಕಗಳಾಗಿವೆಯೆ ಎಂಬುದನ್ನೂ ಸಹ ಎರಡನೇ ಪಾದದಲ್ಲಿ ವಿಚಾರ ಮಾಡಿದ್ದಾಯಿತು.

ಶಬ್ದಗಳು ಭಗವಂತನನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಲೋಕರೂಢಿಯಂತೆ ಲೌಕಿಕಪದಾರ್ಥಗಳನ್ನೇ ಪ್ರತಿಪಾದಿಸುತ್ತದೆಂಬುದು ಪೂರ್ವಪಕ್ಷಾರನ ಆಗ್ರಹ. ಪ್ರತಿಯೊಂದು ಶಬ್ದಗಳೂ ಭಗವತ್ಪ್ರತಿಪಾದಕಗಳಾಗಿವೆ. ಭಗವಂತನನ್ನು ಬಿಟ್ಟು ಇತರ ಯಾವುದೇ ಪದಾರ್ಥಗಳನ್ನೂ ಸಹ ಪ್ರತಿಪಾದಿಸಲು ಸಾಧ್ಯವೇ ಇಲ್ಲವೆಂಬುದು ಸಿದ್ಧಾಂತಿಗಳ ಆಗ್ರಹ. ಇವರಿಬ್ಬರನ್ನೂ ಸಮಾಧಾನ ಮಾಡಲು ಒಂದು ಉಪಾಯವನ್ನು ಹುಡುಕಬಹುದು. ಸಕಲ ಶಬ್ದಗಳು ಹಾಗೂ ಲಿಂಗಗಳು ಲೌಕಿಕಪದಾರ್ಥಗಳನ್ನೂ ಪ್ರತಿಪಾದಿಸುತ್ತವೆ. ವಿಷ್ಣುವನ್ನೂ ಸಹ ಪ್ರತಿಪಾದಿಸುತ್ತವೆ. ಹೀಗೆ ಹೇಳಿದಾಗ ಇಬ್ಬರಿಗೂ ಗಲಾಟೆಯಾಗಲು ಸಾಧ್ಯವೇ ಇಲ್ಲ. ಆದ್ದರಿಂದ ಉಭಯತ್ರಪ್ರಸಿದ್ಧವೆಂದು ಶಬ್ದಗಳನ್ನು ಒಪ್ಪೋಣ ಏನು ತೊಂದರೆ? ಎಂಬ ಪ್ರಶ್ನೆಯನ್ನು ಅನೇಕ ಮಂದಿ ಮಾಡುತ್ತಾರೆ. ಅದಕ್ಕೆ ಉತ್ತರ ನೀಡುವುದಕ್ಕಾಗಿಯೇ ಮೂರನೇ ಪಾದವು ಹೊರಡುತ್ತಿದೆ. ಈ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ಶಬ್ದಗಳೆಲ್ಲವೂ ಭಗವಂತನನ್ನೇ ಪ್ರತಿಪಾದಿಸುತ್ತವೆಂದು ಸಾಧಿಸುತ್ತಿದ್ದಾರೆ.

ತಿಳಿಯಬೇಕಾದ ವಿಚಾರವಿಷ್ಟು. ಹಿಂದಿನ ಎರಡು ಪಾದಗಳಲ್ಲಿ ಸಕಲಶಬ್ದಗಳಿಗೆ ಭಗವಂತನಲ್ಲಿ ತಾತ್ಪರ್ಯವಿದೆಯೆಂದು ಹೇಳಿದ್ದಾರೆ ಹೊರತು, ಮುಖ್ಯವಾಚ್ಯತ್ವವನ್ನು ಸಮರ್ಥಿಸಿರುವುದಿಲ್ಲ. ತಾತ್ಪರ್ಯವಿರುವ ಪ್ರಯುಕ್ತ ವಿಷ್ಣುಪರವಾಗುತ್ತವೆಂಬುದಂತೂ ಅನೇಕ ನ್ಯಾಯಗಳಿಂದ ತಿಳಿಯುತ್ತವೆ. ಆದರೆ ಲೋಕರೂಢಿಯೂ ಸಹ ಬೇರೆ ಪದಾರ್ಥ-ಗಳಲ್ಲಿರುವುದರಿಂದ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುವಂತೆ ಇತರ ಪದಾರ್ಥಗಳನ್ನೂ ಸಹ ಪ್ರತಿಪಾದಿಸುತ್ತವೆ. ಹಾಗಾಗಿ ಹಿಂದಿನ ಎರಡು ಪಾದಗಳಲ್ಲಿ ಯಾವ ಶಬ್ದಗಳನ್ನೆಲ್ಲ ಸಮನ್ವಯ ಮಾಡಿದರೋ ಅವೆಲ್ಲವೂ ವಿಷ್ಣುವಿನಲ್ಲೂ ಬರುತ್ತವೆ. ಲೋಕದಲ್ಲಿಯೂ ಬರುತ್ತವೆ. ವಿಷ್ಣುವಿನಲ್ಲಿ ಮಾತ್ರ ಬರುತ್ತವೆಂಬ ನಿರ್ಧಾರವನ್ನು ಮಾಡಲು ಸಾಧ್ಯವಿಲ್ಲ. ಹಾಗಾಗಿ ಹಿಂದಿನೆರಡು ಪಾದಗಳಲ್ಲಿ ಸಮನ್ವಯ ಮಾಡಿದ ಶಬ್ದಗಳನ್ನು ಪುನಃ ಸಮನ್ವಯ ಮಾಡುವ ಅನಿವಾರ್ಯತೆ ಬಹಳವಾಗಿ ಕಾಣಿಸುತ್ತದೆ. ಅದಕ್ಕೋಸ್ಕರವೇ ಈ ಪಾದ ಹೊರಟಿದೆ. ಈ ಪಾದವು ಹೊರಟಿದ್ದರೆ ಸಕಲ ಶಬ್ದಗಳೂ ಉಭಯತ್ರಪ್ರಸಿದ್ಧವೆಂದಾಗಿ ಭಗವಂತನಲ್ಲಿ ಸಕಲಶಬ್ದದ ಸಮನ್ವಯವೂ ಸಿದ್ಧವಾಗದೆ. ಸಕಲ ಗುಣಪರಿಪೂರ್ಣತ್ವದ ಸಿದ್ಧಿಯೂ ಸಹ ಆಗದಿರುವ ಪ್ರಸಂಗ ಬರುತ್ತಿತ್ತು.

ಈ ಪಾದದಲ್ಲಿ ಈಗಾಗಲೇ ಹೇಳಿದಂತೆ ಕೇವಲ ನಾಮಾತ್ಮಕ ಶಬ್ದಗಳ ಸಮನ್ವಯವಷ್ಟೇ ಅಲ್ಲ, ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನೂ ಸಹ ಮಾಡುತ್ತಿದ್ದಾರೆ. ಒಟ್ಟು ಹದಿನಾಕು

ಅಧಿಕರಣಗಳು ಈ ಪಾದದಲ್ಲಡಗಿವೆ. ಅವುಗಳಲ್ಲಿ ಮೊದಲನೆಯದು ದ್ಯುಭ್ವಾದ್ಯಧಿಕರಣ. ಸರ್ವಾಧಾರತ್ವವೆಂಬ ಲಿಂಗವನ್ನು ಈ ಮೊದಲನೆಯ ಅಧಿಕರಣದಲ್ಲಿ ವಿಷ್ಣುಮಾತ್ರಪರವೆಂದು ಸಮನ್ವಯ ಮಾಡುತ್ತಾರೆ. ಮುಂದಿನ ಭೂಮಾಧಿಕರಣದಲ್ಲಿ 'ಭೂಮಾ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು, ಅದರ ಮುಂದಿನ ಅಕ್ಷರಾಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಾರೆ.

ನಾಲ್ಕನೆಯ ಸದಧಿಕರಣದಲ್ಲಿ ಅನೇಕ ಪ್ರಕರಣಗಳ ಸಮೂಹಾತ್ಮಕವಾದ ಸ್ಥಾನವೆಂಬುದನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ. ಐದನೆಯ ದಹರಾಧಿಕರಣದಲ್ಲಿ 'ಹೃತ್ಪದ್ಮಸ್ಥತ್ವ' ಲಿಂಗವನ್ನು, ಅನುಕೃತ್ಯಧಿಕರಣದಲ್ಲಿ 'ಅನುಕೂಲ್ಯೇನಗೃಹ್ಯಮಾಣತ್ವ' ಎಂಬ ಲಿಂಗವನ್ನು ಸಮನ್ವಯ ಮಾಡಿದ್ದಾರೆ. ಮುಂದಿನ ವಾಮನಾಧಿಕರಣದಲ್ಲಿ ಈಶಾನ ಶಬ್ದವನ್ನು ಕಂಪನಾಧಿಕರಣದಲ್ಲಿ ವಜ್ರ ಶಬ್ದವನ್ನು, ಜ್ಯೋತಿರಧಿಕರಣದಲ್ಲಿ ಜ್ಯೋತಿಶಬ್ದವನ್ನು, ಆಕಾಶಾಧಿಕರಣದಲ್ಲಿ ಆಕಾಶ ಶಬ್ದವನ್ನು, ಸುಷುಪ್ತ್ಯಧಿಕರಣದಲ್ಲಿ ಸ್ವಪ್ನಾದಿದ್ರಷ್ಟೃತ್ವವೆಂಬ ಲಿಂಗವನ್ನು, ಬ್ರಾಹ್ಮಣಾಧಿಕರಣದಲ್ಲಿ ಬ್ರಾಹ್ಮಣ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರೆ. ಮಧ್ಯದಲ್ಲಿ ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳು ಬರುತ್ತವೆ. ಆದರೆ ಈ ಎರಡು ಅಧಿಕರಣಗಳಲ್ಲಿ ದೇವತೆಗಳಿಗೆ ಮಾತ್ರ ವೇದಾಧಿಕಾರವಿದೆ. ಶೂದ್ರಾದಿಗಳಿಗೆ ವೇದಾಧಿಕಾರವಿಲ್ಲವೆಂಬ ವಿಚಾರವನ್ನು ಮಾಡಿದ್ದಾರೆ. ಆದ್ದರಿಂದ ಯಾವುದೇ ಲಿಂಗವನ್ನಾಗಲೀ, ಹೆಸರನ್ನಾಗಲೀ, ಈ ಎರಡು ಅಧಿಕರಣಗಳಲ್ಲಿ ಸಮನ್ವಯ ಮಾಡದೆ ಪ್ರಾಸಂಗಿಕವಾದ ವಿಚಾರಗಳನ್ನಷ್ಟೇ ತಿಳಿಸಿದ್ದಾರೆ.

ಮೊದಲನೇ ಈ ದ್ಯುಭ್ವಾದ್ಯಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಉಭಯತ್ರಪ್ರಸಿದ್ಧವಾಗಿದೆ ಹೊರತು, ಅನ್ಯತ್ರ-ಪ್ರಸಿದ್ಧವಲ್ಲ. ವಸ್ತುತಃ ಜಾಯಮಾನತ್ವವೆಂಬ ಅನ್ಯತ್ರಪ್ರಸಿದ್ಧವಾದ ಲಿಂಗದ ಜೊತೆಗೆ ಇದನ್ನು ಹೇಳಿರುವುದರಿಂದ ಇದೂ ಸಹ ಅನ್ಯತ್ರಪ್ರಸಿದ್ಧವೆಂಬ ಭ್ರಾಂತಿ ಬರುತ್ತದೆ. ಆದರೆ ರುದ್ರನಲ್ಲಿ ಹಾಗೂ ವಿಷ್ಣುವಿನಲ್ಲಿ ಸಾಧಾರಣವಾದ ಶ್ರುತಿಯನ್ನು ನೋಡಿದಾಗ ದ್ಯುಭ್ವಾದ್ಯಾಯತನತ್ವವು ಸ್ವಾಭಾವಿಕವಾಗಿ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯುತ್ತದೆ. ಅನ್ಯತ್ರಪ್ರಸಿದ್ಧವೆಂದು ಹೇಳಬೇಕಾದರೆ ಅನ್ಯತ್ರಪ್ರಸಿದ್ಧವಾದ ಜಾಯಮಾನತ್ವವೆಂಬ ಲಿಂಗವನ್ನು ಅಪೇಕ್ಷಿಸಬೇಕು. ಉಭಯತ್ರಪ್ರಸಿದ್ಧವೆಂಬ ಲಿಂಗವನ್ನು ಹೇಳಬೇಕಾದರೆ ಮತ್ತೊಂದನ್ನು ಅಪೇಕ್ಷಿಸಬೇಕಾಗಿಲ್ಲ. ಸ್ವಾಭಾವಿಕವಾಗಿಯೇ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬಹುದು. ಸಾಪೇಕ್ಷಕ್ಕಿಂತ ನಿರಪೇಕ್ಷವು ಪ್ರಬಲವಾಗಿರುವುದರಿಂದ ದ್ಯುಭ್ವಾದ್ಯಾಯತನತ್ವವನ್ನು ಉಭಯತ್ರಪ್ರಸಿದ್ಧವಾದ ಲಿಂಗವೆಂದೇ ಪರಿಗಣಿಸಬೇಕು.

### ಪಾದಗಳಲ್ಲಿರುವ ಪೌರ್ವಾಪರ್ಯ

**भावदीपः** – पूर्वं नामलिङ्गानां प्राधान्याप्राधान्याभ्यां पौर्वापर्यात् पादभेदेन समन्वयोक्तावपि इह नाम्नां प्राधान्यात् लिङ्गानां समन्वितत्वेन बुद्धिस्थत्वाद् उभयानुरोधेनोभयेषामप्येकत्रैव समन्वयोक्तिरिति भावः । प्रागेव विष्णौ दत्तपदत्वात् किमत्र कार्यमित्यतः समन्वयपदार्थं व्यनक्ति – **विष्ण्वेकवाचित्वमिति ।।**

ಹಿಂದಿನ ಎರಡು ಪಾದಗಳಲ್ಲಿ ನಾಮಾತ್ಮಕಶಬ್ದಗಳು ಪ್ರಧಾನವಾದ್ದರಿಂದ ಅವುಗಳನ್ನು ಮೊದಲು ಸಮನ್ವಯ ಮಾಡಿದ್ದರು. ಲಿಂಗಾತ್ಮಕಶಬ್ದಗಳು ಅಪ್ರಧಾನವಾದ್ದರಿಂದ ಅನಂತರ ಸಮನ್ವಯ ಮಾಡಿದ್ದರು. ಆದ್ದರಿಂದ ಪ್ರಥಮಪಾದಕ್ಕೂ ದ್ವಿತೀಯಪಾದಕ್ಕೂ ಇರುವ ಪೌರ್ವಾಪರ್ಯವು ಸಮಂಜಸವಾಗಿದೆ ಮತ್ತು ಪಾದಭೇದದಿಂದ ಸಮನ್ವಯ ಮಾಡಿದ್ದೂ ಸಹ ಯುಕ್ತವಾಗಿದೆ. ಆದರಂತೆ ಈ ಪಾದದಲ್ಲಿಯೂ ನಾಮಾತ್ಮಕಶಬ್ದಗಳು ಪ್ರಧಾನವಾದ್ದರಿಂದ ಮತ್ತು ಲಿಂಗಾತ್ಮಕಶಬ್ದಗಳನ್ನು ಅವ್ಯವಹಿತವಾದ ಹಿಂದಿನ ಪಾದದಲ್ಲಿ ಸಮನ್ವಯ ಮಾಡಿದ್ದರಿಂದ ಬುದ್ಧಿಸ್ಥಿತವಾದ್ದರಿಂದ ಎರಡನ್ನೂ ಅನುಸರಿಸಿ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳನ್ನು ಈ ಒಂದೇ ಪಾದದಲ್ಲಿ ಸಮನ್ವಯ ಮಾಡಲು ಹೊರಟಿದ್ದಾರೆಂದು ತಿಳಿಯಬೇಕು. ಹಿಂದಿನ ಪಾದದಲ್ಲಿಯೇ ಸಕಲವಿಧವಾದ ಶಬ್ದಗಳನ್ನು ಸಮನ್ವಯ ಮಾಡಿದ ಮೇಲೆ ಇಲ್ಲಿ ಸಮನ್ವಯ ಮಾಡಲು ಏನು ಉಳಿದಿದೆ? ಎಂಬ ಪ್ರಶ್ನೆಗೆ ಉತ್ತರಿಸಲು ಸಮನ್ವಯ ಪದದ ಅರ್ಥವನ್ನು ವ್ಯಾಖ್ಯಾನಿಸುತ್ತಿದ್ದಾರೆ "ವಿಷ್ಣ್ವೇಕವಾಚಿತ್ವಂ" ಇತ್ಯಾದಿಯಾಗಿ.

### ನಾಮಲಿಂಗಾತ್ಮಕ ಶಬ್ದಗಳ ಸಮನ್ವಯ

**भावदीपः** – 'तत्रान्यत्रप्रसिद्धानां लिङ्गनाम्नां पुनर्हरिः । विशेषान्मुख्यतो वृत्तिं स्वस्मिन्नेवात्र वक्त्यजः' इत्यनुव्याख्यानोक्तेः ।

"ತತ್ರಾನ್ಯತ್ರ ಪ್ರಸಿದ್ಧಾನಾಂ ಲಿಂಗನಾಮ್ನಾಂ ಪುನರ್ಹರಿಃ । ವಿಶೇಷಾನ್ಮುಖ್ಯತೋ ವೃತ್ತಿಂ ಸ್ವಸ್ಮಿನ್ನೇವಾತ್ರ ವಕ್ತ್ಯಜಃ" ಉಭಯತ್ರ ಪ್ರಸಿದ್ಧವಾದ ಲಿಂಗಾತ್ಮಕ ಹಾಗೂ ನಾಮಾತ್ಮಕವಾದ ಶಬ್ದಗಳ ಸಮನ್ವಯವನ್ನು ಪುನಃ ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಏಕೆಂದರೆ ವಿಶೇಷವಾಗಿ ಭಗವಂತನೇ ಆಯಾ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂಬ ಅನುವ್ಯಾಖ್ಯಾನದ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

ಶ್ರುತಿಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಿ

**भावदीपः** – अन्यथा तत्त्वित्यवधारणायोग इति भावः । श्रुत्यादिप्रसिद्धेत्युक्तं श्रुतिसाधारण्येनोभयत्र प्रसिद्धत्वं तत्त्वित्यवधारणायोग इति भावः । श्रुत्यादिप्रसिद्धेत्युक्तं श्रुतिसाधारण्येनोभयत्र प्रसिद्धत्वं न्यायविवरणोक्तश्रुत्युक्त्या व्यञ्जयन्नस्य पादान्तर्भावमाह – **तत्रेति** ।।

ಹೀಗೆ ಒಪ್ಪದಿದ್ದರೆ "ತತ್ತು" ಎಂಬ ಅವಧಾರಣವು ಅಯುಕ್ತವಾಗುತ್ತದೆಂದು ಅಭಿಪ್ರಾಯ. "ಶ್ರುತ್ಯಾದಿಪ್ರಸಿದ್ಧ" ಇತ್ಯಾದಿಯಾಗಿ ಹೇಳಲ್ಪಟ್ಟಿದ್ದನ್ನು ಶ್ರುತಿಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಿಯನ್ನು ತಿಳಿಯಬೇಕು. ಈ ವಿಷಯದಲ್ಲಿ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಶ್ರುತಿಯಿಂದ ಸ್ಪಷ್ಟಪಡಿಸುತ್ತಾ ಪಾದಾಂತರ್ಭಾವವನ್ನು ಈ ಅಧಿಕರಣಕ್ಕೆ "ತತ್ರ" ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

ವಿಶೇಷವಿಚಾರ - ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ? ಇವುಗಳೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತವೆ. ಏಕೆಂದರೆ ಭೂಮಾಧಿಕರಣದಲ್ಲಿ ಮುಖ್ಯಪ್ರಾಣನನ್ನು ಪ್ರತಿಪಾದಿಸುವ 'ಭೂಮಾ' ಎಂಬ ಶಬ್ದವು 'ಪ್ರಾಣೋನೂತ್ಕ್ರಾಮತಿ' ಎಂಬ ನಿರವಕಾಶವಾದ ಉತ್ಕ್ರಮಣವೆಂಬ ಲಿಂಗದಿಂದ ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾಗಿದೆ. ಅಕ್ಷರಾಧಿಕರಣದಲ್ಲಿ ಸಮನ್ವಯ ಮಾಡಬೇಕಾದ ಅಕ್ಷರಶಬ್ದವೂ ಸಹ ಮತ್ತೊಂದು ಶ್ರುತಿಯಿಂದ ಸಿದ್ಧವಾದ ಚಂದ್ರಾದ್ಯಾಧಾರತ್ವವೆಂಬ ಲಕ್ಷ್ಮೀದೇವಿಯ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ಸದಧಿಕರಣದಲ್ಲಿ ಸಮನ್ವಯ ಮಾಡಬೇಕಾದ 'ಸತ್' ಶಬ್ದವೂ ಸಹ 'ಬಹುಸ್ಯಾಮ್' ಎಂಬ ಶ್ರುತಿಯಿಂದ ಸಿದ್ಧವಾದ ವಿಕಾರ ಎಂಬ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ದಹರಾಧಿಕರಣದಲ್ಲಿ ಸಮನ್ವಯ ಮಾಡುವ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವೂ ಆಕಾಶಶ್ರುತಿಯಿಂದ ಅನ್ಯತ್ರಪ್ರಸಿದ್ಧವಾಗಿದೆ. ಹೀಗಿರುವಾಗ ಇವುಗಳನ್ನೆಲ್ಲಾ ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ?

ಈ ಆಕ್ಷೇಪಕ್ಕೆ ಈಗಾಗಲೇ ಹೇಳಿದ ನಾಲ್ಕು ಬಗೆಯ ಸಮಾಧಾನವನ್ನು ತಿಳಿದುಕೊಳ್ಳಬೇಕು.

೧. 'ದ್ಯುಭ್ವಾದ್ಯಾಯತನತ್ವ' ಮೊದಲಾದ ಲಿಂಗಗಳಿಗೆ ಸಮಾನವಾದ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧಿಯೂ ಇರುತ್ತದೆ. ಉಭಯತ್ರಪ್ರಸಿದ್ಧಿಯೂ ಸಹ ಇರುತ್ತದೆ. ಇವೆರಡರಲ್ಲಿ ಉಭಯತ್ರಪ್ರಸಿದ್ಧತ್ವವನ್ನು ವಿವಕ್ಷಿಸಬೇಕು.

ಈ ಶ್ರುತಿಯಲ್ಲಿ ಜೀವಹಾಗೂ ಪರಮಾತ್ಮರಿಗೆ ಭೇದವು ಹೇಳಿಲ್ಲವೆಂದು ತಿಳಿಯಬಾರದು. ಏಕೆಂದರೆ, ಶ್ರುತಿಯಲ್ಲಿ ಈಶಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ. ಇದನ್ನಾದರೂ ಹೇಗೆ ನಿರ್ಣಯಿಸುತ್ತೀರಿ? ಎಂದರೆ 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಅಂತಹ ವ್ಯಕ್ತಿಯು ಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಲಾಗಿದೆ. ಹೀಗೆ ಪ್ರಾರಂಭಮಾಡಿ ಜೀವೇಶಭೇದವನ್ನು ವರ್ಣನೆ ಮಾಡಿರುವುದರಿಂದ ಇವೆಲ್ಲವೂ ಸಮಗ್ರವಾಗಿ ವಿಷ್ಣುಪ್ರಕರಣವೇ ಆಗಿದೆಯೆಂದು ನಿರ್ಣಯವಾಗುತ್ತದೆ.

## ಭಾವದೀಪ

### ಸೂತ್ರದಲ್ಲಿ ಸಾಧ್ಯ ಅಧ್ಯಾಹಾರ ಆವಶ್ಯಕ

**भावदीपः – प्रकरणात् ।। ईशादन्यत्वमिति ।।** जीवादन्यत्वस्योक्त्या तदन्यत्वं जीवेऽर्थात् सिद्धमित्येवमुक्तिः । एकप्रमेयतात्पर्यकानेकवाक्यात्मकप्रकरणस्य स्वान्तर्गतवाक्यं स्वतात्पर्यविषयपरमित्यनुमितिद्वारा तदन्तर्गत-विप्रतिपन्नशब्दार्थनिर्णायकत्वेन साक्षाज्जीवपरमात्मभेदसाधकत्वाद् योग्य-साध्योक्ति पूर्वं परम्परया प्रकरणादिति हेतुं योजयति – नात्रेति ।

"ಈಶಾದನ್ಯತ್ವಂ" ಎಂಬ ಶಬ್ದಕ್ಕೆ ಹೀಗರ್ಥ- ಜೀವರಿಗಿಂತ ಭೇದವನ್ನು ಹೇಳಿರುವುದರಿಂದ ಈಶನಗಿಂತ ಭೇದವು ಜೀವನಲ್ಲಿದೆ ಎಂಬುದು ಅರ್ಥಾತ್ ಸಿದ್ಧವಾಗುತ್ತದೆ. ಒಂದೇ ಪ್ರಮೇಯದಲ್ಲಿ ತಾತ್ಪರ್ಯವುಳ್ಳ ಅನೇಕ ವಾಕ್ಯಗಳ ಸಮೂಹವೇ ಪ್ರಕರಣ ಎನಿಸುತ್ತದೆ. "ಸ್ವಾಂತರ್ಗತವಾಕ್ಯಂ ಸ್ವತಾತ್ಪರ್ಯವಿಷಯಪರಂ" ಎಂಬ ಅನುಮಿತಿಯ ಮುಖಾಂತರ ಆ ವಾಕ್ಯಗಳ ಮಧ್ಯದಲ್ಲಿ ಸೇರಿರುವ ವಿಪ್ರತಿಪನ್ನವಾದ ಶಬ್ದಾರ್ಥವನ್ನು ನಿರ್ಣಯಮಾಡುತ್ತವೆ ಹೊರತು ನೇರವಾಗಿ ಜೀವಪರಮಾತ್ಮ ಭೇದವನ್ನು ನಿರ್ಣಯಿಸುವುದಿಲ್ಲ. ಈ ಕಾರಣದಿಂದ ಯೋಗ್ಯವಾದ ಸಾಧ್ಯವನ್ನು ಹೇಳುವ ಮೂಲಕ 'ಪ್ರಕರಣಾತ್' ಎಂಬ ಹೇತುವನ್ನು ಪರಂಪರಯಾ ಯೋಜನೆ ಮಾಡುತ್ತಿದ್ದಾರೆ "ನಾತ್ರ" ಇತ್ಯಾದಿ ವಾಕ್ಯದಿಂದ.

### ಶ್ರುತಿಲಿಂಗಗಳು ಪರಮಾತ್ಮ ಪರ

**भावदीपः – तदेवेति ।।** परमात्मार्थकत्वमेवेत्यर्थः । श्रुतिलिङ्गादेरुपक्रमादौ श्रुतत्वे तन्निर्णायकत्वेन लिङ्गत्वस्य वक्ष्यमाणत्वात् ।

'ತದೇವ' ಎಂಬ ಪದಕ್ಕೆ ಪರಮಾತ್ಮವೆಂಬ ಅರ್ಥವೇ ಎಂದರ್ಥ. ಶ್ರುತಿ ಹಾಗೂ ಲಿಂಗಾದಿಗಳು ಉಪಕ್ರಮಾದಿಗಳಲ್ಲಿ ಕೇಳಿಸುತ್ತಿದ್ದರೂ ಅದನ್ನು ನಿರ್ಣಯ ಮಾಡುವುದಕ್ಕಾಗಿ ಲಿಂಗವನ್ನು ಮುದೆ ಹೇಳುತ್ತಾರೆ.

### ಪರವಿದ್ಯಾವಿಷಯತ್ವವು ಉಪಕ್ರಮದಲ್ಲಿದೆ

**भावदीपः –** इह च परविद्याविषयत्वलिङ्गस्योपक्रमे श्रवणेनोपक्रमस्य वैष्णवत्वात्तदादिवाक्यसन्दर्भस्योपक्रान्तार्थविष्णुतात्पर्यकत्वरूपं तत्प्रकरणत्वमवधार्यत इति भावेन भाष्यं व्याचष्टे – **द्वे विद्ये इति ।।** प्रतीकग्रहणमेतत् ।

ಪ್ರಕೃತ ಪರವಿದ್ಯಾವಿಷಯತ್ವವೆಂಬ ಲಿಂಗವು ಪ್ರಾರಂಭದಲ್ಲಿ ಕೇಳಿಸುತ್ತಿದೆ. ಆದ್ದರಿಂದ ಉಪಕ್ರಮವು ವಿಷ್ಣುಪರವಾಗಿದೆ ಎಂದು ತಿಳಿಯುತ್ತದೆ. ಹೀಗೆ ಪ್ರಾರಂಭವಾಗುವ ಸಮಗ್ರ ವಾಕ್ಯಗಳೆಲ್ಲವು ವಿಷ್ಣುವಿನಲ್ಲಿಯೇ ತಾತ್ಪರ್ಯವನ್ನು ಹೊಂದಿರುತ್ತವೆ ಎಂದು ಪ್ರಕರಣವು ಹೀಗೆ ಸಾಧಿಸುತ್ತದೆ ಎಂದು ತಿಳಿಯಬೇಕು. ಈ ಅಭಿಪ್ರಾಯದಿಂದ ಭಾಷ್ಯವನ್ನು "ದ್ವೇ ವಿದ್ಯೇ" ಎಂಬ ಟೀಕಾವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಇದನ್ನು ಪ್ರತೀಕಗ್ರಹಣವೆಂದು ತಿಳಿಯಬೇಕು.

### 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬ ಶ್ರುತಿಯ ವ್ಯಾಖ್ಯಾನ

**भावदीपः –** 'अथ परा, यया तदक्षरमधिगम्यते' इत्यनेनेत्यर्थः । आरभ्य उपक्रम्य । परविद्याविषयवस्तूपक्रम्य तस्यैतद्वाक्यसन्दर्भे पठितत्वादस्य वाक्यसन्दर्भस्य तत्प्रकरणत्वमित्यर्थः ।

"ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" ಎಂಬುದರಿಂದ ಪರವಿದ್ಯಾವಿಷಯತ್ವವು ತಿಳಿಯುತ್ತಿದೆ ಎಂದರ್ಥ. "ಆರಭ್ಯ" ಪದಕ್ಕೆ 'ಉಪಕ್ರಮಿಸಿ' ಎಂದರ್ಥ. ಪರವಿದ್ಯಾವಿಷಯನಾದ

ವಸ್ತುವನ್ನು ಪ್ರಾರಂಭದಲ್ಲಿ ಹೇಳಿ ಅದೇ ವಾಕ್ಯಗಳ ಸಂದರ್ಭದಲ್ಲಿ ದ್ಯುಭ್ವಾದ್ಯಾಶ್ರಯತ್ವವನ್ನು ಪಠಿಸಿರುವುದರಿಂದ ಎಲ್ಲಾ ವಾಕ್ಯಗಳು ವಿಷ್ಣುಪರವೆಂದು ತಿಳಿಯುತ್ತವೆ. ಈ ವಿಷಯದಲ್ಲಿ ವಿಷ್ಣುಪ್ರಕರಣವು ಹೇತುವಾಗಿದೆ ಎಂದು ಭಾವಿಸಬೇಕು.

ಉಪಕ್ರಮದಲ್ಲಿ ಪ್ರಸಕ್ತನಾದ ವ್ಯಕ್ತಿಯೇ ಸಮಗ್ರ ಪ್ರಕರಣ ಪ್ರತಿಪಾದ್ಯ

**भावदीपः** – 'प्राणो ब्रह्म' इत्यादौ प्राणस्योपक्रमेऽपि तदुत्तरत्र विष्णुश्रुतिलिङ्गादिना प्राणस्याधीतत्वाभावेन तत्प्रकरणत्वं नेति व्यभिचारा दुपक्रमादित्यनुक्त्वा उपक्रम्याधीतत्वादित्युक्तम् । जायमानत्वादेर्बाधकस्य निरासेन साधकानामुक्त्या चोपक्रान्तविष्णोरेव सर्वत्राधीतत्वस्योक्तत्वान्न सिद्धिरिति भावः ।। ६ ।।

"ಪ್ರಾಣೋ ಬ್ರಹ್ಮ" ಇತ್ಯಾದಿ ಸ್ಥಳಗಳಲ್ಲಿ ವಸ್ತುತಃ ಪ್ರಾಣನೇ ಉಪಕ್ರಮದಲ್ಲಿ ಕೇಳಿಸುತ್ತಿದ್ದರೂ ಮುಂದೆ ವಿಷ್ಣುಲಿಂಗಾದಿಗಳು ಇರುವುದರಿಂದ ಪ್ರಾಣನನ್ನು ತಿಳಿಯಲು ಸಾಧ್ಯವಿಲ್ಲ. ಹಾಗಾಗಿ ಇದನ್ನು ಪ್ರಾಣಪ್ರಕರಣವೆಂದು ಹೇಳಿದರೆ ವ್ಯಭಿಚಾರ ಬರುತ್ತದೆ. ಹಾಗಾಗಿ "ಉಪಕ್ರಮಾತ್" ಎಂದಷ್ಟೇ ಹೇಳದೆ "ಉಪಕ್ರಮ್ಯಾಧೀತತ್ವಾತ್" ಎಂಬುದಾಗಿ ಟೀಕೆಯಲ್ಲಿ ಹೇಳಿರುತ್ತಾರೆ. "ಜಾಯಮಾನತ್ವಾದೇಃ" ಮೊದಲಾದ ಬಾಧಕಗಳನ್ನು ನಿರಾಸೆ ಮಾಡುವ ಮೂಲಕ ಸಾಧಕಗಳನ್ನು ಹೇಳಿರುವುದರಿಂದ ಉಪಕ್ರಮದಲ್ಲಿ ಪ್ರಸಕ್ತನಾದ ವಿಷ್ಣುವೇ ಸಮಗ್ರ ಪ್ರಕರಣದಿಂದ ಅಧ್ಯಯನ ಮಾಡಲು ಅರ್ಹನಾಗಿದ್ದಾನೆ. ಆದ್ದರಿಂದ "ವಿಷ್ಣುಪ್ರಕರಣತ್ವಾತ್" ಎಂಬ ಹೇತುವಿಗೆ ಅಭ್ಯುಚ್ಚಯ ದೋಷವು ಬರುವುದಿಲ್ಲವೆಂದು ತಿಳಿಯಬೇಕು.

ವಿಶೇಷವಿಚಾರ – 'ಪ್ರಕರಣಾತ್' ಎಂಬುದು ಆರನೆಯ ಸೂತ್ರ. ಭೇದವ್ಯಪದೇಶವನ್ನು ಹೇಳಿದ ಮೇಲೆ ಆ ಭೇದವು ಅನ್ಯವಿಷಯಕವಾಗಬಹುದಲ್ಲವೇ? ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಅದರ ನಿರಾಸಕ್ಕೋಸ್ಕರ ಈ ಸೂತ್ರವು ಹೊರಟಿದೆ. ಪ್ರಕರಣದ ಬಲದಿಂದ ಜೀವಬ್ರಹ್ಮಭೇದವನ್ನೇ ಸಾಧಿಸಬೇಕೆಂದು ಈ ಸೂತ್ರವು ಸಾಧಿಸುತ್ತಿದೆ. ಆದ್ದರಿಂದ ಈ ಸೂತ್ರದಲ್ಲಿ 'ಚ' ಶಬ್ದವನ್ನು ಹೇಳಿರುವುದಿಲ್ಲ.

## ಬ್ರಹ್ಮಸೂತ್ರ

### 'ಸ್ಥಿತ್ಯದನಾಭ್ಯಾಂಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – ।। स्थित्यदनाभ्यां च ।।७।।**

ಬ್ರಹ್ಮನಿಗೆ ಕರ್ಮಫಲ ಭೋಗವಿಲ್ಲ. ಜೀವನಿಗೆ ಕರ್ಮಫಲಭೋಗದಿಂದಲೇ ಜೀವನ. ಹೀಗೆ ವಿರುದ್ಧವಾದ ಧರ್ಮಗಳನ್ನು ಜೀವೇಶ್ವರರಿಗೆ ಹೇಳಿರುವುದರಿಂದಲೂ ಅವರಿಬ್ಬರಿಗೆ ಐಕ್ಯವನ್ನು ವಿವಕ್ಷಿಸಬಾರದು.

ಈಶ ಹಾಗೂ ಜೀವರಿಗೆ 'ದ್ವಾ ಸುಪರ್ಣಾ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಕರ್ಮಫಲಭೋಗದಿಂದ ಜೀವನ ಸ್ಥಿತಿ, ಕರ್ಮಫಲಭೋಗವಿಲ್ಲದೆ ಬ್ರಹ್ಮನ ಸ್ಥಿತಿ ಹೀಗೆ ವಿರುದ್ಧವಾದ ಧರ್ಮಗಳನ್ನು ಹೇಳಿರುವುದರಿಂದ ಐಕ್ಯವನ್ನು ಹೇಳಬಾರದು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ದ್ಯುಭ್ವಾದ್ಯಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ವಿರುದ್ಧ ಧರ್ಮವುಳ್ಳ ಜೀವೇಶ್ವರರಿಗೆ ಅಭೇದವು ಕೂಡದು

**ब्रह्मसूत्रभाष्यम् –**

**'द्वा सुपर्णा सयुजा सखाया समानं वृक्षं परिषस्वजाते ।**
**तयोरन्यः पिप्पलं स्वाद्वत्त्यनश्नन्नन्यो अभिचाकशीति ।।' (मुं.३-१-१)**
**इतीशजीवयोः स्थित्यदनोक्तेः ।।७।।**

**।। इति द्युभ्वाद्यधिकरणम् ।। १ ।।**

ಅನುವಾದ - ''ಎರಡು ಹಕ್ಕಿಗಳು ಸ್ನೇಹಿತರಂತೆ ದೇಹವೆಂಬ ಒಂದೇ ಮರದಲ್ಲಿ ಆಶ್ರಯಿಸಿಕೊಂಡಿವೆ ಆ ಪಕ್ಷಿಗಳಲ್ಲಿ ಜೀವನೆಂಬ ಪಕ್ಷಿಯು ಅಶ್ವತ್ಥವೃಕ್ಷದ ಫಲವನ್ನು ರಸವತ್ತಾಗಿದೆ ಎಂಬ ಭ್ರಾಂತಿಯಿಂದ ತಿನ್ನುತ್ತದೆ. ಮತ್ತೊಂದು ಈಶ ಎಂಬ ಪಕ್ಷಿಯು ಏನನ್ನೂ ತಿನ್ನದೆ ವರ್ಚಸ್ವಿಯಾಗಿ ಒಂದೇ ರೀತಿಯಾಗಿ ಕುಳಿತಿದೆ''. ಹೀಗೆ ಈಶ ಮತ್ತು ಜೀವರಿಗೆ ತಿನ್ನದಿರುವಿಕೆ ಮತ್ತು ತಿನ್ನುವಿಕೆ ಎಂಬ ವಿರುದ್ಧಧರ್ಮಗಳನ್ನು ಹೇಳಿರುವ ಕಾರಣ ಜೀವೇಶ್ವರರ ಅಭೇದವು ಅಸಂಭಾವಿತವಾಗಿದೆ. ಈ ಎಲ್ಲ ಕಾರಣಗಳಿಂದ ದ್ಯುಭ್ವಾದ್ಯಾಯತನತ್ವ ಎಂಬ ಧರ್ಮವು ಭಗವಂತನಲ್ಲಿಯೇ ಸಮನ್ವಯವಾಗುತ್ತದೆ.

ಪ್ರತಿಪದಾರ್ಥ -- ಜೀವೇಶಭೇದಕ್ಕೆ ಶ್ರುತಿಯಷ್ಟೇ ಪ್ರಮಾಣವಲ್ಲ ಲಿಂಗವೂ ಪ್ರಮಾಣವಾಗಿದೆಯೆಂದು ಸೂತ್ರಕಾರರೇ ಹೇಳುತ್ತಿದ್ದಾರೆ.

ಸಯುಜಾ = ಒಟ್ಟಿಗೆ ಸೇರಿ, ಸಖಾಯ = ಸ್ನೇಹಿತರಂತೆ ವರ್ತಿಸುವ, ದ್ವಾ = ಎರಡು, ಸುಪರ್ಣಾ = ಜೀವ ಹಾಗೂ ಈಶ್ವರರೆಂಬ ಪಕ್ಷಿಗಳು, ಸಮಾನಂ ವೃಕ್ಷಂ = ದೇಹವೆಂಬ ಒಂದೇ ಮರವನ್ನು, ಪರಿಷಸ್ವಜಾತೇ = ಆಲಂಗಿಸಿವೆ. ತಯೋಃ = ಈ ಎರಡು ಪಕ್ಷಿಗಳಲ್ಲಿ, ಏಕಂ = ಜೀವನೆಂಬ ಪಕ್ಷಿಯು,

ಪಿಪ್ಪಲಂ = ಅಶ್ವತ್ಥಫಲವನ್ನು, ಸ್ವಾದ್ವತ್ತಿ = ಬಹು ರುಚಿಯಾಗಿದೆಯೆಂಬ ಭ್ರಾಂತಿಯಿಂದ ತಿನ್ನುತ್ತದೆ. ಅನ್ಯಃ = ಮತ್ತೊಂದು ಈಶನೆಂಬ ಪಕ್ಷಿಯು, ಅನಶ್ನನ್ = ಏನನ್ನೂ ತಿನ್ನದೆ, ಅಭಿಚಾಕಶೀತಿ = ಒಂದೇ ರೀತಿಯಲ್ಲಿ ವರ್ಚಸ್ವಿಯಾಗಿ ಕುಳಿತಿದೆ. ಇತಿ ಈಶಜೀವಯೋಃ = ಹೀಗೆ ಭಗವಂತನಿಗೆ ಮತ್ತು ಜೀವರಿಗೆ, ಸ್ಥಿತ್ಯದನೋಕ್ತೇಃ = ತಿನ್ನುವಿಕೆ ಹಾಗೂ ತಿನ್ನದಿರುವಿಕೆ ಎಂಬ ಈ ವಿರುದ್ಧಧರ್ಮಗಳನ್ನು ಹೇಳಿರುವುದರಿಂದ ಜೀವೇಶ್ವರರ ಅಭೇದವು ಅಸಂಭಾವಿತವಾಗಿದೆ. ಆದ್ದರಿಂದ ದ್ಯುಭ್ವಾದ್ಯಾಯತನತ್ವ ಮೊದಲಾದ ಧರ್ಮಗಳೆಲ್ಲವೂ ಭಗವಂತನಲ್ಲಿಯೇ ಸಮನ್ವಯವಾಗುತ್ತವೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ದ್ಯುಭ್ವಾದ್ಯಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### 'ದ್ವಾ ಸುಪರ್ಣಾ' ಎಂಬ ಶ್ರುತಿಯ ಸಮನ್ವಯ

**सत्तर्कदीपावळिः – 'द्वा सुपर्णा' इत्यनेन पापकर्तुर्जीवात् कर्मफलमनश्नुतो दीप्यमानस्य द्युभ्वाद्याश्रयस्य भेदव्यपदेशादपि नासौ जीव इत्याह – स्थितीति ।। अतो द्युभ्वाद्याश्रयो विष्णुरिति सिद्धम् ।।**

**।। इति श्रीपद्मनाभतीर्थविरचितसत्तर्कदीपावळ्याम्ः द्युभ्वाद्यधिकरणम् ।।**

'ದ್ವಾ ಸುಪರ್ಣಾ' ಇತ್ಯಾದಿ ಶ್ರುತಿಯಲ್ಲಿ ಪಾಪಕರ್ಮದಲ್ಲಿ ಮುಳುಗಿದ ಜೀವನಿಗಿಂತ ಕರ್ಮಫಲವನ್ನು ಭೋಗಿಸದ ದೇದೀಪ್ಯಮಾನನಾದ ದ್ಯುಭ್ವಾದ್ಯಾಶ್ರಯನಿಗೆ ಭೇದವನ್ನು ಹೇಳಿರುವ ಕಾರಣದಿಂದಲೂ ಜೀವನು ದ್ಯುಭ್ವಾದ್ಯಾಶ್ರಯನಾಗಲು ಸಾಧ್ಯವಿಲ್ಲ. ಇದನ್ನು ಪ್ರತಿಪಾದಿಸುವುದಕ್ಕಾಗಿ 'ಸ್ಥಿತ್ಯದನಾಭ್ಯಾಂ ಚ' ಎಂಬ ಸೂತ್ರವು ಹೊರಟಿದೆ. ಜೀವನಿಗಿಂತ ವಿಲಕ್ಷಣವಾದ ಧರ್ಮವನ್ನು ಶ್ರುತಿ ವಿಷ್ಣುವಿಗೆ ಹೇಳುತ್ತಿದೆ. ಆದ್ದರಿಂದ ದ್ಯುಭ್ವಾದ್ಯಾಶ್ರಯನಾದವನು ವಿಷ್ಣುವೇ ಆಗುತ್ತಾನೆಂದು ಸಿದ್ಧವಾಯಿತು.

।। ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ದ್ಯುಭ್ವಾದ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ।।

## ತತ್ವಪ್ರದೀಪ

### ಕರ್ಮಫಲಭೋಕ್ತೃವಲ್ಲದ ಈಶ್ವರನ ಜೊತೆ ಜೀವನಿಗೆ ಐಕ್ಯವು ಸಲ್ಲದು

**तत्वप्रदीपः – स्थित्यदनाभ्यां च ।। ईशस्यानश्नतः स्थित्युक्तेर्जीवस्य कर्मफलादनोक्तेश्च न तयोरैक्यं वाच्यम् ।**

ಈಶ್ವರನು ಕರ್ಮಫಲವನ್ನು ಭುಂಜಿಸದೇ ಕುಳಿತಿದ್ದಾನೆ. ಜೀವನಾದರೂ ಕರ್ಮಫಲವನ್ನು ಭೋಗಿಸುತ್ತಾ ಕುಳಿತಿದ್ದಾನೆ. ಹೀಗೆ ಉಪನಿಷತ್ತು ಹೇಳುತ್ತಿರುವುದರಿಂದ ಜೀವೇಶ್ವರರಿಗೆ ಐಕ್ಯವನ್ನು ಸರ್ವಥಾ ವಿವಕ್ಷಿಸಬಾರದು.

ಭಾಗವತದಲ್ಲಿ 'ದ್ವಾಸುಪರ್ಣಾ' ಶ್ರುತ್ಯರ್ಥ

**तत्वप्रदीपः –**

**''सुपर्णावेतौ सयुजौ सखायौ यदृच्छया कृतनीडौ च वृक्षे ।**
**एकस्तयोः खादति पिप्पलान्नमन्यो निरन्नोऽपि बलेन भूयान् ।।**
**आत्मानमन्यं च स वेद विद्वानपिप्पलादो न तु पिप्पलादः ।**
**योऽविद्ययाऽन्धस्स तु नित्यबद्धो विद्यामयो यस्स तु नित्यमुक्तः ।।''**
**इति च भागवते ।**

ಸುಪರ್ಣಾವೇತೌ ಸಯುಜೌ ಸಖಾಯೌ ಯದೃಚ್ಛಯಾ ಕೃತನೀಡೌ ಚ ವೃಕ್ಷೇ ।
ಏಕಸ್ತಯೋಃ ಖಾದಿತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ್ ಬೂಯಾನ್ ॥

ದೇಹವೆಂಬ ಅಶ್ವತ್ಥವೃಕ್ಷದಲ್ಲಿ ಜೀವ-ಪರಮಾತ್ಮ ಎಂಬೆರಡು ಸ್ನೇಹಿತ ಪಕ್ಷಿಗಳು ಒಟ್ಟಿಗೆ ಗೂಡು ಮಾಡಿವೆ. ಅವೆರಡರಲ್ಲಿ ಜೀವವೆಂಬ ಹಕ್ಕಿಯು ಕರ್ಮಫಲವೆಂಬ ಅಶ್ವತ್ಥಫಲವನ್ನು ತಿನ್ನುತ್ತಿದೆ. ಹಣ್ಣನ್ನು ತಿನ್ನದಿದ್ದರೂ ಪರಮಾತ್ಮನ ಎಂಬ ಮತ್ತೊಂದು ಹಕ್ಕಿಯು ಬಲಿಷ್ಠವಾಗಿದೆ.

ಆತ್ಮಾನಮನ್ಯಂ ಚ ಸ ವೇದ ವಿದ್ವಾನಪಿಪ್ಪಲಾದೋ ನ ತು ಪಿಪ್ಪಲಾದಃ ।
ಯೋಽವಿದ್ಯಯಾಽಂಧಃ ಸ ತು ನಿತ್ಯಬದ್ಧೋ ವಿದ್ಯಾಮಯೋ ಯಃ ಸ ತು ನಿತ್ಯಮುಕ್ತಃ ॥
(ಇತಿ ಚ ಭಾಗವತೇ)

ತನ್ನನ್ನು ಹಾಗೂ ತನಗಿಂತ ಭಿನ್ನನಾದ ಜೀವನನ್ನು ತಿಳಿದಿರುವ ಪರಮಾತ್ಮನು ಪಿಪ್ಪಲ ಫಲವನ್ನು ತಿನ್ನದ ಕಾರಣ 'ಅಪಿಪ್ಪಲಾದ' ಎಂದು ಕರೆಸಿಕೊಳ್ಳುತ್ತಾನೆ. ಆದ್ದರಿಂದ ಇವನು ವಿದ್ವಾನ್ ಎಂದು ಕರೆಸಿಕೊಳ್ಳುತ್ತಾನೆ. ಪಿಪ್ಪಲಾದನೆನಿಸಿದ ಜೀವನು ವಿದ್ವಾನ್ ಎಂದು

ಕರೆಸಿಕೊಳ್ಳುವುದಿಲ್ಲ. ಅಜ್ಞಾನದಿಂದ ಕುರುಡನಾದ ಜೀವನು ನಿತ್ಯಬದ್ಧನಾಗಿದ್ದಾನೆ. ಜ್ಞಾನಸ್ವರೂಪನಾದ ಆ ಪರಮಾತ್ಮನು ನಿತ್ಯಮುಕ್ತನಾಗಿದ್ದಾನೆ. ಹೀಗೆ ಭಾಗವತವು ಹೇಳುತ್ತಿದೆ.

### ಭೋಗನಿರ್ಣಯದಲ್ಲಿ 'ದ್ವಾ ಸುಪರ್ಣಾ' ಶ್ರುತ್ಯರ್ಥ

**तत्वप्रदीपः –**

**''अनत्तृत्वं हरेर्दुःखानत्तृत्वादुच्यते सदा ।**
**विषयान् विनाऽपि पूर्णत्वात् स्वरूपानन्दभोगिनः ।।**
**शुभमत्त्येव हि सदा सर्वत्रावस्थितं विभुः ।**
**स्वादोरदनवद्धयति जीवोऽस्वाद्वपि यत्सदा ।**
**अनारतं पारवश्यात् स्वाद्वत्तीति ततः श्रुतः'' इति भोगनिर्णये ।।**

ಅನತ್ತೃತ್ವಂ ಹರೇರ್ದುಃಖಾನತ್ತೃತ್ವಾದುಚ್ಯತೇ ಸದಾ ।
ವಿಷಯಾನ್ ವಿನಾऽಪಿ ಪೂರ್ಣತ್ವಾತ್ ಸ್ವರೂಪಾನಂದಭೋಗಿನಃ ॥

ದುಃಖಭೋಗವನ್ನು ಯಾವಾಗಲೂ ಅನುಭವಿಸದ ಕಾರಣ ಶ್ರೀಹರಿಯಲ್ಲಿ ಅನತ್ತೃತ್ವವನ್ನು ಹೇಳಲಾಗುತ್ತದೆ. ಸ್ವರೂಪಾನಂದವನ್ನು ಭೋಗಿಸುವ ಶ್ರೀಹರಿಯು ವಿಷಯಭೋಗಗಳಿಲ್ಲದ್ದರೂ ಕೂಡ ಪೂರ್ಣನಾಗಿದ್ದಾನೆ.

ಶುಭಮತ್ತ್ಯೇವ ಹಿ ಸದಾ ಸರ್ವತ್ರಾವಸ್ಥಿತಂ ವಿಭುಃ ।
ಸ್ವಾದೋರದನವದ್ಧ್ಯತಿ ಜೀವೋऽಸ್ವಾದ್ವಪಿ ಯತ್ಸದಾ ।
ಅನಾರತಂ ಪಾರವಶ್ಯಾತ್ ಸ್ವಾದ್ವತ್ತೀತಿ ತತಃ ಶ್ರುತಃ ॥

ಇತಿ ಭೋಗನಿರ್ಣಯೇ

ಎಲ್ಲರಲ್ಲಿ ನೆಲೆಸಿರುವ ವ್ಯಾಪ್ತನಾದ ಶ್ರೀಹರಿಯು ಶುಭವನ್ನಷ್ಟೇ ಸದಾ ಭುಂಜಿಸುತ್ತಾನೆ. ಜೀವನು ಅಸ್ವಾದುವಾದುದ್ದನ್ನು ಸ್ವಾದುಪದಾರ್ಥವನ್ನು ಮೆಲ್ಲುವಂತೆ ನಿರಂತರವಾಗಿ ಭುಂಜಿಸುತ್ತಾನೆ. ನಿರಂತರವಾಗಿ ಅಸ್ವತಂತ್ರನಾದ ಕಾರಣ ಸ್ವಾದುವನ್ನು ತಿನ್ನುತ್ತಾನೆಂದು ಶ್ರುತಿಯು ಹೇಳುತ್ತದೆ.

ಹೀಗೆ ಭೋಗನಿರ್ಣಯವು ಹೇಳುತ್ತದೆ.

### ಪರಮಭೋಗದಲ್ಲಿ 'ದ್ವಾ ಸುಪರ್ಣಾ' ಶ್ರುತ್ಯರ್ಥ

**तत्वप्रदीपः –**

**''अस्वादु स्वादुवद्धयत्ति जीवो नैव जनार्दनः ।**
**अतो नात्तीति वचनमश्नतोऽपि शुभं सदा'' इति परमभोगे ।।**

ಅಸ್ವಾದು ಸ್ವಾದುವದ್ಧ್ಯತ್ತಿ ಜೀವೋ ನೈವ ಜನಾರ್ದನಃ।
ಅತೋ ನಾಸ್ತೀತಿ ವಚನಮಶ್ನತೋಽಪಿ ಶುಭಂ ಸದಾ ॥

ಇತಿ ಪರಮಭೋಗೇ ॥

ಅಸ್ವಾದು ಪದಾರ್ಥವನ್ನು ಸ್ವಾದುಪದಾರ್ಥದಂತೆ ಭುಂಜಿಸುವವನು ಜೀವನು ಮಾತ್ರ ಹೊರತು ಜನಾರ್ದನನಲ್ಲ. ಆದ್ದರಿಂದ ಜನಾರ್ದನನು ಏನನ್ನೂ ತಿನ್ನುವುದಿಲ್ಲ ಎಂಬ ಮಾತು ಅಸ್ವಾದು ಪದಾರ್ಥವನ್ನು ತಿನ್ನುವುದಿಲ್ಲ ಎಂಬರ್ಥದಲ್ಲಿ ಪ್ರಯುಕ್ತವಾಗುತ್ತದೆ. ಆದರೆ ಶುಭಪದಾರ್ಥವನ್ನು ನಿರಂತರವಾಗಿ ಅನುಭವಿಸುತ್ತಾನೆ.

### ಸ್ವಾಭಾವ್ಯದಲ್ಲಿ 'ದ್ವಾ ಸುಪರ್ಣಾ' ಶ್ರುತ್ಯರ್ಥ

**तत्वप्रदीपः –**

**''साशनानशनत्वेन नरदेवौ यथोदितौ ।**
**अत्तिं विनाऽप्यदौर्बल्यात् तयाऽनत्तिर्हरेर्भुजः'' इति स्वाभाव्ये ।।**

ಸಾಶನಾನಶನತ್ವೇನ ನರದೇವೌ ಯಥೋದಿತೌ।
ಅತ್ತಿಂ ವಿನಾಽಪ್ಯದೌರ್ಬಲ್ಯಾತ್ ತಥಾಽನತ್ತಿರ್ಹರೇರ್ಭುಜಃ॥

ಇತಿ ಸ್ವಾಭಾವ್ಯೇ ॥

ಜೀವನು ಊಟ ಮಾಡುತ್ತಾನೆ, ಈಶನು ಊಟ ಮಾಡುವುದಿಲ್ಲ, ಈಶನು ಊಟ ಮಾಡದಿದ್ದರೂ ಬಲಿಷ್ಠನಾಗಿದ್ದಾನೆ. ಆದ್ದರಿಂದ ಅವನ ಬಗ್ಗೆ ಶ್ರುತಿಯು ಏನನ್ನು ತಿನ್ನುವುದಿಲ್ಲವೆಂದು ಹೇಳುತ್ತದೆ. ಹೀಗೆ ಸ್ವಾಭಾವ್ಯವಚನವಿದೆ.

## ಕೂರ್ಮಸಂಹಿತೆಯಲ್ಲಿ 'ದ್ವಾ ಸುಪರ್ಣಾ' ಶ್ರುತ್ಯರ್ಥ

तत्वप्रदीपः –

''सुपर्णौ द्वौ शरीरस्थौ जीवश्च परमस्तथा ।
पारवश्यादनाज्जीवस्तत्रात्तीति श्रुतौ श्रुतः ।।
स्ववशेनादनाद्विष्णुर्नात्तीत्यत्ताऽपि संश्रुतः ।
स एव हि शुभस्यात्ता जीवोऽत्त्यस्यैव वेदनात् ।।''

इति कूर्मसंहितायाम् ।।

ಸುಪರ್ಣೌ ದ್ವೌ ಶರೀರಸ್ಥೌ ಜೀವಶ್ಚ ಪರಮಸ್ತಥಾ ।
ಪಾರವಶ್ಯಾದನಾಜ್ಜೀವಸ್ತತ್ರಾತ್ತೀತಿ ಶ್ರುತೌ ಶ್ರುತಃ ॥
ಸ್ವವಶೇನಾದನಾದ್ವಿಷ್ಣುರ್ನಾತ್ತೀತ್ಯತ್ತಾಽಪಿ ಸಂಶ್ರುತಃ ।
ಸ ಏವ ಹಿ ಶುಭಸ್ಯಾತ್ತಾ ಜೀವೋಽತ್ತ್ಯಸ್ಯೈವ ವೇದನಾತ್ ॥

ಇತಿ ಕೂರ್ಮಸಂಹಿತಾಯಾಮ್

ಪ್ರಾಕೃತ ಶರೀರದಲ್ಲಿ ಜೀವ ಹಾಗೂ ಪರಮಾತ್ಮ ಎಂಬೆರಡು ಹಕ್ಕಿಗಳು ನೆಲೆಸಿವೆ. ಅಸ್ವತಂತ್ರನಾಗಿ ಭುಂಜಿಸುವ ಕಾರಣ ಜೀವನು 'ಅತ್ತಿ' ಎಂದು ಶ್ರುತನಾಗಿದ್ದಾನೆ. ಸ್ವತಂತ್ರವಾಗಿ ಭುಂಜಿಸುವ ಕಾರಣ ವಿಷ್ಣುವು 'ನ ಅತ್ತಿ' ಎಂದು ಶ್ರುತನಾಗಿದ್ದಾನೆ. ಆ ವಿಷ್ಣುವೊಬ್ಬನೇ ಶುಭವಾದ ಸಾರಭಾಗವನ್ನು ತಿನ್ನುತ್ತಾನೆ. ಜೀವನು ದುಃಖದಿಂದ ಕರ್ಮಫಲವನ್ನು ಅನುಭವಿಸುತ್ತಾನೆ. ಹೀಗೆ ಕೂರ್ಮಸಂಹಿತೆಯು 'ದ್ವಾಸುಪರ್ಣಾ' ಎಂಬ ಶ್ರುತಿಯನ್ನು ವ್ಯಾಖ್ಯಾನ ಮಾಡುತ್ತದೆ.

## ಅತತ್ವಾವೇದಕವಾದರೆ ಪ್ರಮಾಣವೇ ಅಲ್ಲ

**तत्वप्रदीपः – भेदवाक्यमतत्वावेदकमिति चेत् तदयुक्तम् । अतत्वावेदकं चेन्न प्रमाणम् । प्रमाणं चेन्नातत्वावेदकम् ।**

ಭೇದವಾಕ್ಯಗಳೆಲ್ಲವೂ ಅತತ್ತ್ವಾವೇದಕವಲ್ಲವೇ ? ಎಂಬ ಆಕ್ಷೇಪ ಅಯುಕ್ತವಾಗಿದೆ. ಅತತ್ತ್ವಾವೇದಕವಾದಲ್ಲಿ ಪ್ರಮಾಣವೆಂದೇ ಹೇಳಲಾಗದು. ಪ್ರಮಾಣವೆಂದು ಹೇಳಿದರೆ ಅತತ್ತ್ವಾವೇದಕವಾಗುವುದಿಲ್ಲ.

ವಿಶೇಷವಿಚಾರ - ಅದ್ವೈತಿಗಳು - 'ದ್ವಾಸುಪರ್ಣಾ' ಇತ್ಯಾದಿ ಶ್ರುತಿಗಳು ಭೇದವನ್ನು ಪ್ರತಿಪಾದನೆ ಮಾಡುತ್ತಿದೆ ಎಂದು ಒಪ್ಪುತ್ತೇವೆ. ಆದರೆ ಆ ಭೇದವು ವ್ಯಾವಹಾರಿಕವೇ ಹೊರತು ಪಾರಮಾರ್ಥಿಕವಲ್ಲ. ಅಂಥ ವೇದಪ್ರತಿಪಾದಕವಾದ ವಾಕ್ಯಗಳೆಲ್ಲವೂ ಅತತ್ತ್ವಾವೇದಕಗಳಾಗಿವೆ. ಆದ್ದರಿಂದ ನಮ್ಮ ಐಕ್ಯಸಿದ್ಧಾಂತಕ್ಕೆ ಭೇದವಾಕ್ಯಗಳ ವಿರೋಧವು ಪ್ರಾಪ್ತವಾಗುವುದಿಲ್ಲ.

ತತ್ವವಾದಿಗಳು - ನಿಮ್ಮ ಅಭಿಪ್ರಾಯವೇನು ? 'ದ್ವಾ ಸುಪರ್ಣಾ' ಇತ್ಯಾದಿ ವಾಕ್ಯಗಳು ಅತತ್ತ್ವಾವೇದಕವೆಂದರೆ ಏನರ್ಥ ? ಪ್ರಮಾಣವಲ್ಲವೆಂದೋ? ಪ್ರಮಾಣವೆಂದೋ ? ತತ್ತ್ವಾವೇದಕವಾಕ್ಯಗಳು ಯಾವುವು ?

ಅದ್ವೈತಿಗಳು - ಪ್ರಮಾಣಗಳು ಎರಡು ವಿಧ - ೧) ತತ್ತ್ವಾವೇದಕಪ್ರಮಾಣ, ೨) ಅತತ್ತ್ವಾವೇದಕಪ್ರಮಾಣ ಎಂದು. ಪಂಚಮಹಾವಾಕ್ಯಗಳು ತತ್ತ್ವಾವೇದಕಪ್ರಮಾಣಗಳಾಗಿವೆ. ಉಳಿದೆಲ್ಲಾ ವೇದವಾಕ್ಯಗಳು ಅತತ್ತ್ವಾವೇದಕಪ್ರಮಾಣ ವಾಕ್ಯಗಳಾಗಿವೆ. ಪ್ರಕೃತ ಭೇದಪ್ರತಿಪಾದಕವಾದ 'ದ್ವಾಸುಪರ್ಣಾ' ಇತ್ಯಾದಿ ವಾಕ್ಯಗಳೂ ಕೂಡ ಅತತ್ತ್ವಾವೇದಕ-ಪ್ರಮಾಣಗಳೆಂದು ಪರಿಗಣಿಸುತ್ತೇವೆ. ಐಕ್ಯಸಿದ್ಧಾಂತಕ್ಕೆ ಅತತ್ತ್ವಾವೇದಕಪ್ರಮಾಣಗಳಿಂದ ವಿರೋಧ ಬಂದರೂ ಕೂಡ, ತತ್ತ್ವಾವೇದಕಪ್ರಮಾಣಗಳಿಂದ ವಿರೋಧ ಬಾರದ ಕಾರಣ ಅಭೇದಪ್ರತಿಪಾದನೆಗೆ ಯಾವುದೇ ಭಂಗ ಬರುವುದಿಲ್ಲ.

ತತ್ವವಾದಿಗಳು - ನಿಮ್ಮ ಈ ಮಾತೇ ವ್ಯಾಹತವಾಗಿದೆ. ಅತತ್ತ್ವಾವೇದಕ ಎಂಬ ಪದಕ್ಕೆ ತತ್ತ್ವವನ್ನು ತಿಳಿಸದೇ ಇರುವ ಪ್ರಮಾಣ ಎಂದರ್ಥ. ಆದ್ದರಿಂದ 'ಅತತ್ತ್ವಾವೇದಕಪ್ರಮಾಣ' ಎಂಬ ಮಾತೇ ವ್ಯಾಹತವಾಯಿತು. ಅತತ್ತ್ವಾವೇದಕ ಎಂದರೆ ಪ್ರಮಾಣವಲ್ಲ ಎಂದರ್ಥ. ಪುನಃ ಪ್ರಮಾಣ ಎಂಬ ಪದದಿಂದ ಪ್ರಾಮಾಣ್ಯವನ್ನು ಹೇಳಿದರೆ ಸ್ವವಚನ ವಿರೋಧ ಬರುತ್ತದೆ. ಇನ್ನು ಪ್ರಮಾಣ ಎಂದು ಹೇಳಿದರೆ ಅತತ್ತ್ವಾವೇದಕ ಆಗುವುದಿಲ್ಲ. ಆದ್ದರಿಂದ 'ಪ್ರಮಾಣವು ಅತತ್ತ್ವಾವೇದಕವಾಗಿದೆ' ಎಂಬುದೂ ಕೂಡ ವ್ಯಾಹತವಾಗುತ್ತದೆ.

### ಅತತ್ವಾವೇದಕವಾದ ರಜತಭ್ರಾಂತಿಯು ಅಪ್ರಮಾಣ

**तत्वप्रदीपः – अतत्वावेदकत्वाद्धि रजतभ्रान्तिरमानमित्युच्यते ।**

ಅತತ್ವಾವೇದಕವಾಗಿರುವುದರಿಂದ ರಜತಭ್ರಾಂತಿಯು ಅಪ್ರಮಾಣವಾಗಿದೆ ಎಂದು ಎಲ್ಲರೂ ಹೇಳುತ್ತಾರೆ.

ವಿಶೇಷ ವಿಚಾರ - ಅದ್ವೈತಿಗಳು - ಶುಕ್ತಿಯನ್ನು ನೋಡಿದಾಗ 'ಇದಂ ರಜತಂ' ಎಂದು ವ್ಯವಹರಿಸುತ್ತಾರೆ. ಈ ವ್ಯವಹಾರವು ತತ್ಕಾಲದಲ್ಲಿ ಹೇಗೆ ಸತ್ಯವಾಗಿದೆಯೋ, ಅದರಂತೆ ಭೇದಪ್ರತಿಪಾದಕವಾದ ವಾಕ್ಯಗಳು ತತ್ಕಾಲದಲ್ಲಷ್ಟೇ ಸತ್ಯವಾಗಿರುತ್ತದೆ. ಆದ್ದರಿಂದ ಇಂಥ ವಾಕ್ಯಗಳನ್ನು ಅತತ್ವಾವೇದಗಳೆಂದು ಹೇಳುತ್ತೇವೆ.

ತತ್ವವಾದಿಗಳು - ಶುಕ್ತಿಯನ್ನು ನೋಡಿದಾಗ 'ಇದಂ ರಜತಂ' ಎಂದು ಜ್ಞಾನ ಬರುತ್ತದೆ. ಇದು ಭ್ರಾಂತ್ಯಾತ್ಮಕವಾದ್ದರಿಂದ ಅಪ್ರಮಾಣವೆಂದು ಎಲ್ಲರೂ ಒಪ್ಪಿದ್ದಾರೆ. ಹೊರತು, ವ್ಯವಹಾರ ಕಾಲದಲ್ಲಿ ಪ್ರಮಾಣವಾದ್ದರಿಂದ ತತ್ತ್ವಾವೇದಕಪ್ರಮಾಣವೆಂದು ಯಾರೂ ಹೇಳುವುದಿಲ್ಲ. ಶುಕ್ತಿರಜತಜ್ಞಾನವು ಹೇಗೆ ಅಪ್ರಾಮಾಣವೋ, ಅದರಂತೆ ನೀವು ಹೇಳುವ ವಿಶ್ವಮಿಥ್ಯಾತ್ವವೂ ಕೂಡ ಅಪ್ರಮಾಣವೇ ಆಗಬೇಕು. ಹೀಗಿರುವಾಗ ಶುಕ್ತಿರಜತಜ್ಞಾನವನ್ನು ಅತತ್ವಾವೇದಕ-ಪ್ರಮಾಣವೆಂದು ಒಪ್ಪಲು ಹೇಗೆ ಸಾಧ್ಯವಿಲ್ಲವೋ ? ಅದರಂತೆ ಭೇದಪ್ರತಿಪಾದಕವಾದ ವಾಕ್ಯಗಳನ್ನೂ ಕೂಡ ಅತತ್ವಾವೇದಕಪ್ರಮಾಣವೆಂದು ಒಪ್ಪಲು ಸಾಧ್ಯವೇ ಇಲ್ಲ.

### ಗಗನ ಮಾಲಿನ್ಯದಲ್ಲಿ ವ್ಯಭಿಚಾರ

**तत्वप्रदीपः – तदापाततो बाध्यते, अस्य तु देशकालादिभिः सहैव बाधः, अत एतत् प्रमाणमिति चेन्न । गगनतलमलिनतादिज्ञाने व्यभिचारात् ।**

ಶುಕ್ತಿರಜತಭ್ರಾಂತಿಯು ಆಪಾತತಃ ಬಾಧ್ಯವಾಗುತ್ತದೆ. ಪ್ರಪಂಚದ ಭ್ರಾಂತಿಯು ದೇಶಕಾಲಾದಿಗಳ ಜೊತೆ ಬಾಧ್ಯವಾಗುತ್ತದೆ. ಆದ್ದರಿಂದ ಪ್ರಪಂಚಜ್ಞಾನವನ್ನು ಪ್ರಮಾಣವೆಂದು ಹೇಳಬಹುದಲ್ಲವೇ ? ಹೀಗೆ ಆಕ್ಷೇಪ ಮಾಡಬಾರದು. ಗಗನದಲ್ಲಿ ಯಾವ ನೈಲ್ಯಜ್ಞಾನ ಬರುತ್ತದೋ, ಇದರಲ್ಲಿ (ಗಗನದಲ್ಲಿ ಕಾಣಿಸುವ ಮಾಲಿನ್ಯದಲ್ಲಿ) ವ್ಯಭಿಚಾರದೋಷವು ಪ್ರಾಪ್ತವಾಗುತ್ತದೆ.

ವಿಶೇಷವಿಚಾರ - ಅದ್ವೈತಿಗಳು - ಶುಕ್ತಿರಜತಜ್ಞಾನಕ್ಕೂ, ಪ್ರಪಂಚಜ್ಞಾನಕ್ಕೂ ವೈಲಕ್ಷಣ್ಯವಿದೆ. ಶುಕ್ತಿಯನ್ನು ನೋಡಿ, 'ಇದಂ ರಜತಂ' ಎಂಬ ಭ್ರಾಂತಿಯು ಬಂದರೆ ಪರೀಕ್ಷೆ ಮಾಡಿದ ಮೇಲೆ ರಜತ ಮಾತ್ರ ಬಾಧ್ಯವಾಗುತ್ತದೆ. ಹೊರತು, ದೇಶಕಾಲಗಳು ಬಾಧ್ಯವಾಗುವುದಿಲ್ಲ. ಆದರೆ ಪ್ರಪಂಚದ ಬಗ್ಗೆ ಯಾವ ಭ್ರಾಂತಿಯು ಬರುತ್ತಿದೆಯೋ, ಇದು ದೇಶಕಾಲಾದಿಗಳ ಜೊತೆಯೇ ಬಾಧ್ಯವಾಗುತ್ತದೆ. ಹೀಗೆ ಎರಡೂ ಕಡೆ ವ್ಯತ್ಯಾಸವಿರುವುದರಿಂದ ಶುಕ್ತಿರಜತ ಜ್ಞಾನವು ಅತತ್ತ್ವಾವೇದಕವಾದಂತೆ ಭೇದಜ್ಞಾನವು ಅತತ್ತ್ವಾವೇದಕವಾಗಬೇಕಾಗಿಲ್ಲ. ಯಾವ ವಸ್ತುವು ದೇಶಕಾಲಾದಿಗಳನ್ನು ಬಿಟ್ಟು, ತಾನಷ್ಟೇ ಬಾಧ್ಯವಾಗುತ್ತದೋ, ಅದು ಪ್ರಮಾಣವೆಂದು ಕರೆಸಿಕೊಳ್ಳುವುದಿಲ್ಲ. ಯಾವ ವಸ್ತು ದೇಶಕಾಲಾದಿಗಳ ಜೊತೆ ಬಾಧ್ಯವಾಗುತ್ತದೋ, ಅದು ಅತತ್ತ್ವಾವೇದಕ ಪ್ರಮಾಣವೆಂದು ಕರೆಸಿಕೊಳ್ಳುತ್ತದೆ.

ತತ್ತ್ವವಾದಿಗಳು - 'ಗಗನಂ ನೀಲಂ' ಎಂಬ ಭ್ರಾಂತಿಯು ಗಗನವಿರುವಷ್ಟು ಕಾಲವು ಇದ್ದೇ ಇರುತ್ತದೆ. ಆದ್ದರಿಂದ ದೇಶಕಾಲಾದಿಗಳ ಜೊತೆ ಬಾಧ್ಯವಾಗುವುದನ್ನು ನೀವು ಅತತ್ತ್ವಾವೇದಕ ಪ್ರಮಾಣವೆಂದು ಕರೆಯುವುದಾದರೆ, 'ಗಗನಂ ನೀಲಂ' ಎಂಬ ಜ್ಞಾನವನ್ನು ಕೂಡ ಅತತ್ತ್ವಾವೇದಕ ಪ್ರಮಾಣವೆಂದು ಕರೆಯಬೇಕಾಗುತ್ತದೆ. ಆದರೆ ಪ್ರತಿಯೊಬ್ಬರೂ ಕೂಡ ಗಗನದಲ್ಲಿ ತೋರುವ ನೀಲವು ಅತ್ಯಂತ ಅಸತ್ತಾಗಿದೆಯೆಂದು ಒಪ್ಪಿರುತ್ತಾರೆ. ಅದನ್ನು ನೀವು ಪ್ರಮಾಣವೆಂದು ಒಪ್ಪಿದಂತಾಯಿತು.

### ದೇಶಕಾಲಗಳಿಗೆ ಬಾಧ್ಯತ್ವ ಹೇಳಲಾಗದು

**ತत्वप्रदीपः – देशकालादीनां बाधश्च नैव भावी, नित्यत्वात् तेषाम् । अन्यथा कुत्र कदा कस्येति पृष्टे किमुत्तरं स्यात् । चेतनस्य स्वात्मनि सर्वगते ज्ञानोत्तरकालमविद्या सविलासा निवर्तते, न च तदा क्वापि किञ्चिदनिवृत्तमस्तीति चेदेवं तर्हि देशकालादीनां न बाधोऽभ्युपगतः । बाधावधित्वाद्यभ्युपगमात् ।**

ಮತ್ತು ದೇಶಕಾಲಾದಿಗಳು ಮುಂದೊಂದು ದಿನ ಬಾಧ್ಯ ಆಗುತ್ತವೆಂದು ಹೇಳಲು ಸಾಧ್ಯವಿಲ್ಲ. ಅವುಗಳು ನಿತ್ಯವಾದ ಪದಾರ್ಥಗಳಾಗಿವೆ. ಹೀಗೊಪ್ಪದಿದ್ದರೆ ಎಲ್ಲಿ, ಯಾವಾಗ, ಯಾರಿಗೆ ಬಾಧವು ಬರುತ್ತದೆಂದು ಪ್ರಶ್ನಿಸಿದರೆ ನಿಮ್ಮಲ್ಲಿ ಉತ್ತರವಿಲ್ಲ. ಚೇತನನಿಗೆ ಸರ್ವಗತನಾದ ತನ್ನಲ್ಲಿ ಅಪರೋಕ್ಷಜ್ಞಾನ ಬಂದ ಅನಂತರ ಅವಿದ್ಯೆಯು ತನ್ನ ಕಾರ್ಯಗಳ ಜೊತೆ ನಿವೃತ್ತಿಯಾಗುತ್ತದೆಂದು ಹೇಳಬೇಕು. ಆಗ ಅನಿವೃತ್ತವಾದದ್ದು ಯಾವುದೂ ಕೂಡ

ಇರುವುದಿಲ್ಲವೆಂದು ನೀವು ಉತ್ತರಿಸಬೇಕು. ಹಾಗಾದರೆ ದೇಶಕಾಲಾದಿಗಳಿಗೆ ಬಾಧವನ್ನು ಒಪ್ಪಿದಂತಾಗುವುದಿಲ್ಲ. ಏಕೆಂದರೆ ಬಾಧಕ್ಕೂ ಕೂಡ ಅವಧಿಯನ್ನು ಒಪ್ಪಿರುತ್ತೀರಿ.

ವಿಶೇಷವಿಚಾರ - ತತ್ವವಾದಿಗಳು - ಅದ್ವೈತಿಗಳಿಗೆ ಮತ್ತೊಂದು ದೋಷ - ಪ್ರಪಂಚವು ದೇಶಕಾಲಾದಿಗಳ ಜೊತೆ ಬಾಧ್ಯವಾಗುತ್ತದೆ ಎಂದು ಹೇಳಿದಿರಿ. ಈ ಬಾಧವು ಮುಂದೊಂದು ಕಾಲದಲ್ಲಿ ಆಗುತ್ತದೆ ಎಂದು ಹೇಳಲು ನಿಮ್ಮಿಂದ ಸಾಧ್ಯವಿಲ್ಲ. ಏಕೆಂದರೆ ದೇಶ ಹಾಗೂ ಕಾಲಗಳೆರಡು ನಿತ್ಯವಾದ ಪದಾರ್ಥಗಳಾಗಿವೆ. ಹೀಗೊಪ್ಪದಿದ್ದರೆ ಯಾವಾಗ, ಯಾರಿಗೆ, ಎಲ್ಲಿ ಬಾಧಜ್ಞಾನ ಬರುತ್ತದೆ? ಎಂಬುದಕ್ಕೆ ನೀವು ಉತ್ತರಿಸಬೇಕು.

ಅದ್ವೈತಿಗಳು - ಶುದ್ಧಚೇತನವು ಸರ್ವತ್ರ ವ್ಯಾಪ್ತವಾಗಿದೆ. ಅವಿದ್ಯೆಯ ಸಂಪರ್ಕದಿಂದ ಇದು ಜೀವಭಾವವನ್ನು ತಾಳಿದೆ. ಅವಿದ್ಯೆಯ ಕಾರ್ಯದಿಂದ ಭೇದದ ಭ್ರಾಂತಿಯನ್ನು ಪಡೆದಿದೆ. ಯಾವಾಗ ಶುದ್ಧಚೈತನ್ಯಕ್ಕೆ ಅಪರೋಕ್ಷಜ್ಞಾನವುಂಟಾಗುತ್ತದೋ, ಆಗ ಎಲ್ಲವೂ ಕೂಡ ಬಾಧಿತ-ವಾಗುತ್ತದೆ. ತನ್ನನ್ನು ಬಿಟ್ಟು ಬೇರೆ ಯಾವುದು ಉಳಿದಿರುವುದಿಲ್ಲವಾದ್ದರಿಂದ ದೇಶಕಾಲಗಳೂ ಕೂಡ ಬಾಧಿತವಾಗುತ್ತದೆ. ತದನಂತರ ಕಾಲದಲ್ಲಿ ಯಾವುದೊಂದು ಪದಾರ್ಥಗಳೂ ಕೂಡ ಇರಲು ಸಾಧ್ಯವಿಲ್ಲ.

ತತ್ವವಾದಿಗಳು - ಹಾಗಾದರೆ ನೀವು ದೇಶಕಾಲಗಳಿಗೆ ಬಾಧವನ್ನು ಒಪ್ಪಿದಂತಾಗಲಿಲ್ಲ. ಅಪರೋಕ್ಷಜ್ಞಾನೋತ್ತರಕಾಲದಲ್ಲಿ ಎಲ್ಲವೂ ಬಾಧಿತವಾಯಿತು ಎಂದು ಹೇಳಿದಾಗ, ಅವಧಿಯನ್ನು ಒಪ್ಪಿಕೊಂಡಂತಾಯಿತು. ಆ ಅವಧಿಯೇ ದೇಶ ಮತ್ತು ಕಾಲಗಳೆಂದು ನಾವು ಹೇಳುತ್ತಿದ್ದೇವೆ. ಅವಧಿಯನ್ನು ಒಪ್ಪಿ, ದೇಶಕಾಲಗಳಿಗೆ ಬಾಧ್ಯತ್ವವನ್ನು ಒಪ್ಪುವುದು ವ್ಯಾಹತವಾದದ್ದು. ಅವಧಿಯೆಂದರೆ ದೇಶಕಾಲಗಳಿಗೆ ಬಾಧವಿಲ್ಲ ಎಂದರ್ಥ. ಪುನಃ ಬಾಧ್ಯವಾಗುತ್ತದೆ ಎಂದು ಹೇಳಿದರೆ ಸ್ವವಚನ ವಿರೋಧವು ಪ್ರಾಪ್ತವಾಗುತ್ತದೆ.

### ನಿರವಧಿಕವಾದ ಬಾಧವೇ ಇಲ್ಲ

**ತತ್ವप्रदीपः – न च निरवधिको बाधो युक्तः । तस्मादतत्वावेदक-प्रमाणवचनवत् तल्लक्षणवाक्यमपि स्वव्याहतम् ।**

ಅವಧಿಯಿಲ್ಲದ ಬಾಧವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅತತ್ವಾವೇದಕಪ್ರಮಾಣ ಎಂಬ ಮಾತಿನಂತೆ ಅದರ ಲಕ್ಷಣವನ್ನು ಹೇಳುವ ವಾಕ್ಯವೂ ಕೂಡ ಸ್ವವ್ಯಾಹತವಾಯಿತು.

ವಿಶೇಷವಿಚಾರ - ಅದ್ವೈತಿಗಳು - ಸಾವಧಿಕವಾದ ಬಾಧವನ್ನು ಒಪ್ಪಿದರೆ ವ್ಯಾಹತಿದೋಷಕ್ಕೆ ಅವಕಾಶವಿರುತ್ತಿತ್ತು. ನಿರವಧಿಕವಾದ ಬಾಧವನ್ನು ಒಪ್ಪುತ್ತೇವೆ. ಆಗ ವ್ಯಾಹತಿಯನ್ನು ಹೇಗೆ ಹೇಳುವಿರಿ ?

ತತ್ವವಾದಿಗಳು - ನಿರವಧಿಕವಾದ ಬಾಧ ಇರಲು ಸಾಧ್ಯವೇ ಇಲ್ಲ. ಬಾಧಿತವಾಗುತ್ತಿದೆ ಎಂದರೆ ಅದಕ್ಕೊಂದು ಅವಧಿ ಇರಲೇಬೇಕು. ಅದು ನಿರವಧಿಕವೆಂದರೆ ಪುನಃ ಈ ಮಾತು ಸ್ವವಾಹ್ಯತವಾಗುತ್ತದೆ. ಆದ್ದರಿಂದ ಅತತ್ವಾವೇದಕಪ್ರಮಾಣ ಎಂಬ ನಿಮ್ಮ ಪ್ರತೀತಿಯು ವ್ಯಾಹತವಾಯಿತು. ಅದನ್ನು ಉಪಪಾದನೆ ಮಾಡಲು ಹೊರಟ ಲಕ್ಷಣವೂ ಕೂಡ ವ್ಯಾಹತವಾಯಿತು. ಹೀಗೆ ನಿಮ್ಮ ಸಿದ್ಧಾಂತವೇ ಸ್ವವ್ಯಾಹತಿ ಎಂಬ ಕೂಪದಲ್ಲಿ ಬಿದ್ದಿದೆ.

### ವೇದಪ್ರಾಮಾಣ್ಯದ ಮುಖವಾಡ ಹಾಕಿಕೊಂಡ ಪ್ರಚ್ಛನ್ನಶೂನ್ಯವಾದಿಗಳು

**तत्वप्रदीपः – अपि चैवंवादिना वादिना कृत्स्नोऽप्यतत्वावेदको वेदो ह्यवादि । न हि वेदैकदेशेऽप्यभेदवादं वदन्ति कोविदाः । तदहो महानेष संरम्भो वेदप्रामाण्ये प्रच्छन्नशून्यवादिनः ।**

ಮತ್ತು ಹೀಗೆ ಹೇಳುವ ಮಾಯಾವಾದಿಯು ಸಮಗ್ರ ವೇದವನ್ನೂ ಕೂಡ ಅತತ್ವಾವೇದಕವೆಂದು ಹೇಳಬೇಕು. ಏಕೆಂದರೆ ವೇದದ ಏಕದೇಶವೂ ಕೂಡ ಅಭೇದವನ್ನು ಹೇಳುತ್ತದೆ ಎಂದು ಯಾವ ವಿದ್ವಾಂಸರೂ ಒಪ್ಪುವುದಿಲ್ಲ. ಅಬ್ಬಾ ! ಎಷ್ಟು ಆಶ್ಚರ್ಯ !! ವೇದವನ್ನು ಹಾಳುಗೆಡಲು ಪ್ರಚ್ಛನ್ನಶೂನ್ಯವಾದಿಗಳ ವೇದಪ್ರಾಮಾಣ್ಯದ ಸಮರ್ಥನೆಯ ಆಸಕ್ತಿ ಮಹಾದಾಶ್ಚರ್ಯಕರವಾಗಿದೆ.

ವಿವರಣೆ - ಅದ್ವೈತಿಗಳು - ಸಮಗ್ರ ವೇದವು ಅತತ್ವಾವೇದಕವೆಂದು ನಾವು ಹೇಳುವುದಿಲ್ಲ. ತತ್ವಾವೇದಕವಾಕ್ಯಗಳಿಂದ ವೇದಪ್ರಾಮಾಣ್ಯವನ್ನು ಸಮರ್ಥಿಸುತ್ತೇವೆ.

ತತ್ವವಾದಿಗಳು - ಅದ್ವೈತಿಗಳು ಸಮಗ್ರವೇದವನ್ನೂ ಕೂಡ ಅತತ್ವಾವೇದಕವೆಂದೇ ಒಪ್ಪಬೇಕು. ಯಾರೊಬ್ಬ ಪಂಡಿತನೂ ಕೂಡ ಒಂದೇ ಒಂದು ವಾಕ್ಯವನ್ನು ಅಭೇದಪರವೆಂದು ಹೇಳುವುದಿಲ್ಲ. ಹಾಗೇನಾದರೂ ಅಭೇದಪರವಾದ ಒಂದಾದರೂ ವಾಕ್ಯವಿದ್ದಲ್ಲಿ ಅದಕ್ಕೆ ತತ್ವಾವೇದಕತ್ವವನ್ನು ಅದ್ವೈತಿಗಳು ಒಪ್ಪಬೇಕಿತ್ತು. ಹೀಗೆ ವೇದಪ್ರಾಮಾಣ್ಯವನ್ನು ಸಮರ್ಥಿಸಲು

ಹೊರಟ ಅದ್ವೈತಿಗಳು ಸಂಪೂರ್ಣ ವೇದವನ್ನೇ ನಾಶ ಮಾಡುವ ಉದ್ದೇಶವುಳ್ಳವರಾಗಿದ್ದಾರೆ. ಇದರಿಂದ ಇವರ ಪ್ರಚ್ಛನ್ನಶೂನ್ಯವಾದವು ಸ್ಪಷ್ಟವಾಗುತ್ತದೆ.

'ತತ್ತ್ವಮಸಿ' ಎಂಬ ವಾಕ್ಯವೂ ಕೂಡ ತತ್ತ್ವಾವೇದಕವಲ್ಲ

**तत्वप्रदीपः – अस्ति तत्त्वमस्यादिवाक्यं तत्वावेदकमिति चेन्न । मुख्यार्थपरित्यागात् । मुख्यार्थो हि शब्दस्यार्थतत्वम् । तत्यागे कथं तत्वावेदकम् ।**

ತತ್ತ್ವಮಸ್ಯಾದಿ ವಾಕ್ಯಗಳು ತತ್ತ್ವಾವೇದಕವಾಗಿವೆ ಎಂದು ಹೇಳಲಾಗದು. ಈ ವಾಕ್ಯಗಳನ್ನೂ ಕೂಡ ಅದ್ವೈತಿಗಳಾದ ನೀವು ಮುಖ್ಯಾರ್ಥವನ್ನು ಪರಿತ್ಯಾಗ ಮಾಡಿರುವಿರಿ. ಮುಖ್ಯಾರ್ಥವನ್ನು ಒಪ್ಪಿದರೆ ಮಾತ್ರ ಅರ್ಥತತ್ತ್ವವನ್ನು ಹೇಳಲು ಸಾಧ್ಯ. ಮುಖ್ಯಾರ್ಥವನ್ನೇ ಪರಿತ್ಯಾಗ ಮಾಡಿದ ಮೇಲೆ ಸದ್ಯಕ್ಕೆ ಅರ್ಥತತ್ತ್ವವೇ ಇಲ್ಲವೆಂದಂತಾಯಿತು. ಆಗ ತತ್ತ್ವಾವೇದಕವಾಗಲು ಹೇಗೆ ಸಾಧ್ಯ ?

ವಿಶೇಷವಿಚಾರ - ಅದ್ವೈತಿಗಳು - ತತ್ತ್ವಾವೇದಕವಾದ ವಾಕ್ಯಗಳೇ ಇಲ್ಲವೆಂದು ಹೇಳಲು ಸಾಧ್ಯವಿಲ್ಲ. 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ' ಮೊದಲಾದ ಪಂಚಮಹಾವಾಕ್ಯಗಳು ತತ್ತ್ವಾವೇದಕಗಳಾಗಿವೆಯೆಂದು ನಾವು ಒಪ್ಪುತ್ತೇವೆ. ಈ ಪಂಚಮಹಾವಾಕ್ಯಗಳನ್ನು ಬಿಟ್ಟು ಉಳಿದ ವಾಕ್ಯಗಳೆಲ್ಲವೂ ಅತತ್ತ್ವಾವೇದಕ ಪ್ರಮಾಣವೆಂದು ಹೇಳುತ್ತೇವೆ.

ತತ್ವವಾದಿಗಳು - 'ತತ್ತ್ವಮಸಿ' ಎಂಬ ವಾಕ್ಯಕ್ಕೂ ಕೂಡ ತತ್ತ್ವಾವೇದಕತ್ವವನ್ನು ನಿಮಗೆ ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಇಲ್ಲಿಯೂ ಕೂಡ ನೀವು ಮುಖ್ಯಾರ್ಥವನ್ನು ಪರಿತ್ಯಾಗ ಮಾಡುವಿರಿ. 'ತತ್' ಹಾಗೂ 'ತ್ವಂ' ಎಂಬೆರಡು ಪದಗಳ ಮುಖ್ಯಾರ್ಥವನ್ನು ಬಿಟ್ಟು ಶುದ್ಧಚೈತನ್ಯವೆಂಬ ಅಮುಖ್ಯಾರ್ಥವನ್ನು ಸ್ವೀಕರಿಸಿ, ಐಕ್ಯವನ್ನು ಸಮರ್ಥಿಸಿದಿರಿ, ಮುಖ್ಯಾರ್ಥವನ್ನು ಒಪ್ಪಿದರೆ ಮಾತ್ರ ಶಬ್ದವು ಅರ್ಥತತ್ತ್ವವನ್ನು ಪ್ರತಿಪಾದನೆ ಮಾಡುತ್ತದೆ. ಮುಖ್ಯಾರ್ಥವನ್ನೇ ಪರಿತ್ಯಾಗ ಮಾಡಿದ ಮೇಲೆ ಅರ್ಥತತ್ತ್ವವನ್ನು ಶಬ್ದಗಳು ತಿಳಿಸುವುದಿಲ್ಲವೆಂದು ಹೇಳಿದಂತಾಯಿತು. ಹೀಗಿರುವಾಗ ತತ್ತ್ವಾವೇದಕತ್ವವನ್ನು 'ತತ್ತ್ವಮಸಿ' ಎಂಬ ವಾಕ್ಯಕ್ಕೆ ಹೇಗೆ ಹೇಳುವಿರಿ ?

ತತ್ತ್ವಮಸಿ ಎಂಬಲ್ಲಿ ಜಹದಜಹಲ್ಲಕ್ಷಣ ಮಾಡಬಹುದೇ ?

**तत्वप्रदीपः – सत्यमेतत् सति सम्भवे, असम्भवे तु स्यादेव तत्वं लक्ष्यमपि । तत्पदार्थः परोक्षं सर्वज्ञं सुखरूपं ब्रह्म, त्वंपदार्थोऽपरोक्षोऽल्पज्ञो दुःखी जीवः, तयोरैक्यविवक्षायां मुख्यार्थासम्भवात्, जहदजहल्लक्षणया चैतन्यमात्रं लक्ष्यते 'सोऽयं देवदत्तः' इतिवत्**

ಹೌದು ! ಒಂದು ವೇಳೆ ಮುಖ್ಯಾರ್ಥವು ಉಪಪನ್ನವಾಗುವುದಾದರೆ ಆಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ತಪ್ಪಾಗುತ್ತದೆ. ಮುಖ್ಯಾರ್ಥವೇ ಅಸಂಭಾವಿತವಾದಾಗ ಅಮುಖ್ಯಾರ್ಥವೇ ತತ್ತ್ವವಾಗುತ್ತವೆ. ಆದರಲ್ಲಿ ಲಕ್ಷಣಾವೃತ್ತಿಯನ್ನು ಮಾಡಿ ತತ್ತ್ವಾವೇದಕತ್ವವನ್ನು ನಾವು ಸಮರ್ಥಿಸುತ್ತೇವೆ. ಏಕೆಂದರೆ ತತ್ಪದಾರ್ಥವು ಪರೋಕ್ಷನಾದ, ಸರ್ವಜ್ಞನಾದ, ಸುಖಸ್ವರೂಪನಾದ ಬ್ರಹ್ಮನಾಗಿರುತ್ತಾನೆ. 'ತ್ವಂ' ಪದಾರ್ಥವು ಅಪರೋಕ್ಷನಾದ, ಅಲ್ಪಜ್ಞನಾದ, ದುಃಖಿಯಾದ ಜೀವನಾಗಿರುತ್ತಾನೆ. ಇವರಿಬ್ಬರಿಗೆ ಐಕ್ಯವನ್ನು ವಿವಕ್ಷಿಸದರೆ ಮುಖ್ಯಾರ್ಥವೇ ಅಸಂಭಾವಿತವಾಗುತ್ತದೆ. ಆದ್ದರಿಂದ ಜಹದಜಹಲ್ಲಕ್ಷಣಾವೃತ್ತಿಯನ್ನು ಒಪ್ಪಿ ಚೈತನ್ಯಮಾತ್ರವು ಲಕ್ಷ್ಯವಾಗುತ್ತದೆಂದು ಸಮರ್ಥಿಸುತ್ತೇವೆ. 'ಸೋಽಯಂ ದೇವದತ್ತಃ' ಎಂಬುದೇ ಇದಕ್ಕೆ ಉದಾಹರಣೆಯಾಗಿದೆ.

ವಿಶೇಷವಿಚಾರ - ಅದ್ವೈತಿಗಳು - 'ತತ್ತ್ವಮಸಿ' ಎಂಬ ವಾಕ್ಯವು ತತ್ತ್ವಾವೇದಕವಾಗುವುದಿಲ್ಲ ಎಂಬ ದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಮುಖ್ಯಾರ್ಥವು ಸಂಭಾವಿತವಾಗಿದ್ದಾಗ ವಿನಾಕಾರಣ ಅದನ್ನು ಪರಿತ್ಯಾಗ ಮಾಡಿ, ಅಮುಖ್ಯಾರ್ಥವನ್ನು ಸ್ವೀಕರಿಸಿದರೆ ತತ್ತ್ವಾವೇದಕವಾಗುವುದಿಲ್ಲವೆಂದು ಹೇಳಬಹುದಿತ್ತು. ಆದರೆ 'ತತ್ತ್ವಮಸಿ' ಎಂಬ ವಾಕ್ಯದಲ್ಲಿ ಮುಖ್ಯಾರ್ಥವನ್ನು ಸ್ವೀಕರಿಸಲು ಸಾಧ್ಯವೇ ಇಲ್ಲ. ಅಸಂಭಾವಿತವಾದ ಅರ್ಥವನ್ನು ವಿವಕ್ಷಿಸಿದರೆ ಮುಖ್ಯಾರ್ಥವು ಕೂಡುವುದಿಲ್ಲ. ಆದ್ದರಿಂದ ತತ್‌ಪದಾರ್ಥದಲ್ಲಿ-ಪರೋಕ್ಷತ್ವ, ಸರ್ವಜ್ಞತ್ವ ಮೊದಲಾದ ಧರ್ಮಗಳನ್ನು ಬಿಟ್ಟು, ಚೈತನ್ಯಾಂಶವನ್ನು ಮಾತ್ರ ಅರ್ಥವನ್ನಾಗಿ ಸ್ವೀಕರಿಸುತ್ತೇವೆ. 'ತ್ವಂ' ಪದಾರ್ಥದಲ್ಲಿಯೂ ಕೂಡ ಅಪರೋಕ್ಷತ್ವ, ಅಲ್ಪಜ್ಞತ್ವ, ವಿಶಿಷ್ಟತ್ವ ಮೊದಲಾದ ಧರ್ಮಗಳನ್ನು ಬಿಟ್ಟು ಚೈತನ್ಯಾಂಶವನ್ನು ಮಾತ್ರ ಸ್ವೀಕರಿಸುತ್ತೇವೆ. ಇಂಥ ಚೈತನ್ಯದಲ್ಲಿ 'ತತ್ತ್ವಮಸಿ' ಎಂಬ ವಾಕ್ಯಕ್ಕೆ ಲಕ್ಷಣಾವೃತ್ತಿಯನ್ನು ಒಪ್ಪಿದಾಗ ತತ್ತ್ವಾವೇದಕವೆಂದು ಹೇಳಲು ಯಾವುದೇ ತೊಂದರೆ ಬರುವುದಿಲ್ಲ.

ಉದಾಹರಣೆ - 'ಸೋऽಯಂ ದೇವದತ್ತಃ' ಎಂಬ ಪ್ರತ್ಯಭಿಜ್ಞಾನದಲ್ಲಿ ತತ್ಕಾಲವಿಶಿಷ್ಟನಾದ ದೇವದತ್ತನಿಗೂ, ಏತದ್ದೇಶಕಾಲವಿಶಿಷ್ಟನಾದ ದೇವದತ್ತನಿಗೂ ಐಕ್ಯವು ಪ್ರತಿಭಾಸವಾಗುತ್ತಿದೆ. ತದ್ದೇಶಕಾಲಗಳು ಈಗಿಲ್ಲದ ಕಾರಣ ದೇವದತ್ತ ಎಂಬ ಸ್ವರೂಪಾಂಶವನ್ನು ಮಾತ್ರ ವಿವಕ್ಷಿಸಿ, ಐಕ್ಯವನ್ನು ಹೇಗೆ ಎಲ್ಲರೂ ಕೂಡ ಹೇಳಲೇಬೇಕೋ, ಅದರಂತೆ ಪ್ರಕೃತದಲ್ಲಿಯೂ ವಿಶೇಷಣಾಂಶವನ್ನು ಬಿಟ್ಟು ವಿಶೇಷ್ಯಾಂಶಕ್ಕೆ ಮಾತ್ರ ಐಕ್ಯವನ್ನು ವಿವಕ್ಷಿಸಬೇಕು.

### 'ಸೋऽಯಂ ದೇವದತ್ತಃ' ಎಂಬಲ್ಲಿ ಲಕ್ಷಣಾವೃತ್ತಿ ಅಲ್ಲ

**तत्वप्रदीपः – इति चेन्न । तत्कालविशिष्टस्यैव देवदत्तस्य पर्यायेणै-तत्कालविशिष्टत्वोपपत्तेर्न तत्र लक्षणा, मुख्यार्थसम्भवादित्यदृष्टान्तः ।**

'ಸೋऽಯಂ ದೇವದತ್ತಃ' ಎಂಬ ದೃಷ್ಟಾಂತವನ್ನು ನೀಡಿದ್ದೇ ಅಯುಕ್ತವಾಗಿದೆ. ಏಕೆಂದರೆ ತತ್ಕಾಲವಿಶಿಷ್ಟನಾದ ದೇವದತ್ತನು ಏತತ್ಕಾಲವಿಶಿಷ್ಟನಾಗಿದ್ದಾನೆಂದು ಈ ವಾಕ್ಯದ ಅರ್ಥ. ಇಲ್ಲಿ ಮುಖ್ಯಾರ್ಥವೇ ಯುಕ್ತವಾಗುತ್ತಿರುವಾಗ ಲಕ್ಷಣಾವೃತ್ತಿಯನ್ನು ಏಕೆ ಅಂಗೀಕಾರಮಾಡಬೇಕು ? ಆದ್ದರಿಂದ 'ಸೋऽಯಂ ದೇವದತ್ತಃ' ಎಂಬುದು ದೃಷ್ಟಾಂತವಾಗುವುದಿಲ್ಲ.

ವಿಶೇಷವಿಚಾರ - ತತ್ವವಾದಿಗಳು - ಅದ್ವೈತಿಗಳಾದ ನೀವು 'ಸೋऽಯಂ ದೇವದತ್ತಃ' ಎಂಬ ಉದಾಹರಣೆಯಿಂದ ತತ್ತ್ವಮಸಿ ಎಂಬ ವಾಕ್ಯದಲ್ಲಿ ಲಕ್ಷಣಾವೃತ್ತಿಯನ್ನು ಮಾಡಬೇಕೆಂಬುದು ಸಮರ್ಥಿಸುತ್ತೀರಿ. ಆದರೆ ಈ ಉದಾಹರಣೆಯೇ ವಿಷಮವಾಗಿದೆ. 'ಸೋऽಯಂ ದೇವದತ್ತಃ' ಎಂಬಲ್ಲಿ ತದ್ದೇಶಕಾಲಗಳು ಈಗ ಇಲ್ಲದಿದ್ದರೂ ತದ್ದೇಶಕಾಲವಿಶಿಷ್ಟನಾದ ದೇವದತ್ತನು ಇರುವುದರಿಂದ ಅವನಲ್ಲಿ ಏತತದ್ದೇಶತ್ಕಾಲವಿಶಿಷ್ಟವನ್ನು ತಿಳಿಯುತ್ತಿದ್ದಾನೆ. ಇಂಥ ಸಂದರ್ಭದಲ್ಲಿ ಮುಖ್ಯಾರ್ಥದಲ್ಲಿ ಬಾಧಕವಿಲ್ಲದ ಕಾರಣ ಲಕ್ಷಣಾವೃತ್ತಿಯನ್ನು ಯಾರೂ ಒಪ್ಪಿರುವುದಿಲ್ಲ. ಆದ್ದರಿಂದ ಇದು ಉದಾಹರಣೆಯೇ ಆಗುವುದಿಲ್ಲ.

### ವಾಚ್ಯವಿಶಿಷ್ಟವಾದದ್ದೇ ಲಕ್ಷ್ಯವಾಗುತ್ತದೆ

**तत्वप्रदीपः – यत्र चासम्भवस्तत्र वाच्यपरित्यागेऽपि तद्विशिष्टमेव लक्ष्यते न स्वरूपमात्रम् । यथा मञ्चाः क्रोशन्तीत्युक्ते मञ्चसम्बद्धाः पुरुषा लक्ष्यन्ते न पुरुषमात्रम् । गङ्गायां कटकमास्त इत्यादौ गङ्गाविशिष्टतीरं लक्ष्यते**

**न तीरमात्रम् । अन्यथा तीरान्तरव्यावृत्तेरलभ्यत्वात् । तस्मात् वाच्यविशिष्टमेव लक्ष्यं तत्वं नाविशिष्टम्।**

'ಮಂಚಾಃ ಕ್ರೋಶಂತಿ' ಎಂಬಲ್ಲಿ ಮಂಚಸಂಬಂಧವನ್ನು ಹೊಂದಿರುವ ಪುರುಷರು ಲಕ್ಷಣಾವೃತ್ತಿಗೆ ವಿಷಯರಾಗುತ್ತಾರೆ ಹೊರತು, ಕೇವಲ ಪುರುಷನು ವಿಷಯನಾಗುವುದಿಲ್ಲ. 'ಗಂಗಾಯಾಂ ಕಟಮಾಸ್ತೇ' ಎಂಬಲ್ಲಿಯೂ ಗಂಗಾವಿಶಿಷ್ಟವಾದ ತೀರವೇ ಲಕ್ಷ್ಯವಾಗುತ್ತದೆ ಹೊರತು, ಕೇವಲ ತೀರವು ಲಕ್ಷ್ಯವಾಗುವುದಿಲ್ಲ. ಹೀಗೊಪ್ಪದಿದ್ದರೆ ತುಂಗಾತೀರದ ವ್ಯಾವೃತ್ತಿಯೇ ತಿಳಿಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಾಚ್ಯವಿಶಿಷ್ಟವೇ ಲಕ್ಷ್ಯವೆಂದು ಹೇಳಬೇಕು. ವಾಚ್ಯಾವಿಶಿಷ್ಟವಾದದ್ದು ಲಕ್ಷ್ಯವೆಂದು ಹೇಳಬಾರದು.

ವಿಶೇಷವಿಚಾರ - ಅದ್ವೈತಿಗಳು ವಾಚ್ಯವಿಶಿಷ್ಟವಲ್ಲದ ಪದಾರ್ಥದಲ್ಲಿ ಲಕ್ಷ್ಯತ್ವವನ್ನು ಒಪ್ಪುತ್ತಾರೆ. ಲಕ್ಷಣಾವೃತ್ತಿಯನ್ನು ಒಪ್ಪಬೇಕೆಂದರೆ ಅದು ವಾಚ್ಯಾರ್ಥದಿಂದ ವಿಶಿಷ್ಟವೇ ಆಗಿರಬೇಕು. ವಾಚ್ಯಾರ್ಥದಿಂದ ವಿಶಿಷ್ಟವಾಗದಿದ್ದರೆ ಅದರಲ್ಲಿ ಲಕ್ಷಣಾ ಮಾಡಲು ಸಾಧ್ಯವೇ ಆಗುವುದಿಲ್ಲ. ಉದಾಹರಣೆ - 'ಮಂಚಾಃ ಕ್ರೋಶಂತಿ' ಎಂಬಲ್ಲಿ ಮಂಚಸ್ಥನಾದ ಪುರುಷನಲ್ಲಿ ಲಕ್ಷಣಾವೃತ್ತಿಯನ್ನು ಹೇಳುತ್ತೇವೆ. ಮಂಚಶಬ್ದದ ವಾಚ್ಯಾರ್ಥವಾದ ಮಂಚದಿಂದ ವಿಶಿಷ್ಟವಾದ ಪುರುಷನೇ ಲಕ್ಷ್ಯನಾಗುತ್ತಾನೆ. ಇದರಂತೆ 'ಗಂಗಾಯಾಂ ಘೋಷಃ' ಎಂಬಲ್ಲಿಯೂ ಗಂಗಾವಿಶಿಷ್ಟವಾದ ತೀರವೇ ಲಕ್ಷ್ಯವಾಗುತ್ತದೆ. ಇಲ್ಲದಿದ್ದರೆ ತುಂಗಾತೀರ ಎಂಬಲ್ಲಿ ಏಕೆ ಲಕ್ಷಣಾ ಮಾಡುವುದಿಲ್ಲ ? ಆದ್ದರಿಂದ ಅದ್ವೈತಿಗಳು ವಾಚ್ಯಾರ್ಥವನ್ನೇ ಒಪ್ಪದಿದ್ದರೆ ಲಕ್ಷ್ಯಾರ್ಥವನ್ನೂ ಕೂಡ ಅವರಿಂದ ಒಪ್ಪಲು ಸಾಧ್ಯವಾಗುವುದಿಲ್ಲ.

ವಾಚ್ಯಾರ್ಥದಿಂದ ಅವಿಶಿಷ್ಟವಾದದ್ದರಲ್ಲಿ ಲಕ್ಷಣಾವೂ ಕೂಡುವುದಿಲ್ಲ

**तत्वप्रदीपः – अविशिष्टे लक्षणानुपपत्तेश्च । तत्र यद्वाक्यमविशिष्टं लक्षयति, तदतत्वावेदकं स्यात् । लक्ष्यतत्वस्य विशिष्टानियमात् । अविशिष्टमेव च त्वं लिलक्षयिषसि । अन्यथाऽखण्डार्थासिद्धेः । तस्माल्लक्षणयाऽप्यतत्त्वावेदकमेव तत्वमस्यादिवाक्यम् ।**

ವಾಚ್ಯಾರ್ಥದಿಂದ ವಿಶಿಷ್ಟವಾಗದಿದ್ದರೆ ಲಕ್ಷಣಾವೃತ್ತಿಯು ಅನುಪಪನ್ನವೇ ಆಗುತ್ತವೆ. ಏಕೆಂದರೆ ಯಾವ ವಾಕ್ಯವು ಅವಿಶಿಷ್ಟವಾದದ್ದನ್ನು ಲಕ್ಷಣಾವೃತ್ತಿಯಿಂದ ತಿಳಿಸುತ್ತದೋ, ಅದು

ಅತತ್ತ್ವಾವೇದಕ ಎಂದು ಹೇಳಬೇಕು. ಏಕೆಂದರೆ ಲಕ್ಷ್ಯತತ್ತ್ವವು ವಾಕ್ಯಾರ್ಥದಿಂದ ವಿಶಿಷ್ಟವಾಗಿರಬೇಕೆಂದು ನೀನು ಹೇಳಿರುವುದಿಲ್ಲ. ಅವಿಶಿಷ್ಟವಾದದ್ದನ್ನೇ ಲಕ್ಷಣಾವೃತ್ತಿಗೆ ವಿಷಯವಾಗುತ್ತದೆ ಎಂದು ಹೇಳಿರುವಿ. ಹೀಗೊಪ್ಪದಿದ್ದರೆ ಅಖಂಡಾರ್ಥವೇ ಸಿದ್ಧವಾಗದಿರ-ಬೇಕಾದೀತು. ಆದ್ದರಿಂದ ಲಕ್ಷಣಾವೃತ್ತಿಯಿಂದಲೂ ಕೂಡ ತತ್ತ್ವಮಸ್ಯಾದಿ ವಾಕ್ಯಗಳು ಅತತ್ತ್ವಾವೇದಕವೆಂದು ಸಮರ್ಥಿಸಿದಂತಾಯಿತು.

### ಅದ್ವೈತಿಗಳೇ ! ಪ್ರಮಾಣಸಿದ್ಧವಾದ ಭೇದನಿರಾಸಕ್ಕಾಗಿ ಏಕಿಷ್ಟು ಉತ್ಸಾಹ ?

**तत्वप्रदीपः – अपि च यदि सर्वज्ञत्वादिगुणविशिष्टं ब्रह्म वेदवाच्यम्, अज्ञानदुःखादिमांश्च जीवः प्रत्यक्षसिद्धः कोऽयमत्रासम्भवः सम्भाव्यते । कुतश्च महता संरम्भेण तन्निरासे प्रयत्यते ।**

ಮತ್ತೊಂದು ದೋಷ. ಸರ್ವಜ್ಞತ್ವಾದಿಗುಣವಿಶಿಷ್ಟನಾದ ಬ್ರಹ್ಮನು ವೇದದಿಂದ ಪ್ರತಿಪಾದ್ಯನೆಂದು ಹೇಳಿದಿರಿ. ಜೀವನಾದರೋ ಅಜ್ಞಾನದುಃಖಗಳುಳ್ಳವನಾಗಿದ್ದಾನೆಂದು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಹೀಗಿರುವಾಗ ಇಲ್ಲಿ ಅಸಂಭಾವಿತವಾದದ್ದು ಯಾವುದಿದೆ ? ಯಾವ ಕಾರಣಕ್ಕೋಸ್ಕರ ಅತಿಯಾದ ಉತ್ಸಾಹದಿಂದ ಸಿದ್ಧವಾದ ಭೇದದ ನಿರಾಸಕ್ಕಾಗಿ ಪ್ರಯತ್ನವನ್ನು ಮಾಡುತ್ತಿರುವಿರಿ.

ವಿಶೇಷವಿಚಾರ - ಮುಖ್ಯಾರ್ಥವು ಅಸಂಭಾವಿತವಾದಾಗ ಮಾತ್ರ ಅಮುಖ್ಯಾರ್ಥವನ್ನು ಸ್ವೀಕಾರ ಮಾಡಬೇಕು. ಆದರೆ ಜೀವಬ್ರಹ್ಮರ ಭೇದವೆಂಬ ಮುಖ್ಯಾರ್ಥವು ಅಸಂಭಾವಿತವೇ ಅಲ್ಲ. ಏಕೆಂದರೆ ವೇದದಿಂದ ಬ್ರಹ್ಮನು ಸಿದ್ಧನಾಗುತ್ತಾನೆ ಎಂದು ನೀವೂ ಕೂಡ ಒಪ್ಪಿರುವಿ. ಅದೇ ವೇದವು ಬ್ರಹ್ಮನಲ್ಲಿ ಸರ್ವಜ್ಞತ್ವಾದಿ ಧರ್ಮಗಳನ್ನು ಪ್ರತಿಪಾದನೆ ಮಾಡಿದೆ. ಆದ್ದರಿಂದ ಧರ್ಮಿಯು ಸಿದ್ಧವಾಗುವಾಗಲೇ ಸರ್ವಜ್ಞತ್ವಾದಿವಿಶಿಷ್ಟವಾಗಿಯೇ ಸಿದ್ಧವಾಗುತ್ತಿದೆ. ಇದಕ್ಕೆ ವಿರುದ್ಧವಾದ ಧರ್ಮಗಳಿಂದ ಜೀವನು ಸಿದ್ಧವಾಗುತ್ತಿದ್ದಾನೆ. ಪ್ರತಿಯೊಬ್ಬರಿಗೂ ಅಜ್ಞಾನ, ದುಃಖ ಮೊದಲಾದವುಗಳ ಅನುಭವವಿದೆ. ಹೀಗೆ ಜೀವಬ್ರಹ್ಮರ ವೈಲಕ್ಷಣ್ಯವು ಪ್ರಮಾಣಪ್ರಮಿತವಾಗಿರುವಾಗ ಮುಖ್ಯಾರ್ಥವು ಅಸಂಭಾವಿತವಾಗಿದೆಯೆಂದು ಕಲ್ಪನೆ ಮಾಡಲು ಅದ್ವೈತಿಗಳಿಗೆ ಸಾಧ್ಯವಿಲ್ಲ. ಪ್ರಮಾಣಪ್ರಮಿತವಾದದ್ದನ್ನು ಬಿಟ್ಟು, ಅಮುಖ್ಯಾರ್ಥವನ್ನು ಸ್ವೀಕಾರ ಮಾಡುವುದು ಮೂರ್ಖತನವೇ ಆಗುತ್ತದೆ.

ಅಪ್ರಮಿತವಾದ ಐಕ್ಯವನ್ನು ವಿವಕ್ಷಿಸಬಾರದು

**तत्वप्रदीपः – ऐक्यविवक्षायां मुख्यासम्भव इति चेन्न । प्रमाणसिद्ध-वैलक्षण्ययोरैक्यविवक्षाया एवासम्भवात् । अत एव ह्यादित्यो यूप इत्यादौ स्वरूपैक्यं मुखतः प्रतीतमप्यपहाय गौणैक्यं विवक्षितं विचक्षणाः समाचक्षते ।**

ಜೀವಬ್ರಹ್ಮರಿಗೆ ಐಕ್ಯವನ್ನು ವಿವಕ್ಷಿಸಿದಾಗ, ಮುಖ್ಯಾರ್ಥವು ಅಸಂಭಾವಿತವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ವೈಲಕ್ಷಣ್ಯವು ಪ್ರಮಾಣಸಿದ್ಧವಾಗಿರುವಾಗ ಐಕ್ಯವಿವಕ್ಷೆ ಮಾಡುವುದೇ ಅಸಂಭಾವಿತವಾಗುತ್ತದೆ. ಆದ್ದರಿಂದ 'ಆದಿತ್ಯೋ ಯೂಪಃ' ಇತ್ಯಾದಿ ಸ್ಥಳದಲ್ಲಿ ಸ್ವರೂಪೈಕ್ಯವು ಮುಖತಃ ಪ್ರತೀತವಾಗುತ್ತಿದ್ದರೂ ಕೂಡ ಅದನ್ನು ಬಿಟ್ಟು ಗೌಣವಾದ ಐಕ್ಯವನ್ನು ಬುದ್ಧಿವಂತರು ವಿವಕ್ಷಿಸುತ್ತಾರೆ.

ವಿಶೇಷವಿಚಾರ - 'ಸಿಂಹೋ ದೇವದತ್ತಃ' 'ಆದಿತ್ಯೋ ಯೂಪಃ' ಇತ್ಯಾದಿಯಾಗಿ ದೇವದತ್ತನನ್ನೇ ಸಿಂಹವೆಂದು, ಯೂಪವನ್ನೇ ಆದಿತ್ಯವೆಂದು ಪ್ರಯೋಗಿಸುವುದು ಲೋಕದಲ್ಲಿ ಕಂಡಿದೆ. ಆಪಾತತಃ ಐಕ್ಯವು ಈ ವಾಕ್ಯದಿಂದ ತಿಳಿಯುವುದಾದರೂ ಕೂಡ ಪ್ರತ್ಯಕ್ಷವಿರುದ್ಧವಾದ್ದರಿಂದ ಈ ಅರ್ಥವನ್ನು ಬಿಟ್ಟು, ಗೌಣಾರ್ಥವನ್ನು ಜ್ಞಾನಿಗಳು ವಿವಕ್ಷಿಸುತ್ತಾರೆ. ಆದ್ದರಿಂದ ಪ್ರಮಾಣಪ್ರಮಿತವಾದದ್ದೇ ಮುಖ್ಯಾರ್ಥವಾಗುತ್ತದೆ. ಅದರಂತೆ ಪ್ರಕೃತದಲ್ಲಿ ಜೀವ-ಬ್ರಹ್ಮರ ವೈಲಕ್ಷಣ್ಯವು ಪ್ರಮಾಣಪ್ರಮಿತವಾಗಿದೆ. ಇದೇ ಮುಖ್ಯಾರ್ಥವಾಗುತ್ತದೆ ಹೊರತು, ಅಪ್ರಮಿತವಾದ ಐಕ್ಯವು ಮುಖ್ಯಾರ್ಥವಾಗುವುದಿಲ್ಲ. ಆದ್ದರಿಂದ ಪ್ರಮಿತವಾದ ವೈಲಕ್ಷಣ್ಯವನ್ನು ಬಿಟ್ಟು ಅಪ್ರಮಿತವಾದ ವೈಲಕ್ಷಣ್ಯವನ್ನು ವಿವಕ್ಷಿಸಬಾರದು.

ತತ್ತ್ವಮಸಿ ಶ್ರುತಿಯಿಂದ ಐಕ್ಯವನ್ನು ವಿವಕ್ಷಿಸಲಾಗದು

**तत्वप्रदीपः – न च वाच्यमतत्वावेदकसिद्धत्वेन मानासिद्धत्वाज्जीवपर-वैलक्षण्यस्य तत्त्वमस्यादिवाक्येन मुख्यमैक्यं विवक्ष्यत इति । तत्त्वमस्यादेरतत्वावेदकत्वोक्तेः ।**

ಜೀವಬ್ರಹ್ಮರ ವೈಲಕ್ಷಣ್ಯವು ಅತತ್ತ್ವಾವೇದಕಪ್ರಮಾಣದಿಂದ ಸಿದ್ಧವಾಗಿದೆ. ಜೀವಬ್ರಹ್ಮರ ಐಕ್ಯವು ತತ್ತ್ವಾವೇದಕವಾದ ತತ್ತ್ವಮಸ್ಯಾದಿ ವಾಕ್ಯಗಳಿಂದ ಸಿದ್ಧವಾಗಿದೆ. ಆದ್ದರಿಂದ ತತ್ತ್ವಾವೇದಕವಾದ ತತ್ತ್ವಮಸ್ಯಾದಿ ವಾಕ್ಯಗಳಿಂದ ಸಿದ್ಧವಾದ ಐಕ್ಯವನ್ನು ವಿವಕ್ಷಿಸಿ, ಅತತ್ತ್ವಾವೇದಕ ಪ್ರಮಾಣದಿಂದ ಸಿದ್ಧವಾದ ಜೀವಬ್ರಹ್ಮರ ವೈಲಕ್ಷಣ್ಯವನ್ನು ಪರಿತ್ಯಾಗ ಮಾಡಬೇಕು.

ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ತತ್ತ್ವಮಸ್ಯಾದಿ ವಾಕ್ಯಗಳೂ ಕೂಡ ಅತತ್ತ್ವಾವೇದಕಗಳಾಗಿದೆ ಎಂದು ಈಗಾಗಲೇ ಸಮರ್ಥಿಸಿದ್ದೇವೆ.

### ಭೇದವಾಕ್ಯವು ಅತತ್ತ್ವಾವೇದಕವೆಂದರೆ ಅನ್ಯೋನ್ಯಾಶ್ರಯದೋಷ

**ತತ್ವप्रदीपः – कथं च भेदप्रमाणास्यातत्त्वावेदकत्वमुच्यते?**

**'भेदस्यासत्यत्वादिति चेत् तदेव कथं प्रमाणसिद्धस्य' न तत्प्रमाणमतत्त्वावेदकत्वादिति चेत् सेयमितरेतराश्रयता । तस्मान्नैक्यसिद्धिः। न चैतदभेदपरम्, अतत्त्वमसीतिभेदपरत्वोपपत्तेः ।**

ಭೇದಪ್ರಮಾಣವು ಅತತ್ತ್ವಾವೇದಕವೆಂದು ಅದ್ವೈತಿಗಳಾದ ನೀವು ಹೇಗೆ ಹೇಳುವಿರಿ ?

ಭೇದವು ಮಿಥ್ಯಾಭೂತವಾದ್ದರಿಂದ ಎಂದು ಉತ್ತರಿಸಲು ಸಾಧ್ಯವಿಲ್ಲ. ಪ್ರಮಾಣಸಿದ್ಧವಾದ ಭೇದವು ಹೇಗೆ ತಾನೆ ಮಿಥ್ಯಾಭೂತವಾಗಲು ಸಾಧ್ಯ ? ಆ ಪ್ರಮಾಣವು ಅತತ್ತ್ವಾವೇದಕವೆಂದು ಹೇಳಬೇಕು. ಆಗ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಆದ್ದರಿಂದ ಐಕ್ಯವು ಸಿದ್ಧವಾಗುವುದಿಲ್ಲ.

ವಿಶೇಷವಿಚಾರ - ತತ್ತ್ವವಾದಿಗಳು - ಭೇದಪ್ರತಿಪಾದಕವಾದ ಪ್ರಮಾಣಗಳು ಅತತ್ತ್ವಾವೇದಕ. ಐಕ್ಯಪ್ರತಿಪಾದಕವಾದ ಪ್ರಮಾಣಗಳು ತತ್ತ್ವಾವೇದಕವೆಂದು ಹೇಗೆ ಹೇಳುವಿರಿ?

ಅದ್ವೈತಿಗಳು - ಭೇದವು ಮಿಥ್ಯಾಭೂತವಾದ್ದರಿಂದ ತತ್ಪ್ರತಿಪಾದಕವಾದ ಪ್ರಮಾಣಗಳು ಅತತ್ತ್ವಾವೇದಕ. ಐಕ್ಯವು ಸತ್ಯವಾದ್ದರಿಂದ ತತ್ಪ್ರತಿಪಾದಕವಾದ ಪ್ರಮಾಣಗಳು ತತ್ತ್ವಾವೇದಕವೆಂದು ಹೇಳುತ್ತೇವೆ.

ತತ್ವವಾದಿಗಳು - ಭೇದವು ಪ್ರಮಾಣಸಿದ್ಧವಾಗಿರುವಾಗ ಅದನ್ನು ಮಿಥ್ಯಾಭೂತವೆಂದು ಹೇಗೆ ಹೇಳುವಿರಿ ?

ಅದ್ವೈತಿಗಳು - ಭೇದಪ್ರತಿಪಾದಕವಾದ ಪ್ರಮಾಣವು ಅತತ್ವಾವೇದಕವಾದ್ದರಿಂದ ಅದರಿಂದ ಸಿದ್ಧವಾಗುವ ಭೇದವೂ ಕೂಡ ಮಿಥ್ಯಾಭೂತವೆಂದು ಹೇಳುತ್ತೇವೆ.

ತತ್ವವಾದಿಗಳು - ಹಾಗಾದರೆ ನಿಮಗೆ ಅನ್ಯೋನ್ಯಾಶ್ರಯದೋಷವು ಪ್ರಾಪ್ತವಾಯಿತು? ಭೇದಪ್ರತಿಪಾದಕವಾದ ಪ್ರಮಾಣಗಳಿಗೆ ಅತತ್ವಾವೇದಕತ್ವವು ಸಿದ್ಧವಾಗಬೇಕಾದರೆ ಐಕ್ಯಪ್ರತಿಪಾದಕವಾದ ವಾಕ್ಯಗಳಿಂದ ಸಿದ್ಧವಾದ ಐಕ್ಯವು ಸತ್ಯವೆಂದು ಸಿದ್ಧವಾಗಬೇಕು. ಇದು ಸತ್ಯವೆಂದು ಸಿದ್ಧವಾಗಬೇಕಾದರೆ ಭೇದವು ಮಿಥ್ಯಾಭೂತವೆಂದು ಸಿದ್ಧವಾಗಬೇಕು. ಅದಕ್ಕಾಗಿ ಭೇದಪ್ರತಿಪಾದಕವಾದ ವಾಕ್ಯಗಳಿಗೆ ಅತತ್ವಾವೇದಕತ್ವವು ಸಿದ್ಧವಾಗಬೇಕು. ಐಕ್ಯವಾಕ್ಯವು ಮುಖ್ಯವೆಂದು ಸಿದ್ಧವಾದರೆ ಭೇದವಾಕ್ಯವು ಅತತ್ವಾವೇದಕವೆಂದು ಸಿದ್ಧವಾಗುತ್ತದೆ. ಭೇದವಾಕ್ಯವು ಅತತ್ವಾವೇದಕವೆಂದು ಸಿದ್ಧವಾದರೆ, ಐಕ್ಯವಾಕ್ಯವು ಮುಖ್ಯವೆಂದು ಸಿದ್ಧವಾಗುತ್ತದೆ. ಹೀಗೆ ಅದ್ವೈತಿಗಳಿಗೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ.

## ಎಲ್ಲವೂ ಸತ್ಯ

**तत्वप्रदीपः – ''ऐतदात्म्यमिदं सर्वं तत्सत्यम्'' इति दुःखादेः सत्यत्वप्रतिज्ञानात् । एतत्सृष्टत्वादेतत्पालितत्वादेतदात्माधीनमिदं सर्वम् । तस्मात् सत्यम् । एतस्य सत्यस्य सृष्टिक्षमत्वात् । ''अथ हैनमाहुः सत्यकर्मेति सत्यं ह्येवेदं विश्वमसौ सृजत'' इति हि श्रुतिः ।**

'ಐತದಾತ್ಮ್ಯಮಿದಂ ಸರ್ವಂ ತತ್ ಸತ್ಯಮ್' ಇತ್ಯಾದಿ ಶ್ರುತಿಯು ದುಃಖಾದಿಗಳಿಗೆ ಸತ್ಯತ್ವವನ್ನು ಪ್ರತಿಜ್ಞಾಪುರಸ್ಸರವಾಗಿ ಸಾಧಿಸುತ್ತಿದೆ. ಬ್ರಹ್ಮನಿಂದ ಹುಟ್ಟಿರುವುದರಿಂದ ಅವನಿಂದ ಪಾಲಿತವಾದ್ದರಿಂದ ಇದೆಲ್ಲವೂ ಕೂಡ ಅವನ ಅಧೀನವಾಗಿದೆ ಎಂಬುದು ಈ ಶ್ರುತಿಯ ಅಭಿಪ್ರಾಯ. ಆದ್ದರಿಂದಲೇ ಇದೆಲ್ಲವೂ ಸತ್ಯಭೂತವಾಗಿದೆ. ಪ್ರಪಂಚದಲ್ಲಿ ಸತ್ಯತ್ವವಿದ್ದರೆ ಮಾತ್ರ ಇದರ ಸೃಷ್ಟ್ಯಾದಿಗಳನ್ನು ಮಾಡಲು ಸಾಧ್ಯವಾಗುತ್ತದೆ. 'ಅಥ ಹೈನಮಾಹುಃ ಸತ್ಯಕರ್ಮೇತಿ ಸತ್ಯಂ ಹ್ಯೇವೇದಂ ವಿಶ್ವಮಸೌ ಸೃಜತೇ' ಎಂಬ ಶ್ರುತಿಯು ಸತ್ಯವಾದದ್ದರ ಸೃಷ್ಟಿಮಾಡುವ ಕಾರಣದಿಂದಲೇ ಅವನಿಗೆ ಸತ್ಯಕರ್ಮ ಎಂದು ಹೇಳುತ್ತಿದೆ.

ಜಗತ್ತು ಸತ್ಯ ಎಂಬುದೇ ಜ್ಞಾನಿಗಳ ಮತ

**तत्वप्रदीपः –**
**"मतं हि ज्ञानिनामेतन्मितं त्रातं च विष्णुना ।**
**तस्मात् सत्यमिति प्रोक्तं परमो हरिरेव तु" इति च ।।**

**अतो नैव तत्पक्षे तत्त्वमस्यादिवाक्यं तत्वावेदकं वेदितव्यम् ।**

ಈ ಜಗತ್ತು ವಿಷ್ಣುವಿನಿಂದ ಸಂಪೂರ್ಣವಾಗಿ ತಿಳಿಯಲ್ಪಟ್ಟಿದೆ ಮತ್ತು ರಕ್ಷಣೆ ಮಾಡಲ್ಪಟ್ಟಿದೆ. ಆದ್ದರಿಂದ 'ಸತ್ಯ' ಎಂದು ಕರೆಸಿಕೊಳ್ಳುತ್ತದೆ. ಈ ಜಗತ್ತಿಗಿಂತ ಅತ್ಯಂತ ಉತ್ಕೃಷ್ಟನಾದವನು ಪರಮಾತ್ಮನೊಬ್ಬನೇ ಆಗಿದ್ದಾನೆ. ಇದು ಜ್ಞಾನಿಗಳ ಮತ. ಈ ಪ್ರಮಾಣದಿಂದಲೂ ಕೂಡ ಜಗತ್ತು ಸತ್ಯವೆಂದು ಸಿದ್ಧವಾಗುತ್ತದೆ. ಆದ್ದರಿಂದ ಅದ್ವೈತಿಗಳ ಪಕ್ಷದಲ್ಲಿ ತತ್ತ್ವಮಸ್ಯಾದಿ ವಾಕ್ಯವು ತತ್ತ್ವಾವೇದಕವಾಗುವುದಿಲ್ಲವೆಂದು ತಿಳಿಯಬೇಕು.

ಶ್ರೇಯೋರ್ಥಿಗಳು ಅದ್ವೈತಮತವನ್ನು ಹೇಯವೆನ್ನುತ್ತಾರೆ

**तत्वप्रदीपः – तदखिलेऽपि वेदे पादप्रसारणन्यायेनाप्रामाण्यप्रतिपादनाभिप्रायः प्रियमायस्य प्रविकसितोऽत्यन्तमन्ततः । अतः श्रेयोर्थिभिरत्यन्तहेयं तन्मतमिति मतिमन्तो मन्यन्ते ।।**

**।। इति द्युभ्वाद्यधिकरणम् ।।**

ಹೀಗೆ ಅದ್ವೈತಿಗಳು ಪಾದಪ್ರಸಾರಣನ್ಯಾಯದಿಂದ (ಒಂದೊಂದೇ ಹೆಜ್ಜೆಯನ್ನು ಇಡುವ ಮೂಲಕ) ಸಮಗ್ರವೇದಕ್ಕೆ ಅಪ್ರಾಮಾಣ್ಯವನ್ನು ಪ್ರತಿಪಾದನೆ ಮಾಡುವ ಅಭಿಪ್ರಾಯವುಳ್ಳವರಾಗಿದ್ದಾರೆ. ಅವರಿಗೆ ಅತ್ಯಂತ ಪ್ರಿಯವಾದ ಮಾಯೆಯನ್ನು ಪ್ರಚಾರ ಮಾಡುವುದೇ ಅವರ ಅಂತಿಮಗುರಿಯಾಗಿದೆ. ಸತ್ಯಸ್ಥಾಪನೆಯು ಅವರ ಉದ್ದೇಶವೇ ಆಗಿಲ್ಲ. ಆದ್ದರಿಂದ ಶ್ರೇಯಸ್ಸನ್ನು ಅಪೇಕ್ಷಿಸುವ ಬುದ್ಧಿವಂತರು ಅದ್ವೈತಮತವನ್ನು ಅತ್ಯಂತ ಹೇಯವೆಂದೇ ಪರಿಗಣಿಸುತ್ತಾರೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ತ್ವಪ್ರದೀಪದಲ್ಲಿ
ದ್ಯುಭ್ವಾದ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಜೀವೇಶರ ಅಭೇದವು ಪ್ರಕರಣ ಪ್ರತಿಪಾದ್ಯವಲ್ಲ

**तत्वप्रकाशिका – ।। न जीवेशाभेदोऽत्र प्रकरणे विवक्षित इत्येतमर्थं हेत्वन्तरेण साधयत् सूत्रमुपन्यस्य व्याचष्टे – स्थितीति ।।**

ಜೀವ ಹಾಗೂ ಪರಮಾತ್ಮನಿಗೆ ಅಭೇದವನ್ನು ಈ ಪ್ರಕರಣವು ಪ್ರತಿಪಾದಿಸುತ್ತಿಲ್ಲ ಎಂಬುದನ್ನು ಮತ್ತೊಂದು ಹೇತುವಿನಿಂದ ಸಾಧಿಸುವಂತಹ ಸೂತ್ರವನ್ನು ಪಠಿಸಿ ''ಸ್ಥಿತಿ'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

### ಜೀವಪರಮಾತ್ಮರೆಂಬ ಎರಡು ಹಕ್ಕಿಗಳು

**तत्वप्रकाशिका – संयुक्तौ सखायौ द्वौ सुपर्णरूपौ जीवेशौ देहाख्यं पिप्पलमालिलिङ्गतुः । तयोः सुपर्णयोर्मध्येऽन्यो जीवोऽश्वत्थफलरूपं देहजनितकर्मफलमस्वाद्वेव स्वादुत्वेनात्ति । अन्य ईश्वरस्तदनश्नन्नभितः प्रकाशते । ननु स्वस्थित्यै तदपेक्षत इति जीवेशयोः कर्मफलोपजीवनतद्रहितावस्थानाभ्यामुक्ताभ्यां च नैक्यं वाच्यमित्यर्थः ।**

ಪರಸ್ಪರಸಂಬಂಧವನ್ನು ಹೊಂದಿರುವ, ಪರಸ್ಪರವಾಗಿ ಪ್ರೇಮಿಸುವ, ಎರಡು ಪಕ್ಷಿರೂಪದಲ್ಲಿರುವ ಜೀವ ಹಾಗೂ ಈಶ್ವರರು ದೇಹವೆಂಬ ಪಿಪ್ಪಲಮರವನ್ನು ಆಲಂಗಿಸಿದ್ದಾರೆ. ಆ ಎರಡು ಪಕ್ಷಿಗಳ ಮಧ್ಯದಲ್ಲಿ ಜೀವನೆಂಬ ಒಂದು ಪಕ್ಷಿಯು ಅಶ್ವತ್ಥಮರದ ಫಲವನ್ನು ತಿನ್ನುತ್ತಿದೆ. ಈ ಫಲವು ದೇಹದಿಂದ ಹುಟ್ಟುವ ಕರ್ಮಫಲ ರೂಪವಾಗಿದೆ. ಆದ್ದರಿಂದಲೇ ಮಧುರವಾಗಿರುವುದಿಲ್ಲ. ಆದರೂ ಸಹ ಮಧುರವೆಂಬ ಭ್ರಾಂತಿಯಿಂದ ಜೀವನು ಆ ಫಲವನ್ನು ಅನುಭವಿಸಿ ತಿನ್ನುತ್ತಿದ್ದಾನೆ. ಆದರೆ ಭಗವಂತನೆಂಬ ಮತ್ತೊಂದು ಪಕ್ಷಿಯು ಅಂತಹ ಫಲವನ್ನು ಆಸ್ವಾದನೆ ಮಾಡದೇ ಎಲ್ಲೆಡೆ ಪ್ರಕಾಶಮಾನವಾಗಿದೆ. ದಷ್ಟಪುಷ್ಟವೂ ಆಗಿದೆ. ಮತ್ತು ತನ್ನ

ಬದುಕಿಗಾಗಿ ಆ ಫಲವನ್ನು ಅದು ಅಪೇಕ್ಷಿಸುವುದಿಲ್ಲ. ಹೀಗೆ ಜೀವ ಹಾಗೂ ಈಶ್ವರನಿಗೆ ಕರ್ಮಫಲೋಪಜೀವನ ಹಾಗೂ ಕರ್ಮಫಲೋಪಜೀವನರಹಿತ ಅವಸ್ಥಾನ ಎಂಬೆರೆಡು ವಿರುದ್ಧವಾದ ಧರ್ಮಗಳಿರುತ್ತವೆ. ಆದ್ದರಿಂದ ಜೀವೇಶ್ವರರಿಗೆ ಐಕ್ಯವನ್ನು ಹೇಳಬಾರದು.

### ಸೂತ್ರದಲ್ಲಿ ಶ್ರುತಿಕ್ರಮದ ಉಲ್ಲಂಘನೆ ಮಾಡಿಲ್ಲ

**तत्वप्रकाशिका – अत्र श्रुतिक्रमोल्लङ्घनमीश्वरस्य प्राधान्यज्ञापनार्थम् । स्थितिपदस्याल्पाक्षरत्वराच्च । व्यावहारिकभेदः श्रुत्योच्यत इति चेत् ।**

ಸೂತ್ರದಲ್ಲಿ ಜೀವ ಹಾಗೂ ಈಶ್ವರನೆಂದು ಕ್ರಮವಾಗಿ ಶ್ರುತಿಗೆ ಅನುಸಾರಿಯಾಗಿ ಹೇಳಬೇಕಿತ್ತು. ಈ ಕ್ರಮವನ್ನು ಉಲ್ಲಂಘನೆ ಮಾಡಿ ಸ್ಥಿತಿ ಮತ್ತು ಅದನವೆಂದು ಏಕೆ ಹೇಳಿದ್ದಾರೆಂದರೆ ಈಶ್ವರನು ಪ್ರಧಾನನಾಗಿದ್ದಾನೆಂದು ಸೂಚಿಸುವುದಕ್ಕಾಗಿ. ಮತ್ತು ಸ್ಥಿತಿ, ಅದನಗಳಲ್ಲಿ ''ಸ್ಥಿತಿ'' ಎಂಬುದು ಅಲ್ಪಾಕ್ಷರಗಳುಳ್ಳದ್ದರಿಂದ ದ್ವಂದ್ವಸಮಾಸದಲ್ಲಿ ಅಲ್ಪಾಕ್ಷರವುಳ್ಳ ಪದವೇ ಮೊದಲು ಬರುತ್ತದೆಂಬ ದೃಷ್ಟಿಯಿಂದಲೂ ಸ್ಥಿತಿಯನ್ನೇ ಮೊದಲು ಹೇಳಿದ್ದಾರೆ.

ಪ್ರಕೃತ ಶ್ರುತಿಯಲ್ಲಿ ವ್ಯಾವಹಾರಿಕಭೇದವನ್ನೇ ಹೇಳಿರಬಹುದಲ್ಲವೇ? ಎಂದು ಪ್ರಶ್ನಿಸಬಾರದು.

### ವ್ಯಾವಹಾರಿಕ ಸತ್ಯವು ಅಪ್ರಾಮಾಣಿಕ

**तत्वप्रकाशिका – व्यावहारिक इति सत्यो मिथ्या वा । आद्ये किमनिष्टम्। न द्वितीयः । मिथ्याभिधायकत्वेऽतत्वावेदकत्वेन श्रुतेरप्रामाण्यापातात्। तत्वावेदकत्वलक्षणप्रामाण्याभावेऽपि व्यावहारिकं तदस्तीति चेत् । तत्वाविषयत्वे प्रामाण्यवाचोयुक्तेरयुक्तत्वात् ।**

ವ್ಯಾವಹಾರಿಕಭೇದವು ಸತ್ಯವೋ, ಸುಳ್ಳೋ ? ಎಂದು ಪ್ರಶ್ನೆ. ಸತ್ಯವೆಂದರೆ ನಮಗೆ ಅದು ಇಷ್ಟವೇ ಆಗಿದೆ. ಸುಳ್ಳೆಂದರೆ ಶ್ರುತಿಯು ಮಿಥ್ಯಾಪ್ರತಿಪಾದಕವಾದ್ದರಿಂದ ಅತತ್ವಾವೇದಕವಾಗುತ್ತದೆ. ಆಗ ಶ್ರುತಿಗೆ ಅಪ್ರಾಮಾಣ್ಯದೋಷವು ಬರುತ್ತದೆ. ಇನ್ನು ತತ್ವಾವೇದಕತ್ವವೆಂಬ ಪ್ರಾಮಾಣ್ಯವು ಶ್ರುತಿಗೆ ಬಾರದಿರಬಹುದು. ಆದರೆ ವ್ಯಾವಹಾರಿಕವಾದ ಪ್ರಾಮಾಣ್ಯವನ್ನು

ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ, ತಾತ್ವಿಕವಾದ ವಿಷಯವನ್ನು ಪ್ರತಿಪಾದನೆ ಮಾಡದ ಶ್ರುತಿಯು ಪ್ರಾಮಾಣ್ಯಹೊಂದಿದೆ ಎಂಬ ಪ್ರಯೋಗವು ಅತ್ಯಂತ ಅಯುಕ್ತವಾಗಿದೆ.

ಶ್ರುತಿಯು ಅನುವಾದಕವಲ್ಲ

**तत्वप्रकाशिका – मिथ्याभेदानुवादित्वान्न दोष इति चेन्न । वैयर्थ्यात् । निषेधायेति चेन्न । तदभावात् ।**

ಶ್ರುತಿಯು ಮಿಥ್ಯಾಭೂತವಾದ ಭೇದವನ್ನು ಕೇವಲ ಅನುವಾದ ಮಾಡುತ್ತಿದೆ. ಆದ್ದರಿಂದ ವಿರೋಧವಿರುವುದಿಲ್ಲವೆಂಬ ಆಕ್ಷೇಪವನ್ನು ಮಾಡಬಾರದು. ಏಕೆಂದರೆ, ಅನುಮಾನಕ್ಕೆ ಇಲ್ಲಿ ಯಾವುದೇ ಪ್ರಯೋಜನವು ಇರುವುದಿಲ್ಲ. ನಿಷೇಧಮಾಡುವುದೇ ಪ್ರಯೋಜನವೆಂದರೆ ಅಂತಹ ಭೇದವನ್ನು ನಿಷೇಧಮಾಡುವ ಯಾವುದೇ ಶ್ರುತಿಯು ಇರುವುದಿಲ್ಲ.

'ತತ್ತ್ವಮಸಿ' ಎಂಬ ಶ್ರುತಿಯು ಅದ್ವೈತಪರವಲ್ಲ

**तत्वप्रकाशिका – तत्त्वमसीत्यादिनिषेधोऽस्तीति चेत् । तदनुवादेनायमेव निषेधः किं न स्यात् । अद्वैतस्य प्रमाणान्तरेणासिद्धेर्न तदनुवाद इति चेत् । तत्किं निषेधाय प्रमाणप्राप्त्या भाव्यं प्राप्तिमात्रेण वा । आद्ये निषेधायोगः । द्वितीयेऽस्त्यद्वैतेऽपि तादृशी प्राप्तिः ।**

'ತತ್ತ್ವಮಸಿ' ಎಂದು ನಿಷೇಧಕಶ್ರುತಿ ಇದೆಯಲ್ಲವೇ ? ಎಂದರೆ 'ತತ್ ತ್ವಮಸಿ' ಎಂಬ ಶ್ರುತಿಯಿಂದ ಅಭೇದವನ್ನು ಅನುವಾದ ಮಾಡಿ 'ದ್ವಾಸುಪರ್ಣಾ' ಎಂಬ ಶ್ರುತಿಯೇ ಅದನ್ನು ನಿಷೇಧಿಸುತ್ತಿದೆ ಎಂದು ವಿಪರೀತವಾಗಿ ಏಕೆ ಹೇಳಬಾರದು?

ಅದ್ವೈತವು ಬೇರೆ ಪ್ರಮಾಣದಿಂದ ಸಿದ್ಧವಾಗದ ಕಾರಣ 'ತತ್ತ್ವಮಸಿ' ಎಂಬ ಶ್ರುತಿಯು ಅನುವಾದರೂಪವಾಗಲು ಸಾಧ್ಯವಿಲ್ಲವಲ್ಲವೇ ? ಎಂದು ಶಂಕಿಸಬಾರದು. ನಿಷೇಧಕ್ಕೋಸ್ಕರ ಪ್ರಮಾಣದಿಂದ ಪ್ರಾಪ್ತವಾಗಿರಬೇಕೋ ಅಥವಾ ಹೇಗಾದರೂ ಪ್ರಾಪ್ತವಾಗಿದ್ದರೆ ಮಾತ್ರ ಸಾಕೋ

ಎಂದು ಪ್ರಶ್ನಿಸುತ್ತೇವೆ. ಪ್ರಥಮಪಕ್ಷದಲ್ಲಿ ಪ್ರಮಾಣದಿಂದ ಪ್ರಾಪ್ತವಾದದ್ದನ್ನು ನಿಷೇಧಮಾಡಲು ಸಾಧ್ಯವೇ ಇಲ್ಲ. ಹೇಗಾದರೂ ಪ್ರಾಪ್ತವಾಗಿರಬಹುದೆಂದರೆ ಅದ್ವೈತವೂ ಸಹ ಪ್ರಾಪ್ತವಾಗಿರಬಹುದು. ಆದ್ದರಿಂದ ಅಂತಹ ಅದ್ವೈತವನ್ನು 'ದ್ವಾಸುಪರ್ಣಾ' ಎಂಬ ಶ್ರುತಿಯು ನಿಷೇಧಿಸಬಹುದು.

'ಭೇದಃ ಮಿಥ್ಯಾ ಭೇದತ್ವಾತ್' ಎಂಬ ಅನುಮಾನವು ಬಾಧಿತ

**तत्वप्रकाशिका – जीवेशयोः प्रमाणं विनाऽसिद्धेः कथं तदभेदस्य कथंचित् प्राप्तिरिति चेत् समं भेदेऽपि । कुतश्चैतच्छ्रुतेर्मिथ्याभेदवादित्वं सिद्धम् । जीवेशभेदस्य मिथ्यात्वादेवेति चेत् । तदेव कुतः? न हि भेदमिथ्यात्वे प्रत्यक्षमस्ति । न चानुमानं श्रुतिसिद्धार्थबाधकम् । स्वस्यैव तद्विरोधेनाऽप्रामाण्यात् ।**

ಜೀವ ಹಾಗೂ ಈಶ್ವರರು ಪ್ರಮಾಣವಿಲ್ಲದೆ ಸಿದ್ಧವಾಗುವುದಿಲ್ಲ. ಆದ್ದರಿಂದ ಅವರಲ್ಲಿ ಅಭೇದವು ಕಥಂಚಿತ್ ಪ್ರಾಪ್ತವಾಗಬಹುದಲ್ಲವೇ ಎಂದರೆ ಭೇದವಿಷಯದಲ್ಲಿಯೂ ಹೀಗೆಯೇ ಹೇಳುತ್ತೇವೆ. 'ದ್ವಾ ಸುಪರ್ಣಾ' ಎಂಬ ಶ್ರುತಿಗೆ ಮಿಥ್ಯಾಭೇದವಿಷಯತ್ವವನ್ನು ಹೇಗೆ ಸಾಧಿಸುತ್ತೀರಿ? ಜೀವೇಶಭೇದವು ಮಿಥ್ಯಾಭೂತವಾದ್ದರಿಂದಲೇ 'ದ್ವಾ ಸುಪರ್ಣಾ' ಶ್ರುತಿಯು ಮಿಥ್ಯಾಭೂತವಾದ ಭೇದವನ್ನು ಹೇಳುತ್ತಿದೆಯೆಂದು ಆಕ್ಷೇಪಿಸಿದರೆ, ಆ ಜೀವೇಶಭೇದದ ಮಿಥ್ಯಾತ್ವವು ಹೇಗೆ ಸಿದ್ಧವಾಯಿತೆಂದು ಪ್ರಶ್ನಿಸುತ್ತೇವೆ. ಭೇದಮಿಥ್ಯಾತ್ವವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಲು ಸಾಧ್ಯವಿಲ್ಲ. ಅನುಮಾನವು ಶ್ರುತಿಸಿದ್ಧವಾದ ಭೇದವನ್ನು ಬಾಧಿಸುವ ತನಕ ಪ್ರಮಾಣವಾಗುವುದಿಲ್ಲ. ಏಕೆಂದರೆ, ಸ್ವತಃ ತಾನೇ ಅಂದರೆ 'ಭೇದಃ ಮಿಥ್ಯಾ ಭೇದತ್ವಾತ್' ಎಂಬ ಅನುಮಾನವು 'ದ್ವಾ ಸುಪರ್ಣಾ' ಎಂಬ ಶ್ರುತಿಯಿಂದ ಬಾಧಿತವಾಗಿರುವುದರಿಂದ ಅಪ್ರಮಾಣವಾಗಿದೆ.

ಶ್ರುತಿ ಹಾಗೂ ಅನುಮಾನಗಳು ಭಿನ್ನವಿಷಯಕವಲ್ಲ

**तत्वप्रकाशिका – श्रुतेर्भेदमात्रपरत्वादनुमानस्य च तद्भेदस्यैव मिथ्यात्वे प्रवृत्तत्वेन भिन्नविषयत्वान्न विरोध इति चेत्तर्हि प्रत्यक्षस्यौष्ण्यमात्र-**

**विषयत्वादनुमानस्य च तदौष्ण्यस्यैव मिथ्यात्वसाधकत्वेन भिन्नविषयत्वमिति बाधोच्छेदः स्यात् ।**

ಶ್ರುತಿಯು ಕೇವಲ ಭೇದವಿಷಯಕವಾದರೆ ಅನುಮಾನವುಭೇದಮಿಥ್ಯಾತ್ವವನ್ನು ಸಾಧಿಸುತ್ತಿದೆ. ಆದ್ದರಿಂದ ಇವೆರಡು ಭಿನ್ನವಿಷಯಕಗಳಾದ್ದರಿಂದ ಪರಸ್ಪರ ವಿರೋಧವಿಲ್ಲವೆಂದು ಶಂಕಿಸಬಾರದು. ಪ್ರತ್ಯಕ್ಷಪ್ರಮಾಣದಿಂದ ಅಗ್ನಿಯು ಉಷ್ಣವಾಗಿದೆಯೆಂದು ತಿಳಿಯುತ್ತದೆ. ಅನುಮಾನದಿಂದ 'ವಹ್ನಿಃ ಅನುಷ್ಣಃ ದ್ರವ್ಯತ್ವಾತ್' ಎಂಬ ಅನುಮಾನದಿಂದ ಅದೇ ಅಗ್ನಿಯು ಉಷ್ಣವಾಗಿಲ್ಲವೆಂದು ಸಾಧಿಸಬಹುದು. ಇಂತಹ ಸಂದರ್ಭದಲ್ಲಿ ಪ್ರತ್ಯಕ್ಷ ಹಾಗೂ ಅನುಮಾನಗಳು ಭಿನ್ನವಿಷಯಕವಾದ್ದರಿಂದ ಬಾಧವೆಂಬ ಹೇತ್ವಾಭಾಸವೇ ಅಸಿದ್ಧವಾಗಬೇಕಾದೀತು.

ಆಗಮವು ಭೇದಮಿಥ್ಯಾತ್ವವನ್ನು ಹೇಳಿಲ್ಲ

**तत्वप्रकाशिका – न चागमेन भेदमिथ्यात्वसिद्धिः । तदभावादेव । न च तत्सत्यत्वे मानाभावः । स्वरूपाभिधायकस्यैव सत्यत्वे प्रामाण्यात् । अन्यथा तस्य वैयर्थ्यात् ।**

ಇನ್ನು ಆಗಮದಿಂದ ಭೇದಮಿಥ್ಯಾತ್ವವು ಸಿದ್ಧವಾಗುತ್ತದೆಂದು ಹೇಳಬಾರದು. ಏಕೆಂದರೆ ಅಂತಹ ಆಗಮವೇ ಕಾಣಿಸುತ್ತಿಲ್ಲ. ಭೇದಸತ್ಯತ್ವದ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲವೆಂದು ಹೇಳಬಾರದು. ಭೇದಪ್ರತಿಪಾದಕವಾದ ಶ್ರುತಿಗಳೇ ಭೇದಸತ್ಯತ್ವ-ವಿಷಯದಲ್ಲಿಯೂ ಪ್ರಮಾಣಗಳಾಗಿವೆ. ಇಲ್ಲದಿದ್ದರೆ ಶ್ರುತಿಗಳು ಭೇದವನ್ನು ಪ್ರತಿಪಾದಿಸುವ ವಿಷಯದಲ್ಲಿ ಅರ್ಥವೇ ಇರುವುದಿಲ್ಲ.

ವಿಷ್ಣುವೇ ಪರವಿದ್ಯೆಗೆ ವಿಷಯನೆಂದು ಒಪ್ಪಬೇಕು

**तत्वप्रकाशिका – अतो न मिथ्याभेदपरत्वं श्रुतेरित्यलम् । तस्माद् विष्णुरेव द्युभ्वाद्यायतनं परविद्याविषयश्चेति सिद्धम् ।। ७ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् द्युभ्वाद्यधिकरणम् ।।**

ಆದ್ದರಿಂದ 'ಜುಷ್ಟಂ ಯದಾ ಪಶ್ಯತಿ' ಇತ್ಯಾದಿ ಭೇದಪ್ರತಿಪಾದಕವಾದ ಶ್ರುತಿಗಳು ಮಿಥ್ಯಾಭೂತವಾದ ಭೇದವನ್ನುಪ್ರತಿಪಾದಿಸುತ್ತವೆಂದು ಹೇಳಬಾರದು. ಈ ಎಲ್ಲ ಕಾರಣಗಳಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆ. ಪರವಿದ್ಯೆಗೆ ಅವನೇ ವಿಷಯನಾಗಿದ್ದಾನೆಂದು ನಿರ್ಣಯವಾಗುತ್ತದೆ.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ದ್ಯುಭ್ವಾದ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಭಾವದೀಪ

### ಜೀವನು ದ್ಯುಭ್ವಾದ್ಯಾಯತನನಲ್ಲ ಎನ್ನಲು ಮತ್ತೊಂದು ಹೇತು

**भावदीपः – स्थित्यदनाभ्यां च ।। सूत्रे चशब्दादाह – हेत्वन्तरेणेति ।। कर्मफलोपजीवनतद्रहितावस्थानलक्षणभेदकोक्तिरूपहेत्वन्तरेणेत्यर्थः ।। पिप्पलमिति।। अश्वत्थमित्यर्थः ।**

### ಸ್ಥಿತ್ಯದನಾಭ್ಯಾಂ ಚ

ಸೂತ್ರದಲ್ಲಿ "ಚ" ಶಬ್ದವನ್ನು ಹೇಳಿರುವುದರಿಂದ "ಹೇತ್ವಂತರೇಣ" ಎಂದು ಹೇಳಿರುತ್ತಾರೆ. ಅಂದರೆ "ಕರ್ಮಫಲೋಪಜೀವನ ತದ್ರಾಹಿತ್ಯ" ಎಂಬ ಎರಡು ವಿರುದ್ಧವಾದ ಧರ್ಮಗಳನ್ನು ಹೇಳಿರುವಿಕೆ" ಎಂಬ ಮತ್ತೊಂದು ಹೇತುವಿನಿಂದ ಎಂದರ್ಥ. "ಪಿಪ್ಪಲಂ" ಎಂಬ ಶಬ್ದಕ್ಕೆ ಅಶ್ವತ್ಥವೃಕ್ಷ ಎಂದರ್ಥ.

### ಏಕಾದಶಸ್ಕಂಧದಲ್ಲಿ 'ದ್ವಾ ಸುಪರ್ಣಾ' ಶ್ರುತ್ಯರ್ಥ

**भावदीपः – 'तस्येदाहुः' इति वाक्यशेषविरोधनिरासायाह – अस्वाद्वेवेति।।** 'एकस्तयोः खादति पिप्पलान्नमन्यो निरन्नोऽपि बलेन भूयान्'

इत्येकादशस्कन्धवाक्ये अत्तिं विनाप्यदौर्बल्यादिति तात्पर्योक्तिमनुरुद्ध्यार्थमाह – अन्य ईश्वर इत्यादिना ॥

"ತಸ್ಯೇದಾಹುಃ" ಎಂಬ ವಾಕ್ಯಶೇಷದ ವಿರೋಧವನ್ನು ಪರಿಹರಿಸುವುದಕ್ಕಾಗಿ "ಅಸ್ವಾದ್ವೇವಾ" ಎಂದು ಹೇಳಿರುತ್ತಾರೆ. ಅಂದರೆ ಎರಡು ಪಕ್ಷಿಗಳಲ್ಲಿ ಒಂದು ಪಕ್ಷಿ ಅಶ್ವತ್ಥವೃಕ್ಷದ ಫಲವನ್ನು ತಿನ್ನುತ್ತಿದೆ. ಮತ್ತೊಂದು ಅಶ್ವತ್ಥವೃಕ್ಷದ ಫಲವನ್ನು ತಿನ್ನುತ್ತಿಲ್ಲ. ಆದರೂ ಸಹ ಬಹಳವಾಗಿ ಬಲಿಷ್ಠವಾಗಿದೆ. ಎಂಬುದಾಗಿ "ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋऽಪಿ ಬಲೇನ ಭೂಯಾನ್" ಎಂದು ಏಕಾದಶ ಸ್ಕಂಧದ ಭಾಗವತದಲ್ಲಿ ಹೇಳಲಾಗಿದೆ. ಈ ವಾಕ್ಯಕ್ಕೆ ಶ್ರೀಮದಾಚಾರ್ಯರು ತಾತ್ಪರ್ಯದಲ್ಲಿ "ಅತ್ತಿಂ ವಿನಾಪ್ಯದೌರ್ಬಲ್ಯಾತ್" ಎಂದು ವ್ಯಾಖ್ಯಾನಿಸಿದ್ದಾರೆ. ಅದನ್ನು ಅನುಸರಿಸಿ ಪ್ರಕೃತ ಟೀಕಾರಾಯರು "ಅನ್ಯ ಈಶ್ವರ" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

### ತಾತ್ಪರ್ಯಚಂದ್ರಿಕೆಯಲ್ಲಿ ಬುದ್ಧಿಜೀವಪರತ್ವದ ನಿರಾಕರಣೆ

**भावदीपः** – गुहानये 'शुभं पिबति' इति वाक्यानुरोधादर्थान्तरमुक्तम् । भाष्योक्तं सूत्रारूढं दर्शयति – **कर्मेत्यादिना** ॥ अत्र श्रुतेर्बुद्धिजीवपरत्वं चन्द्रिकायां निरस्तम् । विस्तृतं च गुरुपादैः श्रुतितात्पर्यकौमुद्याम् ।

ಗುಹಾಧಿಕರಣದಲ್ಲಿ "ಶುಭಂ ಪಿಬತಿ" ಎಂಬ ಪ್ರಮಾಣವನ್ನು ಉಲ್ಲೇಖಿಸಿದ್ದರು. ಅದಕ್ಕೆ ಈ ಅರ್ಥವು ಮತ್ತೊಂದು ವ್ಯಾಖ್ಯಾನವಾಗಿದೆ ಎಂದು ತಿಳಿಯಬೇಕು. ಭಾಷ್ಯದಲ್ಲಿ ಹೇಳಲ್ಪಟ್ಟ ವಿಚಾರವನ್ನು ಸೂತ್ರಾರೂಢ ಮಾಡುತ್ತಿದ್ದಾರೆ "ಕರ್ಮ" ಇತ್ಯಾದಿ ವಾಕ್ಯದಿಂದ. ಇಲ್ಲಿರುವ ಶ್ರುತಿಯು ಬುದ್ಧಿ ಹಾಗೂ ಜೀವರನ್ನು ಪ್ರತಿಪಾದಿಸಬಹುದಲ್ಲವೆ? ಜೀವೇಶ್ವರರನ್ನೇ ಏಕೆ ಪ್ರತಿಪಾದಿಸಬೇಕು? ಎಂಬ ಶಂಕೆಯನ್ನು ತಾತ್ಪರ್ಯಚಂದ್ರಿಕೆಯಲ್ಲಿ ನಿರಾಕರಿಸಿದ್ದಾರೆ. ಮತ್ತು ಗುರುಗಳು ಮಾಡಿರುವ ಶ್ರುತಿತಾತ್ಪರ್ಯಕೌಮುದಿಯಲ್ಲಿ ಹೆಚ್ಚಿನ ವಿಚಾರವನ್ನು ತಿಳಿಯಬೇಕು.

### 'ಅದನಸ್ಥಿತಿಭ್ಯಾಂ' ಎಂದೇಕೆ ಸೂತ್ರದಲ್ಲಿ ಹೇಳಿಲ್ಲ?

**भावदीपः** – अत्र श्रुतावदनस्यादित्वेन सूत्रेऽप्यदनस्थितिभ्यामित्युक्त्या भाव्यम्, अत आह – **श्रुतीति** ॥ सूत्रे श्रुत्युक्तक्रमोल्लङ्घनमित्यर्थः । 'अभ्यर्हितं पूर्वम्' अल्पाच्तरं पूर्वम्' इति व्याकरणस्मृतेरिति भावः ।

ಈ ಶ್ರುತಿಯಲ್ಲಿ ಅದನವನ್ನು ಮೊದಲು ಹೇಳಲಾಗಿದೆ ಅದಕ್ಕೆ ಅನುಸಾರಿಯಾಗಿ ಸೂತ್ರದಲ್ಲಿ ಅದನಸ್ಥಿತಿಭ್ಯಾಂ ಎಂದು ಹೇಳಬೇಕಿತ್ತಲ್ಲವೆ? ಎಂಬ ಪ್ರಶ್ನೆಗೆ "ಶ್ರುತಿ" ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ. ಸೂತ್ರದಲ್ಲಿ ಶ್ರುತಿಯ ಕ್ರಮವನ್ನು ಉಲ್ಲಂಘಿಸಿದ್ದಾರೆ ಎಂದರ್ಥ. "ಅಭ್ಯರ್ಹಿತಂ ಪೂರ್ವಂ" ಎಂಬುದಾಗಿ ಯಾವುದು ಅಲ್ಪವಾದ ಅಚ್ ಅಕ್ಷರಗಳಿಂದ ಕೂಡಿರುತ್ತದೆಯೋ ಅದೇ ಪದವು ಮೊದಲು ಬರಬೇಕೆಂದು ವ್ಯಾಕರಣದಲ್ಲಿ ಹೇಳಿರುತ್ತಾರೆ.

'ಜುಷ್ಟಂ ಯದಾ ಪಶ್ಯತಿ' ಎಂಬ ಶ್ರುತಿಗೆ ಏನರ್ಥ ?

**भावदीपः** – श्रुतेर्व्यावहारिकभेदपरत्वेन वा व्यावहारिकप्रामाण्येन मिथ्याभेदपरत्वेन वा मिथ्याभेदानुवादित्वेन वाऽन्यथोपपत्तिमाशङ्क्य निराकरोति – **व्यावहारिक इत्यादिना** ।। व्यावहारिकम् अतत्त्वावेदकत्वरूपम्।

ಶ್ರುತಿಯು ವ್ಯಾವಹಾರಿಕವಾದ ಭೇದವನ್ನು ಪ್ರತಿಪಾದಿಸಬಹುದು, ಅಥವಾ ವ್ಯಾವಹಾರಿಕ-ಪ್ರಾಮಾಣ್ಯದಿಂದ ಮಿಥ್ಯಾಭೂತವಾದ ಭೇದವನ್ನು ಪ್ರತಿಪಾದಿಸಬಹುದು. ಅಥವಾ ಮಿಥ್ಯಾಭೂತವಾದ ಭೇದವನ್ನು ಅನುವಾದ ಮಾಡಬಹುದು. ಹೀಗೆ "ಜುಷ್ಟಂ ಯದಾ ಪಶ್ಯತಿ" ಎಂಬ ಶ್ರುತಿಗೆ ಅದ್ವೈತಕ್ಕೆ ವಿರೋಧ ಬಾರದಂತೆ ಅರ್ಥೈಸಬಹುದಲ್ಲವೆ? ಎಂದು ಆಕ್ಷೇಪಿಸಿ ನಿರಾಕರಿಸುತ್ತಿದ್ದಾರೆ 'ವ್ಯಾವಹಾರಿಕಃ' ಇತ್ಯಾದಿ ವಾಕ್ಯದಿಂದ. ವ್ಯಾವಹಾರಿಕವು ಅತತ್ವಾವೇದಕರೂಪವಾಗಿದೆ.

'ವಾಚೋ ಯುಕ್ತೇಃ' ಎಂಬ ಪ್ರಯೋಗ ವ್ಯಾಕರಣ ಸಮ್ಮತ

**भावदीपः** – वाचोयुक्तेरित्येकं पदम् । वाक्यप्रयोगस्येत्यर्थः । 'वाग्दिक्पश्यद्भ्यो युक्तिदण्डहरेषु' इत्यलुक्समासः ।। **वैय्यर्थ्यादिति** ।। 'अप्राप्ते शास्त्रमर्थवद्' इति न्यायादिति भावः ।

"ವಾಚೋ ಯುಕ್ತೇಃ" ಎಂಬುದು ಒಂದೇ ಪದವಾಗಿದೆ. ವಾಕ್ಯಪ್ರಯೋಗದ ಎಂದರ್ಥ. ಏಕೆಂದರೆ 'ವಾಗ್ದಿಕ್ಪಶ್ಯದ್ಭ್ಯೋ ಯುಕ್ತಿದಂಡಹರೇಷು' ಎಂಬ ಸೂತ್ರದಿಂದ ಅಲುಕ್ ಸಮಾಸವಾಗಿದೆ ಅಂದರೆ 'ವಾಚೋ' ಎಂಬಲ್ಲಿರುವ 'ಸುಪ್' ಪ್ರತ್ಯಯವು ಲೋಪವಾಗಿರುವುದಿಲ್ಲ. "ವೈಯರ್ಥ್ಯಾತ್" ಎಂದು ಟೀಕೆಯಲ್ಲಿದೆ. ಅಂದರೆ "ಅಪ್ರಾಪ್ತೇ ಶಾಸ್ತ್ರಮರ್ಥವತ್" ಅಪೂರ್ವವಾದ ವಿಚಾರದಲ್ಲಷ್ಟೇ ಶಾಸ್ತ್ರವು ಪ್ರಮಾಣವಾಗುತ್ತದೆ ಎಂಬ ನ್ಯಾಯವಿರುವುದರಿಂದ ಹೀಗೆ ಹೇಳಿದ್ದಾರೆ.

### ನಿರಾಕರಣೆಗಾಗಿ ಅನುವಾದವಲ್ಲ

**भावदीपः** – यद्वा, अनुवादो ह्यर्थवादवत् स्तुत्यर्थं वा 'दध्ना जुहोति' इतिवत् कचिद्विधानार्थं वा 'नेह नानास्ति किञ्चन' इत्यत्र किञ्चनेतिवन्निषेधार्थं वा । न पक्षत्रयमपि । अदर्शनादित्यर्थः । शङ्ककः स्वाशयं व्यनक्ति – **निषेधायेति** ।।

ಅಥವಾ ಯಾವರೀತಿಯಾಗಿ ಅರ್ಥವಾದವು ಸ್ತುತಿಗೋಸ್ಕರ ಇರುತ್ತದೆಯೋ ಅದರಂತೆ. ಅಥವಾ "ದಧ್ನಾ ಜುಹೋತಿ" ಎಂಬಲ್ಲಿ ದದಿಯನ್ನು ವಿಧಾನ ಮಾಡುವುದಕ್ಕಾಗಿ ಅನುವಾದ ಮಾಡಿರುತ್ತಾರೋ ಅದರಂತೆ ಇಲ್ಲಿಯೂ ಸಹ ವಿಧಾನ ಮಾಡುವುದಕ್ಕಾಗಿ ಅನುವಾದ ಮಾಡಿರಬಹುದು. ಅಥವಾ "ನೇಹ ನಾಸ್ತಿ ಕಿಂಚನ" ಎಂಬ ಶ್ರುತಿಯಲ್ಲಿ ನಿಷೇಧ ಮಾಡುವುದಕ್ಕೋಸ್ಕರ ಇಲ್ಲಿ ಅನುವಾದ ಮಾಡಿರಬಹುದು. ಹೀಗೆ ಮೂರೂ ಪಕ್ಷಗಳನ್ನು ನಿರಾಕರಿಸಿದ್ದಾರೆ. ಏಕೆಂದರೆ ಭೇದವನ್ನು ನಿಷೇಧ ಮಾಡುವ ಯಾವುದೇ ಶ್ರುತಿಗಳು ಕಾಣುಸುತ್ತಿಲ್ಲವೆಂದರ್ಥ. ಆಶಂಕೆ ಮಾಡುವ ಪೂರ್ವಪಕ್ಷಕಾರನು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾನೆ "ನಿಷೇಧಾಯ" ಇತ್ಯಾದಿಯಾಗಿ.

### ಭೇದನಿಷ್ಠಾತ್ವವು ಸಿದ್ಧವಾಗುವುದಿಲ್ಲ

**भावदीपः** – **तादृशी प्राप्तिरिति** ।। आनन्दमये उक्तदिशेति भावः । अङ्गीकृत्य चेदमुक्तम् । वस्तुतो भेदमिथ्यात्वमेव न सिद्धम्, येन तदनुवाद इत्याह – **कृतश्चेति** ।।

"ತಾದೃಶೀ ಪ್ರಾಪ್ತಿಃ" ಅಂದರೆ ಆನಂದಮಯಾಧಿಕರಣದಲ್ಲಿ ಹೇಳಿದ ಪ್ರಕಾರವಾಗಿ ತಿಳಿಯಬೇಕೆಂದು ಅಭಿಪ್ರಾಯ. ವಸ್ತುತಃ ಇದನ್ನು ಅಂಗೀಕರಿಸಿ ಹೇಳಿದ್ದಾರೆ. ವಿಚಾರ ಮಾಡಿದರೆ ಭೇದಮಿಥ್ಯಾತ್ವವೇ ಸಿದ್ಧವಾಗಿರುವುದಿಲ್ಲ. ಹಾಗೆ ಸಿದ್ಧವಾಗಿದ್ದಲ್ಲಿ ಅದು ಅನುವಾದ ರೂಪವೆಂದು ಹೇಳಬಹುದಿತ್ತು. ಇದನ್ನು "ಕೃತಶ್ಚ" ಎಂಬ ವಾಕ್ಯದಿಂದ ನಿರೂಪಿಸುತ್ತಿದ್ದಾರೆ.

'ನಾನುಮಾನಮತಚ್ಛಬ್ದಾತ್' ಎಂಬ ಸೂತ್ರವನ್ನು ಅನುವೃತ್ತಿ ಮಾಡಬೇಕು

**भावदीपः** – 'नानुमानमतच्छब्दाद्' इति सूत्रमत्रानुवर्त्य तस्यानुमानं भेदमिथ्यात्वे मानं न । कुतः अतच्छब्दात् । मिथ्यात्वविरुद्धभेदसत्यत्व-बोधकशब्दादिति वृत्त्यन्तरं मनसि निधायाह – **नचेति** ।।

"ನಾನುಮಾನಮತಚ್ಛಬ್ದಾದ್" ಎಂಬ ಸೂತ್ರವನ್ನು ಇಲ್ಲಿ ಅನುವೃತ್ತಿ ಮಾಡಿಕೊಂಡು ಅಂತಹ ಅನುಮಾನವು ಭೇದಮಿಥ್ಯಾತ್ವ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಏಕೆಂದರೆ "ಅತತ್ ಶಬ್ದಾತ್" 'ಮಿಥ್ಯಾತ್ವಕ್ಕೆ ವಿರುದ್ಧವಾದ ಭೇದ ಸತ್ಯತ್ವವನ್ನು ಪ್ರತಿಪಾದಿಸುವ ಶಬ್ದಗಳು ಇರುವುದರಿಂದ' ಎಂಬುದಾಗಿ ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮನಸ್ಸಿನಲ್ಲಿ ಇಟ್ಟುಕೊಂಡು "ನ ಚ" ಇತ್ಯಾದಿ ಟೀಕಾ ಗ್ರಂಥವು ಹೊರಟಿದೆ.

ಮಿಥ್ಯಾತ್ವಸಾಧಕ ಅನುಮಾನಕ್ಕೆ ಶ್ರುತಿವಿರೋಧ

**भावदीपः** – अनुमानं 'भेदो मिथ्या भेदत्वाद्' इत्यनुमानमित्यर्थः । एतेन सर्वत्र प्रसिद्धेति नयोक्तं 'द्वा सुपर्णा' इत्यादिश्रुतिविरोधाच्चेत्युक्तं विवृतं ध्येयम् । अतच्छब्दादित्यस्य अनुमानमूलभऊतभेदमिथ्यात्वबोधक-शब्दस्याभावादित्यप्यर्थान्तरमुपेत्याह – **तदभावादेवेति** ।।

ಅನುಮಾನಂ ಎಂದರೆ "ಭೇದೋ ಮಿಥ್ಯಾ ಭೇದತ್ವಾದ್" ಎಂಬ ಅನುಮಾನ ಎಂದರ್ಥ. ಹೀಗೆ ಹೇಳಿದ್ದರಿಂದ ಸರ್ವಗತತ್ವಾಧಿಕರಣದಲ್ಲಿ ಹೇಳಲ್ಪಟ್ಟ "ದ್ವಾ ಸುಪರ್ಣಾ" ಇತ್ಯಾದಿ ಶ್ರುತಿಯ ವಿರೋಧವೂ ಸಹ ಅದ್ವೈತವಾದಿಗಳಿಗೆ ಬರುತ್ತದೆ ಎಂದು ಹೇಳಿದಂತಾಯಿತು. 'ಅತಃ' ಎಂಬ ಪದಕ್ಕೆ ಅನುಮಾನಕ್ಕೆ ಮೂಲಭೂತವಾದ ಭೇದ ಮಿಥ್ಯಾತ್ವ ಪ್ರತಿಪಾದಕವಾದ ಶಬ್ದವಿಲ್ಲದ ಕಾರಣ ಎಂಬ ಮತ್ತೊಂದು ಬಗೆಯ ಅರ್ಥವನ್ನು ಅಂಗೀಕರಿಸಿ "ತದಭಾವಾದೇವ" ಎಂದು ಟೀಕೆಯಲ್ಲಿ ಹೇಳಿರುತ್ತಾರೆ.

ಪರಪಕ್ಷದಲ್ಲಿ ಸಾಧಕಪ್ರಮಾಣಗಳಿಲ್ಲ

**भावदीपः** – **अत इति** ।। श्रुतेरप्रामाण्यापत्तेर्मिथ्यात्वसाधकाभावात् स्वतःप्रामाण्येन स्वबोध्यस्य सत्यत्वप्राप्तेश्चेत्यर्थः ।। **तस्मादिति** ।। आत्म-

**श्रुत्यमृतसेतुत्वलिङ्गरूपसाधकभावात् तच्छब्दरूपबाधकाभावात् परपक्षे साधकाभावाद् भेदभेदकयोरुक्त्याऽभेदायोगाच्चेति सर्वसूत्रहेत्वंशार्थः।**

''ಅತಃ'' ಎಂದರೆ ಶ್ರುತಿಗೆ 'ಅಪ್ರಾಮಾಣ್ಯದೋಷವು ಬರಬೇಕಾದ್ದರಿಂದ' 'ಮಿಥ್ಯಾತ್ವಸಾಧಕವಾದ ಪ್ರಮಾಣಗಳು ಇಲ್ಲದ್ದರಿಂದ' 'ಪ್ರಾಮಾಣ್ಯಸ್ವತಸ್ತ್ವವಿರುವುದರಿಂದ ಸ್ವಬೋಧ್ಯವಾದ ಅರ್ಥವು ಸತ್ಯವೇ ಆಗಿರುವುದರಿಂದ' ಎಂಬುದಾಗಿ ಮೂರುಬಗೆಯ ಅರ್ಥವನ್ನು ತಿಳಿಯಬೇಕು. ''ತಸ್ಮಾತ್'' ಎಂದರೆ ಆತ್ಮಶ್ರುತಿ, ಅಮೃತತ್ವ ಎಂಬ ಸಾಧಕ ಪ್ರಮಾಣಗಳು ಇರುವುದರಿಂದ ಮತ್ತು ''ತತ್'' ಶಬ್ದವೆಂಬ ಬಾಧಕಪ್ರಮಾಣಗಳು ಇಲ್ಲದ್ದರಿಂದ ಮತ್ತು ಪರಪಕ್ಷದಲ್ಲಿ ಸಾಧಕಪ್ರಮಾಣಗಳು ಇಲ್ಲದ ಕಾರಣ ಮತ್ತು ಭೇದವು ಯುಕ್ತವಾಗುವುದರಿಂದ ಅಭೇದವು ಅಯುಕ್ತವಾಗುವುದರಿಂದ ಎಂಬುದಾಗಿ ಎಲ್ಲ ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಗಳು ಇರುವುದರಿಂದ ಎಂದರ್ಥ.

### ತಾತ್ಪರ್ಯಚಂದ್ರಿಕೆಯಲ್ಲಿ ಸೂತ್ರಾರ್ಥಗಳ ಸ್ವಾರಸ್ಯ

**भावदीपः – विष्णुरेवेत्यादिप्रतिज्ञार्थः । परविद्येति भाष्योपसंहारः । अत्र सूत्राक्षरस्वारस्यादिकं चन्द्रिकायां व्यक्तमुक्तम् । तेन कस्यचिन्नूतनस्य दूषणावकाशो नेति ज्ञेयम् ।। ७ ।।**

।। इति श्रीराघवेन्द्रयतिकृते भावदीपे द्युभ्वाद्यधिकरणम् ।।

''ವಿಷ್ಣುರೇವ'' ಎಂಬುದು ಪ್ರತಿಜ್ಞೆಯಾಗಿದೆ. ''ಪರವಿದ್ಯಾ'' ಎಂಬುದಾಗಿ ಭಾಷ್ಯವನ್ನು ಉಪಸಂಹಾರ ಮಾಡಿದ್ದಾರೆ. ಈ ಅಧಿಕರಣದ ಸೂತ್ರಾರ್ಥಗಳ ಸ್ವಾರಸ್ಯವನ್ನು ಚಂದ್ರಿಕೆಯಿಂದ ತಿಳಿಯಬೇಕು. ಹಾಗೆ ತಿಳಿಯುವುದರಿಂದ ಕೆಲವರು ಆಪಾದಿಸುವ ಹೊಸ ದೋಷಗಳಿಗೆ ಅವಕಾಶವಿಲ್ಲವೆಂಬ ವಿಚಾರವು ಮನದಟ್ಟಾಗುತ್ತದೆ.

ವಿಶೇಷವಿಚಾರ - 'ಸ್ಥಿತ್ಯದನಾಭ್ಯಾಂ ಚ' ಎಂಬುದು ಏಳನೆಯ ಸೂತ್ರ. ಭೇದವ್ಯಪದೇಶದ ವಿಷಯದಲ್ಲಿ ಕೇವಲ ಶ್ರುತಿಯು ಮಾತ್ರ ಪ್ರಮಾಣವಲ್ಲ. ಲಿಂಗವೂ ಸಹ ಪ್ರಮಾಣವಾಗಿದೆಯೆಂದು ಈ ಸೂತ್ರವು ಸಮರ್ಥಿಸುತ್ತಿದೆ. ಆದ್ದರಿಂದಲೇ 'ಚ' ಶಬ್ದವನ್ನು ಸೂತ್ರಕಾರರು ಹೇಳಿದ್ದಾರೆ.

ವಾಸ್ತವಿಕವಾಗಿ ಶ್ರುತಿಯಲ್ಲಿ ಅದನವನ್ನು ಮೊದಲು ಹೇಳಿರುವುದರಿಂದ ಸೂತ್ರದಲ್ಲಿಯೂ ಅದನವನ್ನೇ ಮೊದಲು ಹೇಳಬೇಕಿತ್ತು. ಆದರೆ ಸ್ಥಿತಿಯು ಈಶ್ವರನಿಗೆ ಸಂಬಂಧಿಸಿದ್ದರಿಂದ ಪ್ರಧಾನವಾಗಿದೆ. ಅಪ್ರಧಾನವನ್ನು ಹೇಳುವುದಕ್ಕಿಂತ ಮೊದಲು ಪ್ರಧಾನವನ್ನು ಹೇಳುವುದು ಸಮಂಜಸವೆಂಬ ಅಭಿಪ್ರಾಯದಿಂದ ಸ್ಥಿತಿಯನ್ನೇ ಮೊದಲು ಹೇಳಿರುತ್ತಾರೆ. ಅಥವಾ 'ಅದನ' ಶಬ್ದಕ್ಕಿಂತ 'ಸ್ಥಿತಿ' ಶಬ್ದವು ಕಮ್ಮಿ ಅಚಕ್ಷರಗಳಿಂದ ಕೂಡಿದೆ. ಆದ್ದರಿಂದ 'ಅಲ್ಪಾಚ್‌ತರಂ ಪೂರ್ವಮ್' ಎಂಬ ಸೂತ್ರಾನುಸಾರ ಸ್ಥಿತಿಶಬ್ದಕ್ಕೆ ಪ್ರಾಥಮ್ಯವು ಯುಕ್ತವಾಗಿದೆ.

ಆಕ್ಷೇಪ - 'ದ್ವಾ ಸುಪರ್ಣಾ' ಎಂಬ ಶ್ರುತಿಯಲ್ಲಿ ಸ್ಥಿತಿ ಹಾಗೂ ಅದನಗಳೆಂಬ ಲಿಂಗಗಳು ಕೇಳಿಸುತ್ತಿವೆ. ಈ ಲಿಂಗಗಳ ಬಲದಿಂದ ಜೀವ ಹಾಗೂ ಬ್ರಹ್ಮರಿಗೆ ಭೇದವು ಸಿದ್ಧವಾಗುತ್ತದೆಂದು ಹೇಳಿದಿರಿ. ಆದರೆ ಇವು ಬುದ್ಧಿ ಹಾಗೂ ಜೀವರ ಧರ್ಮವಾದ್ದರಿಂದ ಇವೆರಡರ ಭೇದವೇ ಶ್ರುತಿಗೆ ಸಮ್ಮತವಾಗಿದೆ. ಆದ್ದರಿಂದ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಬುದ್ಧಿ ಹಾಗೂ ಜೀವ ವಿಷಯಕವೆಂದು ಹೇಳಬೇಕು. ಆದ್ದರಿಂದಲೇ ಪೈಂಗಿರಹಸ್ಯದ ಬ್ರಾಹ್ಮಣವಾಕ್ಯದಲ್ಲಿ 'ತಾವೇತೌ ಸತ್ವಕ್ಷೇತ್ರಜ್ಞೌ' ಎಂಬುದಾಗಿ ಈ ಮಂತ್ರಕ್ಕೆ ಸತ್ವ ಹಾಗೂ ಕ್ಷೇತ್ರಜ್ಞರು ವಿಷಯರಾಗಿದ್ದಾರೆಂದು ವ್ಯಾಖ್ಯಾನಿಸಲಾಗಿದೆ. 'ಸತ್ವ' ಎಂದರೆ ಬುದ್ಧಿಯೆಂದರ್ಥ, 'ಕ್ಷೇತ್ರಜ್ಞ' ಎಂದರೆ ಜೀವನೆಂದರ್ಥ. ಒಟ್ಟಾರೆ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಬುದ್ಧಿಜೀವವಿಷಯಕವೇ ಆಯಿತು.

ಸಮಾಧಾನ - ಅದ್ವೈತಿಗಳ ಈ ಆಕ್ಷೇಪವು ತಪ್ಪು. ಪೈಂಗಿ ರಹಸ್ಯ ಬ್ರಾಹ್ಮಣದಲ್ಲಿ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಸತ್ವ ಹಾಗೂ ಕ್ಷೇತ್ರಜ್ಞಗಳನ್ನು ವಿಷಯೀಕರಿಸುತ್ತಿದೆಯೆಂದು ಹೇಳಲಾಗಿದೆ; ಹೊರತು ಬುದ್ಧಿ ಹಾಗೂ ಜೀವರನ್ನು ವಿಷಯೀಕರಿಸುತ್ತಿದೆಯೆಂದು ಹೇಳಿಲ್ಲ. ಸತ್ವಶಬ್ದಕ್ಕೆ ಬುದ್ಧಿಯೆಂಬ ವ್ಯಾಖ್ಯಾನವು ಅಯುಕ್ತ; ಹೊರತಾಗಿ ಜೀವನೆಂದೇ ಅರ್ಥ. ಏಕೆಂದರೆ ರಘುವಂಶದಲ್ಲಿ 'ಊನಂ ನ ಸತ್ವೇಷ್ವಧಿಕೋ ಬಬಾಧೇ' ಎಂಬುದಾಗಿ ಅನೇಕ ಪ್ರಾಣಿಗಳಿರುವಾಗ ಸಣ್ಣಪ್ರಾಣಿಗಳನ್ನು ದೊಡ್ಡಪ್ರಾಣಿಗಳು ಹಿಂಸಿಸಲಿಲ್ಲ ಎಂದು ಹೇಳಲಾಗಿದೆ. ಇಲ್ಲಿರುವ ಸತ್ವಶಬ್ದಕ್ಕೆ ಪ್ರಾಣಿಯೆಂದರ್ಥ. ಮತ್ತು ಅಮರಕೋಶದಲ್ಲಿಯೂ 'ಸತ್ವಮಸ್ತ್ರೀ ತು ಜಂತುಷು' ಎಂಬುದಾಗಿ 'ಜಂತು' ಎಂಬರ್ಥದಲ್ಲಿ ಸತ್ವಶಬ್ದವನ್ನು ಪ್ರಯೋಗಿಸಲಾಗಿದೆ. 'ಜಂತು' ಎಂದರೆ ಜೀವನೆಂದೇ ಅರ್ಥ. ಮತ್ತು 'ಸತ್ವಂ ಜೀವ ಇತಿ ಪ್ರೋಕ್ತಃ' ಎಂಬ ಸ್ಮೃತಿಪ್ರಮಾಣವೂ ಇರುವುದರಿಂದ ಸತ್ವಶಬ್ದಕ್ಕೆ ಜೀವನೆಂಬ ವ್ಯಾಖ್ಯಾನವು ಅನಿವಾರ್ಯ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ದ್ಯುಭ್ವಾದ್ಯಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

ತಂತ್ರದೀಪಿಕೆಯಲ್ಲಿ ದ್ಯುಭ್ವಾದ್ಯಧಿಕರಣದ ಸೂತ್ರಗಳು

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

अथ प्रथमाध्यायस्य तृतीयः पादः

## द्युभ्वाद्यधिकरणम् (१)

अत्र पादे उभयत्र प्रसिद्धनामलिङ्गात्मकद्विविधशब्दसमन्वय उच्यते-

।। द्युभ्वाद्यायतनं स्वशब्दात् ।। १-३-१ ।।

ಈ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳನ್ನು ಹಾಗೂ ಲಿಂಗಾತ್ಮಕ-ಶಬ್ದಗಳನ್ನು ಸಮನ್ವಯ ಮಾಡಲಾಗಿದೆ.

'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ '

अत्र नये तादृशं सर्वाधारत्वलिङ्ग समन्वीयते ।

ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ ಸರ್ವಾಧಾರತ್ವ ಎಂಬ ಲಿಂಗದ ಸಮನ್ವಯವನ್ನು ಮಾಡಲಾಗಿದೆ.

तत्त्वित्यस्ति । ''यस्मिन् द्यौः पृथिवी चान्तरिक्षम्'' इत्यादिनोक्तं द्युभ्वाद्यायतनं ततु ब्रह्मैव । न तु प्रधानं वायुरुद्रजीवा वा । स्वशब्दात् स्वेति शब्दः स्वशब्दस्तस्मात् । श्रुतौ स्वशब्दाभावात् तत्पर्यायात्मशब्दो

**ग्राह्यः । सभाराजेत्यत्र पाणिनीये राजशब्दवत् । तमेवैकं जानथ आत्मानमित्यात्मशब्दादित्यर्थः ।**

ಸೂತ್ರಾರ್ಥ ಹೀಗಿದೆ -- "ತತ್ತು" ಎಂಬ ಪದಗಳು ಅನುವೃತ್ತವಾಗಿವೆ. 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮ್' ಇತ್ಯಾದಿಶ್ರುತಿಯಿಂದ ಹೇಳಲ್ಪಟ್ಟ ದ್ಯುಭ್ವಾದ್ಯಾಯತನನು ತತ್ತು = ಬ್ರಹ್ಮನೇ ಆಗಿದ್ದಾನೆ. ಪ್ರಧಾನವಾಗಲೀ, ವಾಯು, ರುದ್ರ, ಜೀವ ಮೊದಲಾದವರಾಗಲೀ ದ್ಯುಭ್ವಾದ್ಯಾಯತನರಾಗಿಲ್ಲ. ಏಕೆಂದರೆ ಸ್ವಶಬ್ದಾತ್ = ಸ್ವ ಎಂಬ ಶಬ್ದವೇ ಸ್ವಶಬ್ದ. ಆದರಿಂದ ಎಂದರ್ಥ. ವಸ್ತುತಃ ಶ್ರುತಿಯಲ್ಲಿ ಸ್ವ ಎಂಬ ಶಬ್ದವು ಇರುವುದಿಲ್ಲ. ಆದ್ದರಿಂದ ಅದಕ್ಕೆ ಪರ್ಯಾಯಪದವಾದ ಆತ್ಮಶಬ್ದವನ್ನು ಸ್ವೀಕರಿಸಬೇಕು.

'ಸಭಾ ರಾಜಾಮನುಷ್ಯಪೂರ್ವಾ' (ಪಾ.ಸೂ.೨/೪/೨೩) ಎಂಬ ಪಾಣಿನಿಸೂತ್ರದಲ್ಲಿ ರಾಜಾ ಎಂಬ ಶಬ್ದದಿಂದ ಅದರ ಪರ್ಯಾಯಪದವನ್ನು ಸ್ವೀಕರಿಸದಂತೆ ಇಲ್ಲಿಯೂ ಸಹ ತಿಳಿಯಬೇಕು. 'ತಮೇವೈಕಂ ಜಾನಥ ಆತ್ಮಾನಮ್' ಎಂಬುದಾಗಿ ಆತ್ಮಶಬ್ದವಿರುವುದರಿಂದ ಎಂದರ್ಥ.

**आत्मशब्दादिति वाच्ये स्वेत्युक्तिः स्वस्य ब्रह्मण एव शब्द इत्यपि विग्रहेणासाधारण्यं ज्ञापयितुम् । तच्छब्दादित्युक्तावपि शब्दविशेषो न ज्ञापितः स्यादिति ।**

ಹಾಗಾದರೆ ಸೂತ್ರದಲ್ಲಿ 'ಆತ್ಮಶಬ್ದಾತ್' ಎಂದೇ ಹೇಳಬೇಕಿತ್ತು. ಆದರೂ ಸಹ 'ಸ್ವಶಬ್ದಾತ್' ಎಂದು ಹೇಳಲು ಕಾರಣವಿದೆ. ಸ್ವಸ್ಯ = ತನಗೆ ಅಂದರೆ ಬ್ರಹ್ಮನಿಗೇ ಸಂಬಂಧಪಟ್ಟ ಶಬ್ದ ಎಂಬ ವಿಗ್ರಹದಿಂದ ಆತ್ಮಶಬ್ದದ ಅಸಾಧಾರಣ್ಯವನ್ನು ಸೂಚಿಸಲು ಸ್ವಶಬ್ದಾತ್ ಎಂದು ಹೇಳಿದ್ದಾರೆ. ವಸ್ತುತಃ ಆತ್ಮಶಬ್ದವನ್ನು ಸಂಗ್ರಹಿಸಲು ತಚ್ಛಬ್ದಾತ್ ಎಂದೂ ಸಹ ಹೇಳಬಹುದಿತ್ತು. ಆದರೆ ಅದರಿಂದ ಶಬ್ದವಿಶೇಷವಾದ ಆತ್ಮಶಬ್ದವು ಸೂಚಿತವಾಗುವುದಿಲ್ಲ. ಅದಕ್ಕೋಸ್ಕರ 'ಸ್ವಶಬ್ದಾತ್' ಎಂದೇ ಹೇಳಿರುತ್ತಾರೆ.

**जायमानत्वरूपजीवलिङ्गादात्मशब्दः अमुख्यः किं न स्यादित्यत आह-**

**।। मुक्तोपसृप्यव्यपदेशात् ।। १-३-२ ।।**

